# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಜಗಳೂರು ಮಹಮ್ಮದ್ ಇಮಾಮ್

Eminent Parliamentarian Series

# JAGALUR MOHAMMED IMAM



ರಚನೆ: ಪ್ರೊ. ಜೆ.ಎಸ್. ಸದಾನಂದ್,
ಕುವೆಂಪು ವಿಶ್ವವಿದ್ಯಾಲಯ

ಮೊದಲ ಮುದ್ರಣ
ಮೇ, ೨೦೦೦ - ೧,೦೦೦ ಪ್ರತಿಗಳು

ಮುಖಪುಟ ವಿನ್ಯಾಸ:
ಸರ್ಕಾರಿ ಮುದ್ರಣಾಲಯ, ಬೆಂಗಳೂರು

ಪ್ರಕಟಣೆ
ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನ ಸೌಧ, ಬೆಂಗಳೂರು-೫೬೦ ೦೦೧.

# ಪೀಠಿಕೆ

ದೇಶದ ಸ್ವಾತಂತ್ರ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದು ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರ ತಂದಿರುತ್ತಾರೆ. ಅವುಗಳಲ್ಲಿ ಡಾ: ಬಿ.ಆರ್. ಅಂಬೇಡ್ಕರ್, ಡಾ: ರಾಂಮನೋಹರ ಲೋಹಿಯಾ ಮತ್ತು ಶೇಕ್ ಮಹಮದ್ ಅಬ್ದುಲ್ ಮತ್ತು ಕೃಷ್ಣಮೆನನ್ ಮೊದಲಾದ ಗಣ್ಯರ ಬಗ್ಗೆ ಆಂಗ್ಲ ಭಾಷೆಯಲ್ಲಿ ಪ್ರಕಟವಾಗಿದ್ದ ಕಿರುಹೊತ್ತಿಗೆಗಳನ್ನು ನಾವು ಕನ್ನಡದಲ್ಲಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇನೆ.

ಹಾಗೆಯೇ, ಸಂಸದೀಯ ಪಟುಗಳಾಗಿದ್ದ ರಾಜ್ಯದ ಪ್ರತಿಭಾವಂತ ಅನೇಕ ಮಹನೀಯರ ಕುರಿತ ಕಿರುಹೊತ್ತಿಗೆಗಳನ್ನು ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು ಈ ಕಾರ್ಯವನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ವಹಿಸಲಾಗಿದೆ. ಈ ಉಪ ಸಮಿತಿಯು ಕಾರ್ಯ ಪ್ರವೃತ್ತವಾಗಿ ರಾಜ್ಯ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ ಹಾಗೂ ಇನ್ನಿತರ ಸಂಸದೀಯ ಪಟುಗಳ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಈಗ ಈ ಮಾಲಿಕೆಯಡಿಯಲ್ಲಿ ಕುವೆಂಪು ವಿಶ್ವವಿದ್ಯಾನಿಲಯದ ಪ್ರೊ. ಜೆ.ಎಸ್. ಸದಾನಂದ್ ಅವರು ರಚಿಸಿರುವ ಶ್ರೀ ಜಗಳೂರು ಮಹಮ್ಮದ್ ಇಮಾಮ್ ಇವರ ಬಗೆಗಿನ ಪ್ರತಿಯನ್ನು ತಮ್ಮ ಮುಂದಿಡಲು ಹೆಮ್ಮೆ ಎನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಈ ಲೇಖಕರಿಗೆ ಹಾಗೂ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ಡಿ.ಬಿ. ಕಲ್ಮಣಕರ್,
ಸಭಾಪತಿ,
ಕರ್ನಾಟಕ ವಿಧಾನ ಪರಿಷತ್ತು.

ಎಂ.ವಿ. ವೆಂಕಟಪ್ಪ,
ಸಭಾಧ್ಯಕ್ಷರು,
ಕರ್ನಾಟಕ ವಿಧಾನ ಸಭೆ.

# ಅರಿಕೆ

ಕರ್ನಾಟಕದ ಪ್ರತಿಭಾವಂತ ಸಂಸದೀಯ ಪಟುಗಳನ್ನು ಕುರಿತು ಕಿರು ಹೊತ್ತಿಗೆಗಳನ್ನು ತರುವ ಕಾರ್ಯಕ್ರಮವನ್ನು ಕರ್ನಾಟಕ ರಾಜ್ಯದ ವಿಧಾನಮಂಡಲದ ಸಚಿವಾಲಯದವರು ಹಮ್ಮಿಕೊಂಡಿರುವುದು ಒಂದು ಅಭಿನಂದನಾರ್ಹವಾದ ಕಾರ್ಯ ಕರ್ನಾಟಕದ ಏಳಿಗೆಗೆ ಸಾಕಷ್ಟು ದುಡಿದ ಮಹನೀಯರುಗಳನ್ನು ಈ ಮೂಲಕ ಮುಂದಿನ ಜನಾಂಗದವರಿಗೆ ನಾವು ಪರಿಚಯಿಸಬಹುದು. ಈ ನಿಟ್ಟಿನಲ್ಲಿ ಶ್ರೀ ಜಗಳೂರು ಮಹಮ್ಮದ್ ಇಮಾಮರ ವ್ಯಕ್ತಿತ್ವ ಹಾಗೂ ಸಾಧನೆಗಳನ್ನು ಪರಿಚಯಿಸುವ ಹೊಣೆಗಾರಿಕೆಯನ್ನು ನನ್ನ ಮೇಲೆ ಹೊರಿಸಿರುವುದಕ್ಕೆ ನಾನು ಸಚಿವಾಲಯಕ್ಕೆ ಕೃತಜ್ಞನಾಗಿದ್ದೇನೆ.

ಶ್ರೀ ಜಗಳೂರು ಮಹಮ್ಮದ್ ಇಮಾಮರದು ಒಂದು ವಿಶೇಷ ವ್ಯಕ್ತಿತ್ವ ಮಹಾರಾಜರ ಕಾಲದಿಂದಲೂ ಸಾರ್ವಜನಿಕ ಜೀವನದಲ್ಲಿ ತಮ್ಮನ್ನು ತೊಡಗಿಸಿಕೊಂಡ ಇಮಾಮರು ಮೈಸೂರು ಸಂಸ್ಥಾನದ ಅಭಿವೃದ್ಧಿ ಕಾರ್ಯಗಳಿಗೆ, ನಂತರ ಕರ್ನಾಟಕ ಏಕೀಕರಣಕ್ಕೆ, ಸಾಕ್ಷಿಯಾಗಿ ನಿಂತವರು; ಬಹು ದೀರ್ಘಕಾಲದ ಸಾರ್ವಜನಿಕ ಜೀವನದಲ್ಲಿ ಅವರು ಎಂದೂ ಯಾರ ಮನವನ್ನು ನೋಯಿಸಿದವರಲ್ಲಿ ಕರ್ನಾಟಕ ಅದರಲ್ಲೂ ಚಿತ್ರದುರ್ಗ ಜಿಲ್ಲೆಯ ಹಲವಾರು ಅಭಿವೃದ್ಧಿ ಕಾರ್ಯಗಳಿಗೆ ಕಾರಣಕರ್ತರಾದವರು ಅವರು ಅಂತಹ ವ್ಯಕ್ತಿಯ ಜೀವನದಿಂದ ಓದುಗರು ಸ್ಪೂರ್ತಿ ಪಡೆದರೆ ನನ್ನ ಶ್ರಮ ಸಾರ್ಥಕವಾದಂತೆ.

ಈ ಹೊತ್ತಿಗೆಯನ್ನು ಹೊರತರಲು ಸಹಾಯಕರಾದ ಕರ್ನಾಟಕ ವಿಧಾನಮಂಡಲದ ಗ್ರಂಥಾಲಯ ಉಪಸಮಿತಿಗೆ ನಾನು ಕೃತಜ್ಞನಾಗಿದ್ದೇನೆ. ಈ ಕಾರ್ಯದಲ್ಲಿ ನನಗೆ ಸಾಕಷ್ಟು ಪ್ರೋತ್ಸಾಹ ನೀಡಿದ ಕುವೆಂಪು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಪ್ರೊ. ಎಸ್. ಪಿ. ಹೀರೇಮಠ ಅವರಿಗೆ ಹಾಗೂ ಈ ಕಾರ್ಯದಲ್ಲಿ ನನಗೆ ಬಹಳಷ್ಟು ಸಹಾಯ ಮಾಡಿದ ಹೊಳೆಹೊನ್ನೂರು ಪ್ರಥಮ ದರ್ಜೆ ಕಾಲೇಜಿನ ರಾಜ್ಯಶಾಸ್ತ್ರ ಉಪನ್ಯಾಸಕರಾದ ಶ್ರೀ ಕುಮಾರ್‌ರವರಿಗೂ ನಾನು ಋಣಿಯಾಗಿದ್ದೇನೆ.

ಪ್ರೊ. ಜೆ.ಎಸ್. ಸದಾನಂದ್,
ಜ್ಞಾನ ಸಹ್ಯಾದ್ರಿ,
ಕುವೆಂಪು ವಿಶ್ವವಿದ್ಯಾನಿಲಯ.

ದಿನಾಂಕ: ಮೇ, 2000

# ಪ್ರತಿಭಾವಂತ ಸಂಸದೀಯ ಪಟು

# ಜಗಳೂರು ಮಹಮ್ಮದ್ ಇಮಾಂ

## ಪರಿವಿಡಿ

### ಭಾಗ - 1

### ಬದುಕು ಮತ್ತು ರಾಜಕೀಯ



### ಭಾಗ - 2

### ಪ್ರತಿಭಾವಂತ ಸಂಸದೀಯ ಪಟು

# ಭಾಗ - 3

## ಪ್ರಮುಖ ಚಿಂತನೆಗಳು

# ಭಾಗ - 1

## ಬದುಕು ಮತ್ತು ರಾಜಕೀಯ

## ಶ್ರೀ ಜಗಳೂರು ಮಹಮ್ಮದ್ ಇಮಾಮ್ : ಪರಿಚಯ

ಹಳೆ ಮೈಸೂರು ರಾಜ್ಯದ ಚಿತ್ರದುರ್ಗ ಜಿಲ್ಲೆಯು ಸಮಾಜಕ್ಕೆ ಹಲವು ಗಣ್ಯ ವ್ಯಕ್ತಿಗಳನ್ನು ನೀಡಿದೆ. ಶ್ರೀ ಜಗಳೂರು ಮಹಮ್ಮದ್ ಇಮಾಮ್ (ಜಿಲ್ಲೆಯಲ್ಲಿ ಇಮ್ಮಣ್ಣ ಎಂದೇ ಪ್ರಸಿದ್ಧಿಯಾದ) ಅದರಲ್ಲೊಬ್ಬರು.

ಶ್ರೀ ಇಮಾಂರವರು ಹುಟ್ಟಿದ್ದು 15ನೇ ಫೆಬ್ರವರಿ 1892 ರಂದು ಚಿತ್ರದುರ್ಗ ಜಿಲ್ಲೆಯ ಜಗಳೂರು ತಾಲ್ಲೂಕಿನ ಮಾಕೀನಹಳ್ಳಿಯಲ್ಲಿ ಸಾಹುಕಾರ್ ಬಡೇ ಸಾಬ್ ಅವರ ಎರಡನೇ ಮಗನಾಗಿ ಅವರು ಜನಿಸಿದರು.

ತಮ್ಮ ಪ್ರಾಥಮಿಕ ಶಿಕ್ಷಣವನ್ನು ಜಗಳೂರಿನಲ್ಲಿ ಮುಗಿಸಿದ ಇಮಾಂರವರು ಬಹುಶಃ ಜಗಳೂರು ತಾಲ್ಲೂಕಿನಿಂದ ಪದವಿ ಪಡೆದ ಮೊದಲ ವಿದ್ಯಾರ್ಥಿ. ಅವರು 1918ರಲ್ಲಿ ಭೂಗರ್ಭಶಾಸ್ತ್ರವನ್ನು ವಿಶೇಷ ಪರಿಣಿತ ವಿಷಯವನ್ನಾಗಿ ಆರಿಸಿಕೊಂಡು ಬಿ.ಎ ಪದವಿಯನ್ನು ಪಡೆದರು. ನಂತರ ಮದ್ರಾಸ್‌ಗೆ ತೆರಳಿ 1920ರಲ್ಲಿ ಕಾನೂನು ಪಧವೀದರರಾದರು. 1923ರಲ್ಲಿ ಅವರ ವಿವಾಹವಾಯಿತು. ಅವರಿಗೆ ರಾಜಕೀಯ ಹಾಗೂ ಸಾರ್ವಜನಿಕ ಜೀವನದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎನಿಸಿದ್ದು 1924ರಲ್ಲಿ ತಮ್ಮ ಗೆಳೆಯರೊಂದಿಗೆ ಬೆಳಗಾಂನಲ್ಲಿ ನಡೆದ ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಮಹಾಧಿವೇಶನದಲ್ಲಿ ಭಾಗವಹಿಸಿದಾಗ ಅಲ್ಲಿ ಗಾಂಧೀಜಿಯವರು ಮಾಡಿದ ಭಾಷಣದಿಂದ ಅವರು ಪ್ರೇರಿತರಾದರು. ಆದರೆ ಅವರು ಕಾಂಗ್ರೆಸ್ ಪಕ್ಷವನ್ನು ಸೇರಲಿಲ್ಲ.

ಶ್ರೀ ಇಮಾಂರವರು ಮೊದಲು ರಾಜಕೀಯ ಪ್ರವೇಶ ಮಾಡಿದ್ದು ಜಗಳೂರು ನಗರಸಭಾಧ್ಯಕ್ಷರಾಗಿ ಆಯ್ಕೆಯಾಗುವ ಮೂಲಕ. ಅವರು ಆಗ ಸಲ್ಲಿಸಿದ ಕೊಡುಗೆಗಳಲ್ಲಿ ಕೆಲವು ನಮಗೆ ಅಲ್ಲಿ ಈಗಲೂ ಕಾಣಸಿಗುತ್ತವೆ. ನಂತರ ಅವರು ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿ ಆಯ್ಕೆಯಾದರು. ಅವರು ಆಗ ಸಲ್ಲಿಸಿದ ಸೇವೆಯ ಮೈಲಿಗಲ್ಲುಗಳನ್ನು ಈಗಲೂ ನಾವು ನೋಡಬಹುದು. ಇಮಾಮ್‌ರ ಕಾರ್ಯಕ್ಷಮತೆಯನ್ನು ನೋಡಿ ಮೆಚ್ಚಿಕೊಂಡ ಮೈಸೂರಿನ ಮಹಾರಾಜರಾದ ಶ್ರೀ ಕೃಷ್ಣದೇವರಾಯ ಒಡೆಯರ್‌ರವರು ಅವರಿಗೆ ಸಾರ್ವಜನಿಕ ಸೇವಾ ಪದಕ ಹಾಗೂ ಪ್ರಶಸ್ತಿ ಪತ್ರವನ್ನು 1937ರಲ್ಲಿ ನೀಡಿದರು. ಜಿಲ್ಲಾ ಬೋರ್ಡ್‌ನ ಅಧ್ಯಕ್ಷರಾದ ನಂತರ ಶ್ರೀ ಮಹಮದ್ ಇಮಾಮ್‌ರವರು ಮೈಸೂರು ಶಾಸಕಾಂಗ ಸಭೆಯ ಪ್ರತಿನಿಧಿಯಾಗಿ ಚಿತ್ರದುರ್ಗ ಹಾಗೂ ತುಮಕೂರು ಜಿಲ್ಲೆಗಳಿಂದ ಆಯ್ಕೆಯಾದರು.

ಅಲ್ಲಿಂದ ಮುಂದೆ ಇಮಾಮ್ ಸಾರ್ವಜನಿಕ ಜೀವನದ ಯಶಸ್ಸಿನ ಮೆಟ್ಟಿಲನ್ನು ಏರುತ್ತಲೇ ಹೋದರು. ಜೂನ್ 6, 1941ರಲ್ಲಿ ಜಗಳೂರಿನಲ್ಲಿ ಇಮಾಂರಿಗೆ ಮೈಸೂರಿನಿಂದ ಶ್ರೀಮನ್ಮಹಾರಾಜರಿಂದ ಒಂದು ತಂತಿ ಸಂದೇಶ ಬಂದಿತು. ಅದರಲ್ಲಿ ದಿವಾನ್

ಶ್ರೀ ಮಾಧವರಾವ್‌ರವರ ನಾಯಕತ್ವದಲ್ಲಿನ ಮಂತ್ರಿಮಂಡಲದಲ್ಲಿ ಇಮಾಂರನ್ನು ಮಂತ್ರಿಯನ್ನಾಗಿ ಮಹಾರಾಜರು ನೇಮಕ ಮಾಡಿದ್ದಾರೆಂದು ತಿಳಿಸಲಾಗಿತ್ತು. ಶ್ರೀಮನ್ಮಹಾರಾಜರ ಸರ್ಕಾರದಲ್ಲಿ ಉಳಿದ ಮಂತ್ರಿಗಳು ಅಧಿಕಾರಿಗಳಾಗಿದ್ದರೆ ಶ್ರೀ ಇಮಾಂ ಹಾಗೂ ಶ್ರೀ ಗುಂಡಪ್ಪಗೌಡರು ಮಾತ್ರ ಸಾಮಾನ್ಯ ಜನರಿಂದ ಚುನಾಯಿತರಾದ ಪ್ರತಿನಿಧಿಗಳಾಗಿದ್ದರು. ಅವರು ಮಂತ್ರಿಗಳಾಗಿ ಮಾಡಿದ ಗಮನಾರ್ಹ ಸೇವೆಯನ್ನು ಮುಂದೆ ವಿಸ್ತೃತವಾಗಿ ತಿಳಿಸಲಾಗಿದೆ. ಅದರಲ್ಲಿ ಪ್ರಮುಖವಾದುವುಗಳೆಂದರೆ ಶರಾವತಿ ಜಲವಿದ್ಯುತ್ ಯೋಜನೆ. ಅದಕ್ಕಾಗಿ ಅವರು 1943 ರಿಂದ 1946ರವರೆಗೆ ಹಗಲು ಇರುಳೂ ದುಡಿದರು. ಶಿಕ್ಷಣ ಮಂತ್ರಿಯಾಗಿ ಬಡ ವಿದ್ಯಾರ್ಥಿಗಳಿಗೆ ಹೆಚ್ಚಿನ ಪ್ರಚೋದನೆ ನೀಡುವಂತಹ ಯೋಜನೆಗಳನ್ನು ಹಾಕಿದರು. ರೈಲ್ವೆ ಮಂತ್ರಿಯಾಗಿ ತಾಳಗುಪ್ಪ ರೈಲ್ವೆ ಮಾರ್ಗವನ್ನು ರೂಪಿಸಿದರು. ಈ ಮಾರ್ಗವನ್ನು ಅವರು ಚಳ್ಳಕೆರೆ ಅಲ್ಲಿಂದ ಮುಂದೆ ರಾಯದುರ್ಗಕ್ಕೂ ವಿಸ್ತರಿಸಲು ಉತ್ಸುಕರಾಗಿದ್ದರು. ಹಾಗಾಗಿದ್ದರೆ ಜಿಲ್ಲೆಯು ಆರ್ಥಿಕವಾಗಿ ಸಾಕಷ್ಟು ಅಭಿವೃದ್ಧಿ ಸಾಧಿಸುತ್ತದೆ ಎಂಬುದು ಅವರ ನಂಬಿಕೆಯಾಗಿತ್ತು. ಆದಕ್ಕೆ ಬೇಕಾದ ಸರ್ವೆ ಕಾರ್ಯವೂ ನಡೆದಿತ್ತು. ಆದರೆ ಸ್ವಾತಂತ್ರ್ಯ ಬಂದ ನಂತರ ಆ ಕೆಲಸ ಅಲ್ಲಿಗೆ ನಿಂತಿತು.

ಸ್ವಾತಂತ್ರ್ಯ ಬಂದ ನಂತರವೂ ಶ್ರೀ ಇಮಾಂರು ಮೈಸೂರು ಸಂವಿಧಾನಾತ್ಮಕ ಸಭೆಯ ಸದಸ್ಯರಾಗಿದ್ದರು. ಅಲ್ಲಿ ಅವರು ರಾಜ್ಯ / ಕೇಂದ್ರ ಸಂಬಂಧಗಳ ಬಗ್ಗೆ ಹಾಗೂ ರಾಜ್ಯವು ಕೇಂದ್ರದಿಂದ ಯಾವ ರೀತೀಯಿಂದ ಆರ್ಥಿಕ ಸಹಾಯವನ್ನು ನಿರೀಕ್ಷಿಸಬಹುದು ಎಂಬುದರ ಬಗ್ಗೆ ಬಹಳಷ್ಟು ಉಪಯುಕ್ತ ಸಲಹೆಗಳನ್ನು ನೀಡಿದರು. ಅವರು ಜನವರಿ 26, 1950ರಲ್ಲಿ ಭಾರತ ಗಣರಾಜ್ಯವಾಗುವವರೆಗೆ ಮೈಸೂರು ಶಾಸನ ಸಮಿತಿಯ ಸದಸ್ಯರಾಗಿ ಮುಂದುವರೆದರು. ನಂತರ ವಿರೋಧ ಪಕ್ಷದ ನಾಯಕರಾಗಿ ಆಯ್ಕೆಯಾದರು.

ಮೊತ್ತ ಮೊದಲ ಸಾರ್ವಜನಿಕ ಚುನಾವಣೆ ಘೋಷಿತವಾದಾಗ ಇಮಾಂರು ರಾಜಕೀಯ ನಾಯಕರುಗಳಾದ ಬಿ.ಹುಚ್ಚೇಗೌಡ, ಕೆ.ಪಟ್ಟಾಭಿರಾಮನ್, ಬಾಲರೆಡ್ಡಿಪಳ್ಳಿ, ನಾರಾಯಣ ರೆಡ್ಡಿ, ಚಿನ್ನಬೈರೇಗೌಡ, ಎಸ್.ಮಲ್ಲೇಗೌಡ (ಶ್ರೀ ಎಸ್.ಎಂ.ಕೃಷ್ಣ ಅವರ ತಂದೆ) ಮುಂತಾದವರೊಡನೆ ಸೇರಿ ಒಂದು ರಾಜಕೀಯ ಪಕ್ಷವನ್ನು ಕಟ್ಟಿದರು. ಇದನ್ನು ಭಾರತದ ಮೊದಲ ಜನತಾ ಪಾರ್ಟಿ ಎಂದು ಕರೆಯಬಹುದು. 'ಛತ್ರಿ' ಈ ಪಕ್ಷದ ಚಿಹ್ನೆಯಾಗಿತ್ತು.

ಈ ಪಕ್ಷ ರಚಿಸಲ್ಪಟ್ಟಾಗ ರಾಷ್ಟ್ರ ಮಟ್ಟದಲ್ಲಿ ರಾಜಕೀಯ ಬಿರುಗಾಳಿ ಎದ್ದಿತ್ತು. ಪಂಡಿತ ನೆಹರೂರವರ ಅತ್ಯಂತ ಗೌರವಕ್ಕೆ ಪಾತ್ರವಾಗಿದ್ದ ಆಚಾರ್ಯ ಕೃಪಲಾನಿಯವರನ್ನು ಕಾಂಗ್ರೆಸ್ ಅಧ್ಯಕ್ಷ ಸ್ಥಾನದಿಂದ ಕಿತ್ತು ಹಾಕಿದರು. ಯು.ಬಿ.ದೇಭರ್‌ರವರನ್ನು ಆ ಸ್ಥಾನಕ್ಕೆ ನೇಮಿಸಲಾಯಿತು. ಕೃಪಲಾನಿಯವರು ಕಿಸಾನ್ ಮಜ್ದೂರ್ ಪ್ರಜಾ ಪಕ್ಷವೆಂಬ ಹೊಸ ಪಕ್ಷವನ್ನು ರಚಿಸಿ ಬೆಂಗಳೂರಿಗೆ ಬಂದು ಜನತಾ ಪಕ್ಷದೊಡನೆ ರಾಜಕೀಯ ಬಾಂಧವ್ಯವನ್ನು ಬೆಳೆಸಿದರು. 'ಗುಡಿಸಲು' ಆ ಪಕ್ಷದ ಚಿಹ್ನೆಯಾಗಿತ್ತು.

ಆ ಸಮಯದಲ್ಲಿ ನಡೆದ ಮಹತ್ತರ ಘಟನೆಯೆಂದರೆ ಇಮಾಂರು ಶ್ರೀ ಜಗಜೀವನ್ ರಾಮ್‌ರವರು ಸುಮಾರು 40 ಕೋಟಿ ರೂ.ಗಳಿಗೂ ಹೆಚ್ಚು ಸಂಪತ್ತನ್ನು ಹೊಂದಿದ್ದು ಅದಕ್ಕೆ ತೆರಿಗೆ ಸಲ್ಲಿಸದೆ ಇರುವುದನ್ನು ರಾಷ್ಟ್ರದ ಗಮನಕ್ಕೆ ತಂದರು. ಈ ಆಪಾದನೆಯನ್ನು ಒಪ್ಪಿಕೊಂಡ

ಜಗಜೀವನ್‌ರಾಮ್‌ರವರು ತೆರಿಗೆ ಕಟ್ಟಲು ಮರೆವು ಕಾರಣ ಎಂದು ಹೇಳಿಕೆ ಇತ್ತಾಗ ಇಮಾಂರು ಮರೆವಿನ ಸಿದ್ಧಾಂತದಡಿಯಲ್ಲಿ ಜಗಜೀವನ್ ರಾಮ್‌ರವರು ರಕ್ಷಣೆ ಪಡೆಯುತ್ತಿದ್ದಾರೆ ಎಂದು ಪ್ರತಿಕ್ರಿಯಿಸಿದರು.

1971-72 ರಲ್ಲಿ ಮತ್ತೆ ಚುನಾವಣೆಗೆ ಸ್ಪರ್ಧಿಸಿದ ಇಮಾಂಮರು ಆಶ್ಚರ್ಯಕರವಾಗಿ ಸೋಲನ್ನನುಭವಿಸಿದರು.

ಇಮಾಂಮರು ತಮ್ಮ ಜೀವನ ಪರ್ಯಂತ ಜಾತ್ಯಾತೀತ ಮೌಲ್ಯಗಳಲ್ಲಿ ನಂಬಿಕೆ ಇಟ್ಟುಕೊಂಡು ಬಂದವರು. ಎಲ್ಲ ಮತ ಧರ್ಮಗಳಲ್ಲೂ ಸಮಾನ ಗೌರವವಿಟ್ಟುಕೊಂಡವರು. ಚಿತ್ರದುರ್ಗ ಹಾಗೂ ಸಿರಿಗೆರೆ ಈ ಎರಡೂ ಮಠದ ಸ್ವಾಮಿಗಳೊಡನೆ ಅತ್ಯಂತ ನಿಕಟ ಸಂಪರ್ಕವನ್ನು ಹೊಂದಿದ್ದರು. 1944/45 ರಲ್ಲಿ ಅವರು ಶೃಂಗೇರಿ ಮಠಕ್ಕೆ ಭೇಟಿ ನೀಡಿದಾಗ ಸ್ವಾಮೀಜಿಯವರು ಕುಂಭ ಮೇಳ ಹಾಗೂ ಆನೆಯ ಮೆರವಣಿಗೆಯೊಂದಿಗೆ ಸ್ವಾಗತಿಸಿದರು. ಅವರು ತಮ್ಮ ಮಕ್ಕಳನ್ನು ಯಾವುದೇ ಖಾಸಗಿ ಶಾಲೆಗಳಿಗೆ ಕಳುಹಿಸಲಿಲ್ಲ ಅವರ ಮಕ್ಕಳೆಲ್ಲ ಓದಿದ್ದು ಸರ್ಕಾರಿ ಶಾಲೆಗಳಲ್ಲಿ ಅವರ ಮಗ ಸಂಸ್ಕೃತವನ್ನು ಕಲಿತು ಸಂಹಿತೆಗಳ ಬಗ್ಗೆ ಅದರಲ್ಲೂ ಅಷ್ಟಾವಕ್ರ ಸಂಹಿತೆಯ ಬಗ್ಗೆ ವಿಶೇಷ ಪರಿಣಿತಿಯನ್ನು ಪಡೆದಿದ್ದಾರೆ.

ಇಮಾಮ್‌ರ ಮಾತೃಭಾಷೆ ಕನ್ನಡ. ಈಗಲೂ ಅವರ ಮನೆಮಂದಿಯೆಲ್ಲ ವ್ಯವಹರಿಸುವುದು ಕನ್ನಡದಲ್ಲೇ. ಅವರು ಸಾಕಷ್ಟು ಗ್ರಂಥಗಳನ್ನು ಅಭ್ಯಾಸ ಮಾಡಿದವರಷ್ಟೆ ಅಲ್ಲ ಒಳ್ಳೆಯ ಬರಹಗಾರರು ಕೂಡ. 'ನೂರ್‌ಜಹಾನ್' ಎಂಬ ಐತಿಹಾಸಿಕ ಕಾದಂಬರಿಯ ಕರ್ತೃ ಅವರು. ಗ್ರಾಮೀಣ ಬದುಕಿನ ಬಗ್ಗೆ ಒಂದು ನಾಟಕವನ್ನೂ ಬರೆದಿದ್ದಾರೆ. 'ಜ್ಯೂಲಿಯಸ್ ಸೀಸರ್' ನ ಕನ್ನಡ ಅನುವಾದವನ್ನು ಅವರು ಮಾಡಿದ್ದಾರೆ. ಅವರ ಮಹತ್ವದ ಕೊಡುಗೆ ಎಂದರೆ "ಮೈಸೂರು ಆಗ ಮತ್ತು ಈಗ" ಎನ್ನುವ ರಾಜಕೀಯ ಆತ್ಮ ಚರಿತ್ರೆ.

ಶ್ರೀ ನಿಜಲಿಂಗಪ್ಪ, ತಾ.ರಾ.ಸುಬ್ಬರಾಯರು, ಬಿ.ಎಸ್.ವೆಂಕಣ್ಣಯ್ಯ ಮೊದಲಾದವರು ಇವರ ಆತ್ಮೀಯ ಸ್ನೇಹಿತರು.

ಶ್ರೀ ಇಮಾಮರ ನಿಸ್ವಾರ್ಥ ಸೇವೆಯನ್ನು ಮೆಚ್ಚಿ ಮೈಸೂರಿನ ಮಹಾರಾಜರು ಅವರಿಗೆ 'ಮುಷಿರ್-ಉಲ್-ಹಕ್' ಎಂಬ ಬಿರುದನ್ನು ನೀಡಿದರು. 'ಜನಸೇವಾಸಕ್ತ' ಎನ್ನುವುದು ಅದರ ಸ್ಥೂಲಾರ್ಥ.

ಇಂತಹ ದೀಮಂತ ರಾಜಕೀಯ ಮುತ್ಸದ್ಧಿ ಜನವರಿ 3, 1983ರಂದು ನಿಧನರಾದರು.

ಶ್ರೀ ಜಗಳೂರು ಇಮಾಂ ಸಾಬ್ ಚಿತ್ರದುರ್ಗ ಜಿಲ್ಲೆಯ ಮತ್ತು ಪ್ರಭಾವಶಾಲಿಯೂ ಆಗಿರುವ ಧನಿಕವಂಶದಲ್ಲಿ ಜನ್ಮವೆತ್ತಿದರು. ಅವರ ತಾತ ಶ್ರೀ ಫಕೀರ್ ಸಾಹೇಬರು ಹಾಗೂ ತಂದೆ ಶ್ರೀ ಬಡೆಸಾಹೇಬ್ ಇಬ್ಬರೂ ರಾಜಕೀಯ ಅನುಭವವನ್ನು ಪಡೆದವರೆ. ಅವರಿಬ್ಬರೂ ಮೈಸೂರಿನ ಪ್ರಜಾಪ್ರತಿನಿಧಿ ಸಭೆ ಹಾಗೂ ಸ್ಥಳೀಯ ಸಂಸ್ಥೆಗಳ ಸದಸ್ಯರಾಗಿ ಕಾರ್ಯನಿರ್ವಹಿಸಿದವರು. ತಮ್ಮ ತಂದೆ ಹಾಗೂ ತಾತ ಗಳಿಸಿದ ಜನಾನುರಾಗದಿಂದ, ಅವರುಗಳ ಸೇವಾ ಮನೋಭಾವದಿಂದ ಪ್ರಭಾವಿತರಾದ ಶ್ರೀ ಇಮಾಂ ಸಾಬ್‌ರವರು ಓದುತ್ತಿದ್ದ ಕಾಲದಲ್ಲಿ

ರಾಜಕೀಯ ಸೇರುವ ಬಯಕೆಯನ್ನು ಹೊಂದಿದ್ದರು. ಶ್ರೀ ಇಮಾಂರವರು ಜನಿಸಿದ್ದು ಫೆಬ್ರವರಿ 15, 1892ರಲ್ಲಿ. ಆಗ ಮೈಸೂರು ವಿಶ್ವ ವಿದ್ಯಾನಿಲಯದ ಭಾಗವಾಗಿದ್ದ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ ಪದವಿಯನ್ನು ಪಡೆದರು. ಮದ್ರಾಸ್ ವಿಶ್ವ ವಿದ್ಯಾನಿಲಯದಲ್ಲಿ 1923ರಲ್ಲಿ ಬ್ಯಾಚುಲರ್ ಆಫ್ ಲಾ ಪದವಿಯನ್ನು ಪಡೆದರು. ನಂತರ ವಕೀಲ ವೃತ್ತಿಯನ್ನು ಪ್ರಾರಂಭಿಸುವ ಉದ್ದೇಶದಿಂದ ಚಿತ್ರದುರ್ಗದಲ್ಲೂ ವಕೀಲರ ಕಛೇರಿಯನ್ನು ತೆರೆದರು. ಆದರೆ ರಾಜಕೀಯ ಸೆಳವಿನಿಂದ ಅವರು ತಪ್ಪಿಸಿಕೊಳ್ಳಲಾಗಲಿಲ್ಲ. 1926ರಲ್ಲಿ ಚಿತ್ರದುರ್ಗ ಜಿಲ್ಲಾ ಬೋರ್ಡಿಗೆ ಅಭ್ಯರ್ಥಿಯಾಗಿ ಸ್ಪರ್ಧಿಸಿದರು. ಆ ಚುನಾವಣೆಯಲ್ಲಿ ಬಹು ಜನರಿಗೆ ಇವರ ಬಗ್ಗೆ ಹೆಚ್ಚಿನ ಗೌರವವಿದ್ದುದರಿಂದ ಇವರು ಸುಲಭವಾಗಿ ಆರಿಸಿಬರುವುದಕ್ಕೆ ಸಹಾಯವಾಯಿತು. ಇವರಿಂದ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ಸಹಾಯ ಮಾಡುವ ಸ್ನೇಹಿತರ ಸಂಖ್ಯೆ ಸಾಕಷ್ಟಿತ್ತು. ಆಗ ಹಳ್ಳಿಗಳಿಂದ ಮತದಾರರು ಎತ್ತಿನಗಾಡಿಗಳಲ್ಲಿ ಮತಗಟ್ಟೆಗೆ ಬರಬೇಕಾಗಿತ್ತು. ಇಮಾಮರು ಅವರಿಗೆ ಗಾಡಿ ಬಾಡಿಗೆ ಕೊಡಲು ಹೋದಾಗ ಅದನ್ನು ತೆಗೆದುಕೊಳ್ಳಲು ನಿರಾಕರಿಸುತ್ತಿದ್ದ ಜನರು 'ನೀವು ಪದವೀಧರರು ನಿಮ್ಮಲ್ಲಿ ನಮಗೆ ವಿಶ್ವಾಸ ನಂಬಿಕೆ ಇದೆ ನಮ್ಮ ಮತಗಳನ್ನು ನಿಮಗೇ ಕೊಡುತ್ತೇವೆ' ಎಂದು ಹೇಳುತ್ತಿದ್ದದನ್ನು ಅವರೇ ಆತ್ಮೀಯವಾಗಿ ಸ್ಮರಿಸುತ್ತಾರೆ. ರಾಜಕೀಯದಲ್ಲಿ ಜನರ ಓಡನಾಟ ಸಲಿಗೆ ಗಳಿಸಿದ ಇಮಾಮರು ಮುಂದೆ 'ಇಮ್ಮಣ್ಣ' ಎಂದೇ ಪ್ರಸಿದ್ಧಿ ಪಡೆದರು.

1928ರಲ್ಲಿ ಮೈಸೂರು ಸರ್ಕಾರ ಶ್ರೀ ಇಮಾಂ ಅವರನ್ನು ಮೈಸೂರು ವಿಶ್ವ ವಿದ್ಯಾನಿಲಯದ ಸೆನೆಟ್ ಸಭೆಗೆ ಸದಸ್ಯರನ್ನಾಗಿ ನಾಮಕರಣ ಮಾಡಿತು. ಇದರಿಂದಾಗಿ ತಜ್ಞರ ಹಾಗೂ ಮೇಧಾವಿಗಳ ಜೊತೆಯಲ್ಲಿ ಸೇರಿ ಕೆಲಸ ಮಾಡಿ ಅನುಭವ ಪಡೆಯುವ ಅಪೂರ್ವ ಸುಸಂಧಿಯೊಂದು ಅವರಿಗೆ ದೊರಕಿತು. ಡಾ.ಭೃಜೇಂದ್ರನಾಥ್ ಪಾಲ್‌ರವರು ವಿಶ್ವ ವಿದ್ಯಾನಿಲಯದ ಉಪಕುಲಪತಿಗಳಾಗಿದ್ದರು. ಸಭೆಯ ಕಾರ್ಯಕಲಾಪಗಳಲ್ಲಿ ಶ್ರದ್ಧೆಯಿಂದ ಭಾಗವಹಿಸಿ ಎಲ್ಲರ ಮೆಚ್ಚಿಗೆ ಗಳಿಸಿದ ಶ್ರೀ ಇಮಾಂ ಸೆನೆಟ್‌ನಿಂದ ಪ್ರಜಾಪ್ರತಿನಿಧಿ ಸಭೆಗೆ ಬಹುಮತದಿಂದ ಆರಿಸಲ್ಪಟ್ಟು 1930ರಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಸದಸ್ಯರಾದರು. ಶ್ರೀಯುತ ಚಂಗಲರಾಯರೆಡ್ಡಿ, ಬಿ. ಮರಿಯಪ್ಪ ಮತ್ತು ಹೆಚ್.ಎಂ. ಚೆನ್ನಬಸಪ್ಪ ಇವರುಗಳು ರಾಜಕೀಯ ಪ್ರವೇಶ ಮಾಡಿದ್ದು ಆ ವರ್ಷವೇ. ಸರ್.ಮಿರ್ಜಾರವರು ಧಿವಾನರಾಗಿದ್ದರು. ಪ್ರಜಾಮಿತ್ರ ಮಂಡಳಿ ಮುಖ್ಯ ಪಕ್ಷವಾಗಿ ಬೆಳೆದಿತ್ತು. ಬ್ರಾಹ್ಮಣೇತರ ಚಳುವಳಿಯು ಬಹಳ ಪ್ರಬಲವಾಗಿದ್ದ ಕಾಲದಲ್ಲಿ ಶ್ರೀ ಇಮಾಂರವರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ, ಸಚಿವರಾಗಿ ಕೆಲಸ ಮಾಡಿ ಸಾಕಷ್ಟು ಅನುಭವವನ್ನು ಪಡೆದರು.

1933ರಲ್ಲಿ ಜಗಳೂರು ಕ್ಷೇತ್ರದಲ್ಲಿ ಎರಡನೇ ಬಾರಿಗೆ ಪ್ರಜಾಪ್ರತಿನಿಧಿ ಸಭೆಗೆ ಶ್ರೀ ಇಮಾಂ ಚುನಾಯಿತರಾದರು. ಅಲ್ಲದೆ ಅದೇ ವರ್ಷ ಪ್ರಜಾಪ್ರತಿನಿಧಿ ಸಭೆಯಿಂದ ನ್ಯಾಯ ವಿಧಾಯಕ ಸಭೆಗೂ ಚುನಾಯಿತರಾದರು. ಅವರ ವಕೀಲ ವೃತ್ತಿಯು ಅಲ್ಲಿಗೆ ಪರಿಸಮಾಪ್ತಿಯಾಯಿತು. ಬಹಳಷ್ಟು ಜನರಿಗೆ ವಕೀಲಿ ವೃತ್ತಿ ರಾಜಕೀಯ ಪ್ರವೇಶಕ್ಕೆ ಮೊದಲ ಮೆಟ್ಟಿಲಿನಂತಿರುತ್ತದೆ. ಒಂದು ಆದಾಯದ ಮೂಲವಾಗಿ ಆ ವೃತ್ತಿಯನ್ನು ಆರಿಸಿಕೊಂಡು ನಂತರ ರಾಜಕೀಯ ಪ್ರವೇಶ ಮಾಡುವ ಪರಿಪಾಠ ಆ ಕಾಲದಲ್ಲೂ ಇತ್ತು. ಆದರೆ ಶ್ರೀ ಇಮಾಂರವರು ಆದಾಯಕ್ಕಾಗಿ ವಕೀಲ ವೃತ್ತಿಯನ್ನು ಅವಲಂಬಿಸಬೇಕಾದ ಅಗತ್ಯ ಕಂಡುಬರಲಿಲ್ಲ. ಅವರ

ಹಿರಿಯರು ಸಂಪಾದಿಸಿದ ಆಸ್ತಿ ಸಾಕಷ್ಟು ಇದ್ದುದರಿಂದ ಅವರು ಜೀವನ ನಿರ್ವಹಣೆಗೆ ರಾಜಕೀಯವನ್ನು ಆಶ್ರಯಿಸಬೇಕಾಗಿರಲಿಲ್ಲ. ಆದುದರಿಂದ ಅಧಿಕಾರ ದೊರಕಿದಾಗಲೆಲ್ಲ ಪ್ರಾಮಾಣಿಕವಾಗಿ ಕೆಲಸ ಮಾಡಿ ಜನಾನುರಾಗವನ್ನು ಗಳಿಸುವುದು ಅವರಿಗೆ ಸಾಧ್ಯವಾಯಿತು. 1933 ರಿಂದ 1936 ರವರೆಗೆ ಜಗಳೂರು ಮುನಿಸಿಪಾಲಿಟಿಯ ಅಧ್ಯಕ್ಷರಾಗಿಯೂ ನಂತರ 1936 ರಿಂದ 1940 ರವರೆಗೆ ಡಿಸ್ಟ್ರಿಕ್ಟ್ ಬೋರ್ಡಿನ ಅಧ್ಯಕ್ಷರಾಗಿಯೂ ಕೆಲಸ ಮಾಡಿ ಸಾಕಷ್ಟು ಹೆಸರು ಗಳಿಸಿದರು. ಆ ಕಾಲದಲ್ಲಿ ಅವರು ಹಿಂದುಳಿದ ಚಿತ್ರದುರ್ಗ ಜಿಲ್ಲೆಯಲ್ಲಿ ನೂತನ ಲೋಕೋಪಯೋಗಿ ಕಾರ್ಯಗಳನ್ನು ಕೈಗೊಳ್ಳಲು ಒಂದು ಪಂಚವಾರ್ಷಿಕ ಯೋಜನೆಯನ್ನು ತಯಾರಿಸಿ ತನ್ಮೂಲಕ ಆರು ದೊಡ್ಡ ಸೇತುವೆಗಳನ್ನು 250 ಮೈಲಿಗಳುದ್ದದ ರಸ್ತೆಗಳನ್ನು, 300 ಕುಡಿಯುವ ಬಾವಿಗಳನ್ನೂ ತೋಡಿಸಿ ಜನರ ಕೃತಜ್ಞತೆಗೆ ಪಾತ್ರರಾಗಿದ್ದರು.

ಜಗಳೂರು ಇಮಾಂ ಸಾಬ್ ಅವರು ಮೈಸೂರು ಸರ್ಕಾರದ ಬೆಳವಣಿಗೆಯ ವಿವಿಧ ಹಂತಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದವರು. ಪ್ರಜಾಪ್ರತಿನಿಧಿ ಸಭೆ ಕೇವಲ ಮಹಾರಾಜರ ಕೃಪಾಶ್ರಯದಲ್ಲಿದ್ದ ಕಾಲದಿಂದ ಹಿಡಿದು ಹಂತಹಂತವಾಗಿ ಜವಾಬ್ದಾರಿ ಸರ್ಕಾರದ ಬೇಡಿಕೆಗೆ ಪ್ರತಿಕ್ರಯಿಸುತ್ತಾ ಬೆಳೆದ ವಿವಿಧ ಸ್ತರಗಳನ್ನು ಕಂಡವರು ಅವರು. 1938ರಲ್ಲಿ ಮೈಸೂರು ಕಾಂಗ್ರೆಸ್ ಸ್ಥಾಪನೆಯಾದ ನಂತರ ಜವಾಬ್ದಾರಿ ಸರ್ಕಾರದ ರಚನೆಗೆ ಒತ್ತಾಯ ಬರಲಾರಂಭಿಸಿತು. ಇದಕ್ಕೆ ಸಂಬಂಧಿಸಿದಂತೆ 1938ರಲ್ಲಿ ನಡೆದ ವಿದುರಾಶ್ವತ್ಥದ ಘಟನೆಯಲ್ಲಿ ಹಲವರು ಮಡಿದರು. ಈ ಘಟನೆಯ ಪೂರ್ಣ ನಿಜಾಂಶಗಳನ್ನು ಪರಿಶೀಲಿಸಲು ಸರ್.ಎಂ. ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಕ ಮಾಡಲಾಯಿತು. ವಿಶ್ವೇಶ್ವರಯ್ಯನವರ ಸಮಿತಿಯು ಪ್ರಜೆಗಳ ಆಕಾಂಕ್ಷೆಗೆ ಹೆಚ್ಚಿಗೆ ಮನ್ನಣೆ ಕೊಟ್ಟು ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಗಮನ ಕೊಡಬೇಕೆಂಬ ಅಭಿಪ್ರಾಯವನ್ನು ತೀವ್ರವಾಗಿ ವ್ಯಕ್ತಪಡಿಸಿದ್ದರಿಂದ ಸರ್. ಮಿರ್ಜಾರವರು ಕೆ.ಆರ್. ಶ್ರೀನಿವಾಸ್ ಆಯ್ಯಂಗಾರ್ ಅವರ ಅಧ್ಯಕ್ಷತೆಯಲ್ಲಿ ಒಂದು ಸುಧಾರಣಾ ಸಮಿತಿಯನ್ನು ನೇಮಿಸಿ ಅದರಲ್ಲಿ ಶ್ರೀ ಡಿ.ವಿ. ಗುಂಡಪ್ಪ ಮೊದಲಾದ ಅನುಭವ ಶಾಲಿಗಳನ್ನು ಸದಸ್ಯರಾಗಿ ತೆಗೆದುಕೊಂಡರು. ಮುಸ್ಲಿಮರ ಪರವಾಗಿ ಮೂರು ಜನ ಸದಸ್ಯರನ್ನು ನೇಮಿಸಲ್ಪಟ್ಟಿತು. ಅದರಲ್ಲಿ ಶ್ರೀ ಇಮಾಂರವರು ಒಬ್ಬರು ಸದಸ್ಯರಾಗಿದ್ದರು. ಶ್ರೀನಿವಾಸ್ ಅಯ್ಯಂಗಾರ್ ಸಮಿತಿಯು ಸಲ್ಲಿಸಿದ ವರದಿಯಲ್ಲಿ ಪ್ರಜಾಪ್ರತಿನಿಧಿ ಸಭೆಯಿಂದಲೂ ನ್ಯಾಯ ವಿಧಾಯಕ ಸಭೆಯಿಂದಲೂ ಚುನಾಯಿತ ಸದಸ್ಯರ ಪೈಕಿ ಇಬ್ಬರಿಗೆ ಕಡಿಮೆ ಇಲ್ಲದೆ ಖಾಸಗಿ ಸಚಿವರನ್ನು ಶ್ರೀಮಾನ್ ಮಹಾರಾಜರು ನೇಮಿಸತಕ್ಕದ್ದೆಂದು ಸಲಹೆ ಮಾಡಲಾಯಿತು. ನ್ಯಾಯ ವಿಧಾಯಕ ಸಭೆಗೆ ಚುನಾಯಿತರಾದ ಖಾಸಗಿ ಅಧ್ಯಕ್ಷರು ಬೇಕೆಂದೂ ಮತ್ತು ಮುಸ್ಲೀಮರಿಗೆ ಪ್ರತ್ಯೇಕ ಚುನಾವಣೆ ಬೇಕೆಂದೂ ಸೂಚಿತವಾಗಿತ್ತು. ಶ್ರೀನಿವಾಸ್ ಅಯ್ಯಂಗಾರ್ ವರದಿಯನ್ನು ಒಪ್ಪಿಕೊಂಡು ಮಹಾರಾಜರ ಸರ್ಕಾರ 1941ರಿಂದ ವರದಿಯನ್ನು ಜಾರಿಗೆ ತರುವುದಾಗಿ ಘೋಷಿಸಿತು.

ಜಗಳೂರು ಇಮಾಂ ಸಾಬ್‌ರವರಿಗೆ ನಿಜಲಿಂಗಪ್ಪನವರ ನಿಕಟ ಪರಿಚಯವಿತ್ತು. ಶ್ರೀ ನಿಜಲಿಂಗಪ್ಪನವರು ಆಗ ಕಾಂಗ್ರೆಸ್ ಚಳುವಳಿಯ ಮುಂಚೂಣಿಯಲ್ಲಿದ್ದರು. ಕಾಂಗ್ರೆಸ್ ಮಹಾರಾಜರ ಸರ್ಕಾರವನ್ನು ವಿರೋಧಿಸುತ್ತಿತ್ತು. ಸ್ವಾತಂತ್ರ್ಯ, ಜವಾಬ್ದಾರಿ ಸರ್ಕಾರ ಅದರ ಪ್ರಮುಖ ಬೇಡಿಕೆಯಾಗಿತ್ತೆಂದು ಈ ಮೊದಲೆ ತಿಳಿಸಲಾಗಿದೆ. ಇಮಾಂ ಸಾಬ್ ಕಾಂಗ್ರೆಸ್

ವಿರೋಧಿಸುತ್ತಿದ್ದ ಮಹಾರಾಜರ ಸರ್ಕಾರವನ್ನು ಬೆಂಬಲಿಸುತ್ತಿದ್ದರು. ಹೀಗೆ ವಿಭಿನ್ನವಾದ ರಾಜಕೀಯ ಬಣದಲ್ಲಿದ್ದರೂ ಅವರಿಬ್ಬರ ನಡುವಿನ ಸ್ನೇಹಕ್ಕೆ ಯಾವುದೇ ಅಡ್ಡಿಯೂ ಇರಲಿಲ್ಲ. ಆದರೆ 1939ರಲ್ಲಿ ನಡೆದ ಒಂದು ಘಟನೆಯಿಂದಾಗಿ ಇವರಿಬ್ಬರ ಸ್ನೇಹದ ಬಗ್ಗೆ ಅನುಮಾನ ವ್ಯಕ್ತಪಡಿಸುವಂತಹ ಅಪಪ್ರಚಾರ ನಡೆದಿದ್ದನ್ನು ಇಮಾಂ ಬಹಳ ನೊಂದ ಮನಸ್ಸಿನಿಂದ ಹೇಳಿಕೊಂಡಿದ್ದಾರೆ. ಆಗ ಮೈಸೂರು ಕಾಂಗ್ರೆಸ್ ಮುಖಂಡರು ಚಿತ್ರದುರ್ಗ ತಾಲ್ಲೂಕ್ ತುರುವನೂರಿನಲ್ಲಿ ಅರಣ್ಯ ಸತ್ಯಾಗ್ರಹ ನಡೆಸಿದ್ದರು. ಈ ಸತ್ಯಾಗ್ರಹದ ಒಂದು ಪ್ರಮುಖ ಅಂಶವಾಗಿ ಈಚಲು ಮರಗಳನ್ನು ಕಡಿಯುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ನಿಜಲಿಂಗಪ್ಪನವರೂ ಸತ್ಯಾಗ್ರಹದಲ್ಲಿ ಭಾಗವಹಿಸುವ ಸುದ್ದಿ ತಿಳಿಯುತ್ತಿದ್ದಂತೆ ಇಮಾಂ ಸಾಬ್ ಅವರು ಒಳ ತೆರಳಿ ನಿಜಲಿಂಗಪ್ಪನವರು ಆ ಕಾರ್ಯಕ್ರಮದಲ್ಲಿ ತೊಡಗಿಸಿಕೊಳ್ಳಬಾರದೆಂದು ಮನವೊಲಿಸಲು ಪ್ರಯತ್ನಿಸಿದರು. ಅವರು ಹಾಗೆ ಮಾಡಿದಲ್ಲಿ ಈಗಾಗಲೇ ಹೆಸರು ಮಾಡಿರುವ ಅವರು ಲಾಯರ್ ವೃತ್ತಿಯು ಹಾಳಾಗುವುದೆಂದು, ಅವರ ಭವಿಷ್ಯದ ಮೇಲೆ ದುಷ್ಪರಿಣಾಮ ಬೀರಬಹುದೆಂದು ಎಚ್ಚರಿಸಿದರು. ಆದರೂ ಸತ್ಯಾಗ್ರಹದಲ್ಲಿ ಭಾಗವಹಿಸಲು ಧೃಡ ಸಂಕಲ್ಪ ಮಾಡಿದ ನಿಜಲಿಂಗಪ್ಪನವರು ಅದೇ ದಿನ ರಾತ್ರಿ ಪೋಲೀಸ್‌ನವರಿಂದ ದಸ್ತಗಿರಿಗೊಳಗಾದರು. ಆ ಸಮಯದಲ್ಲಿ ಚಿತ್ರದುರ್ಗ ಜಿಲ್ಲಾ ಮ್ಯಾಜಿಸ್ಟ್ರೇಟ್ ಆಗಿದ್ದವರು ಇಮಾಂರವರಿಗೆ ಪರಿಚಯವಿದ್ದ ಶ್ರೀ ಇಸ್ಮಾಯಿಲ್ ಷರೀಫ್. ಅವರು ವಾಸ್ತವವಾಗಿ ನಿಜಲಿಂಗಪ್ಪನವರನ್ನು ದಸ್ತಗಿರಿ ಮಾಡಿದ್ದು ಸೂಕ್ತವಲ್ಲವೆಂಬ ಅಭಿಪ್ರಾಯವನ್ನು ಇಸ್ಮಾಯಿಲ್ ಷರೀಫ್‌ರವರಿಗೆ ಇಮಾಂ ವ್ಯಕ್ತಪಡಿಸಿದ್ದರು. ಆದರೆ ನ್ಯಾಯಾಲಯದಲ್ಲಿ ನಿಜಲಿಂಗಪ್ಪನವರು ತಾವು ಈಚಲು ಮರವನ್ನು ಕಡಿಯಲು ಪ್ರಯತ್ನಿಸಿದ್ದು ಹೌದೆಂದು ಒಪ್ಪಿಕೊಂಡ ಪರಿಣಾಮವಾಗಿ ಅವರಿಗೆ ಒಂದು ವರ್ಷ ಸಜಾ ವಿಧಿಸಲಾಯಿತು. ಮುಂದೆ ನಿಜಲಿಂಗಪ್ಪನವರಿಗೆ ಶಿಕ್ಷೆ ವಿಧಿಸುವಂತೆ ಇಮಾಂರವರೆ ಪ್ರೇರೇಪಿಸಿದರು, ಎಂಬ ಅಪಪ್ರಚಾರ ಪ್ರಾರಂಭವಾಯಿತು. ಇದರಿಂದಾಗಿ 1940ರಲ್ಲಿ ನಡೆದ ಜಿಲ್ಲಾ ಬೋರ್ಡ್ ಚುನಾವಣೆಯಲ್ಲಿ ಹಿಂದೆ ಅದರ ಅಧ್ಯಕ್ಷನಾಗಿ ಅತ್ಯಂತ ಒಳ್ಳೆಯ ಕೆಲಸ ಮಾಡಿದ್ದರೂ ಸಹ ಇಮಾಂ ಸಾಬ್‌ರವರು ಚುನಾವಣೆಯಲ್ಲಿ ಪರಾಜಿತವಾಗಬೇಕಾಯಿತು. ಇದೊಂದು ಇಮಾಂರವರ ಜೀವನದ ಕಹಿ ನೆನಪಾಗಿ ಉಳಿಯಿತು.

ಶ್ರೀ ಇಮಾಂರವರು ಮೈಸೂರು ರಾಜ್ಯದ ರಾಜಕೀಯದಲ್ಲಿ ಬಹಳ ಪ್ರಮುಖ ಸ್ಥಾನವನ್ನು ಪಡೆದಿದ್ದರು. ಶ್ರೀ ಕೃಷ್ಣರಾಜ ಒಡೆಯರ್ ಕಾಲದಿಂದಲೂ ಮಹಾರಾಜರ ನಿಕಟ ಸಂಪರ್ಕವನ್ನು ಹೊಂದಿದ್ದರು. 1936ರಲ್ಲಿ ಅವರು ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದಾಗ ಚಿತ್ರದುರ್ಗದಲ್ಲಿ ಹೊಸ ರಸ್ತೆ, ಸೇತುವೆ ಮತ್ತು ಕುಡಿಯುವ ನೀರಿನ ಬಾವಿಗಳ ಒಂದು ಪಂಚವಾರ್ಷಿಕ ಯೋಜನೆಯನ್ನು ತಯಾರಿಸಿದಾಗ ಅದರ ಉದ್ಘಾಟನೆಗೆ ಸ್ವತಹ ಕೃಷ್ಣರಾಜ ಒಡೆಯರ್ ಬಂದಿದ್ದರು. ಇಮಾಂ ಅವರ ಮನೆಗೂ ಅವರು ಆಗಮಿಸಿದ್ದನ್ನು ಇಮಾಂ ಸ್ಮರಿಸಿಕೊಳ್ಳುತ್ತಾರೆ. ಮತ್ತೊಮ್ಮೆ 1940ರಲ್ಲಿ ಕೆಲ್ಲೋಡು ಸೇತುವೆಯ ಉದ್ಘಾಟನೆಗೆ ಬಂದು ಇಮಾಂರವರು ಅಧ್ಯಕ್ಷರಾಗಿ ಮಾಡಿದ ಕೆಲಸವನ್ನು ಮುಕ್ತ ಕಂಠದಿಂದ ಪ್ರಶಂಸಿಸಿದರು.

## ಜಯಚಾಮರಾಜ ಒಡೆಯರ್ ಕಾಲದಲ್ಲಿ ಸಚಿವರಾಗಿ:

ರಾಜ್ಯಾಂಗ ಸುಧಾರಣಾ ಸಮಿತಿಯ ಸಲಹೆಯಂತೆ ಶ್ರೀ ಜಯಚಾಮರಾಜ ಒಡೆಯರು ಇಬ್ಬರು ಖಾಸಗಿ ಸಚಿವರನ್ನು ನೇಮಿಸಬೇಕಾಯಿತು. ಆಗ ದಿವಾನರಾಗಿದ್ದವರು ನ್ಯಾಮತಿ ಮಾಧವರಾಯರು. ಶ್ರೀ ಮಹಮದ್ ಇಮಾಂ ಹಾಗೂ ಹಾಸನದ ಶ್ರೀ ಗುಂಡಪ್ಪಗೌಡರು ಮಹಾರಾಜರಿಂದ ಖಾಸಗಿ ಸಚಿವರಾಗಿ ನೇಮಿಸಲ್ಪಟ್ಟರು. ಇಮಾಂರವರ ರಾಜಕೀಯ ಜೀವನದಲ್ಲಿ ಇದೊಂದು ಮೈಲಿಗಲ್ಲೆಂದೆ ಹೇಳಬೇಕು. ಶ್ರೀ ಗುಂಡಪ್ಪಗೌಡರಿಗೆ ಆರೋಗ್ಯ, ಸ್ಥಳೀಯ ಸಂಸ್ಥೆಗಳು ಮತ್ತು ವ್ಯವಸಾಯ ಖಾತೆಗಳನ್ನು ವಹಿಸಲಾಯಿತು. ಶ್ರೀ ಇಮಾಂರವರು ವಿದ್ಯಾಭ್ಯಾಸ, ವಿಶ್ವ ವಿದ್ಯಾನಿಲಯ, ಅಬ್ಕಾರಿ, ರೈಲ್ವೆ ಮತ್ತು ಸಹಕಾರ ಇವುಗಳನ್ನು ಕೊಡಲಾಯಿತು. ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿ ಅನುಭವವಿದ್ದ ಇಮಾಮರಿಗೆ ವಿದ್ಯಾಭ್ಯಾಸ ಹಾಗೂ ವಿಶ್ವ ವಿದ್ಯಾನಿಲಯ ಖಾತೆಗಳನ್ನು ಕೊಟ್ಟಿದ್ದು ಅವರ ಅರ್ಹತೆಗೆ ತಕ್ಕುದಾಗಿತ್ತು. ಆಗ ಸಚಿವರ ಸಂಬಳ ತಿಂಗಳಿಗೆ ರೂ. 2000. ಸಚಿವ ಸ್ಥಾನದಿಂದ ಇಮಾಮರಿಗೆ ಸಂತೋಷ ಹಾಗೂ ಹೆಮ್ಮೆಯಾಯಿತಾದರೂ ತನ್ನ ಮೇಲೆ ಬಿದ್ದ ಗುರುತರ ಜವಾಬ್ದಾರಿಯ ಅರಿವನ್ನೂ ಮೂಡಿಸಿತು. ಖಾಸಗಿ ಸಚಿವರಾಗಿ ಅವರು ಎರಡು ರೀತಿಯಲ್ಲಿ ಜವಾಬ್ದಾರಿ ಹಾಗೂ ನಂಬಿಕೆಯನ್ನು ನಿರ್ವಹಿಸಬೇಕಾಗಿತ್ತು. ಒಂದು ಕಡೆ ಮಹಾರಾಜರಿಗೆ ಜವಾಬ್ದಾರರಾಗಬೇಕಾದರೆ ಮತ್ತೊಂದು ಕಡೆಯಿಂದ ಆರಿಸಿದ ಜನರ ಅನುರಾಗವನ್ನು ಗಳಿಸಿಕೊಳ್ಳಬೇಕಾಗಿತ್ತು. ಆಡಳಿತದಲ್ಲಿ ದಕ್ಷತೆ ಹಾಗೂ ನಿಸ್ಪೃಹತೆಯನ್ನು ತೋರಿ ಆಗ ಮೈಸೂರು ರಾಜ್ಯ ಮಾದರಿ ರಾಜ್ಯವೆಂದು ಗಳಿಸಿದ ಹೆಸರನ್ನು ಉಳಿಸಿಕೊಳ್ಳಬೇಕಾಗಿತ್ತು. ಒಂದು ರೀತಿಯಲ್ಲಿ ಈಗಿನಂತೆ ಆಗ ಶಾಸಕರು ಜನರಿಗೆ ನೇರವಾಗಿ ಜವಾಬ್ದಾರರಲ್ಲದಿದ್ದರೂ ಅವರ ಮೆಚ್ಚುಗೆಯನ್ನು ಪಡೆಯುವುದು ಬಹಳ ಮುಖ್ಯವಾಗಿತ್ತು. ಶ್ರೀ ಇಮಾಮರು ಈ ಎಲ್ಲ ಜವಾಬ್ದಾರಿಗಳನ್ನು ಬಹಳ ಸಮರ್ಥವಾಗಿಯೇ ನಿರ್ವಹಿಸಿದರು. ಆ ಮಂತ್ರಿಮಂಡಲಕ್ಕೆ ಆಡಳಿತಾತ್ಮವಾಗಿ ನಾಯಕತ್ವವನ್ನು ಕೊಟ್ಟವರು ದಿವಾನ ಮಾಧವರಾಯರು, ಸರ್ಕಾರದ ಅನೇಕ ಶಾಖೆಗಳಲ್ಲಿ ಕೆಲಸ ಮಾಡಿ ದಕ್ಷರೂ ಅನುಭವಶಾಲಿಗಳೂ ಆಗಿದ್ದ ಅವರಿಗೆ ಅಪಾರವಾದ ಆಡಳಿತ ಜ್ಞಾನವಿತ್ತು. ಅಂತಹವರ ನಾಯಕತ್ವದಲ್ಲಿ ಸಂಪುಟ ಒಂದು ಜೇನಿನಂತೆ ಕೆಲಸ ಮಾಡಿತು. ಇಮಾಮರು ಒಬ್ಬ ದಕ್ಷ ಆಡಳಿತಗಾರರೆಂದು ಗುರುತಿಸಲ್ಪಟ್ಟರು. ಸಚಿವರಾಗಿ ಇವರು ಚಿತ್ರದುರ್ಗ ಜಿಲ್ಲೆಗೆ ಮಾಡಿದ ಕೆಲಸಗಳು ಅಪಾರ.

ಆಗ ಮೈಸೂರು ಸರ್ಕಾರ ವಿದ್ಯಾಭ್ಯಾಸಕ್ಕೆ ಹೆಚ್ಚು ಆದ್ಯತೆಯನ್ನು ಕೊಟ್ಟಿತು. ವಿದ್ಯಾ ಮಂತ್ರಿಯಾಗಿ ವಿದ್ಯಾಭ್ಯಾಸ ಸೌಕರ್ಯಗಳನ್ನು ಹೆಚ್ಚಿಸುವುದು ಇಮಾಮರ ಕರ್ತವ್ಯವಾಗಿತ್ತು. ಅವರು ಖಾತೆಯನ್ನು ವಹಿಸಿಕೊಳ್ಳುವ ಮುನ್ನ ವಿದ್ಯಾಭ್ಯಾಸ ಪ್ರಸಾರದ ಜವಾಬ್ದಾರಿಯನ್ನು ಆಯಾ ಜಿಲ್ಲಾ ಬೋರ್ಡ್‌ಗಳಿಗೆ ವಹಿಸಲಾಗಿತ್ತು. ಅಲ್ಲಿಯವರೆಗೂ ಸರ್ಕಾರದಿಂದ ವಿದ್ಯಾಭ್ಯಾಸಕ್ಕೆ ಖರ್ಚು ಮಾಡುತ್ತಿದ್ದ ಹಣವನ್ನು ಆಯಾ ಸ್ಥಳೀಯ ಸಂಸ್ಥೆಗಳಿಗೆ ಕೊಡುವುದಾಗಿಯೂ ಮುಂದಿನ ಪ್ರಾಥಮಿಕ ವಿದ್ಯಾಭ್ಯಾಸ ವಿಸ್ತರಣೆಗೆ ಅವಶ್ಯವಾದ ಅಧಿಕ ಹಣವನ್ನು ತೆರಿಗೆ ಸೆಸ್ಸುಗಳ ಮೂಲಕ ಶೇಖರಿಸಬೇಕು ಮತ್ತು ಅದಕ್ಕೆ ಸಮನಾದ ಮೊತ್ತವನ್ನು ಸರ್ಕಾರದವರು ಮಂಜೂರು ಮಾಡಬೇಕೆಂದು 1930ರಲ್ಲಿ ಶಾಸನವಾಗಿತ್ತು. ಆ ಕಾರ್ಯದ ಮೇಲ್ವಿಚಾರಣೆಗಾಗಿ ಆಯಾ ಡಿಸ್ಟಿಕ್ ಬೋರ್ಡ್‌ಗಳನ್ನು 'ಲೋಕಲ್ ಎಜ್ಯುಕೇಶನ್ ಅಥಾರಿಟಿ' ಯೆಂದು ಕರೆಯಲಾಯಿತು. ಪ್ರಾಥಮಿಕ ವಿದ್ಯಾಭ್ಯಾಸದ

ಕಾರ್ಯನಿರ್ವಹಣೆಗೆ ಸ್ಕೂಲು ಬೋರ್ಡ್‌ಗಳ ಸ್ಥಾಪಿಸಲ್ಪಟ್ಟವು. ಈ ಎಲ್ಲ ಕ್ರಮಗಳಿಂದಾಗಿಯೂ ವಿದ್ಯಾಭ್ಯಾಸದಲ್ಲಿ ಯಾವ ಅಭಿವೃದ್ಧಿಯೂ ಆಗದಿದ್ದುದನ್ನು ಇಮಾಮರು ಗಮನಿಸಿದರು. ಸ್ಥಳೀಯ ಸಂಸ್ಥೆಗಳು ತೆರೆಗೆಗಳನ್ನು ಹೆಚ್ಚಿಸಲು ಒಪ್ಪುತ್ತಿರಲಿಲ್ಲ. ಹೆಚ್ಚಿಗೆ ಖರ್ಚಾಗುವ ಹಣವನ್ನೆಲ್ಲಾ ಸರ್ಕಾರದವರೇ ವಹಿಸಿಕೊಳ್ಳಬೇಕೆಂದು ಕೇಳಿಕೊಳ್ಳುತ್ತಿದ್ದರು. ಸ್ಥಳೀಯ ಸಂಸ್ಥೆಗಳೇ ಕಾನೂನು ಪ್ರಕಾರ ತೆರಿಗೆಯನ್ನು ಹಾಕಿ ಆದಾಯವನ್ನು ಹೆಚ್ಚಿಸಿಕೊಂಡು ಜವಾಬ್ದಾರಿಯನ್ನು ಪೂರೈಸಿಕೊಳ್ಳಲು ಸರ್ಕಾರದವರು ಸೂಚಿಸುತ್ತಿದ್ದರು. ಸರ್ಕಾರ ಹಾಗೂ ಸ್ಥಳೀಯ ಸಂಸ್ಥೆಗಳ ನಡುವಿನ ಈ ತಿಕ್ಕಾಟದಲ್ಲಿ ವಿದ್ಯಾಭ್ಯಾಸದ ಅಭಿವೃದ್ಧಿ ಕುಂಠಿತವಾಗುತ್ತಿತ್ತು. ಈ ಎಲ್ಲವನ್ನು ಗಮನಿಸಿದ ಸರ್ಕಾರ 1940ರಲ್ಲಿ 'ಎಲಿಮೆಂಟರಿ ಎಜ್ಯೂಕೇಶನ್ ಆಕ್ಟ್' ನ ಪ್ರಕಾರ ಪ್ರಾಥಮಿಕ ವಿದ್ಯಾಭ್ಯಾಸದ ಹೊರೆಯನ್ನು ತಾನೆ ವಹಿಸಿಕೊಂಡಿತು. ಈ ಶಾಸನ ವಿದ್ಯಾಮಂತ್ರಿಗಳಾದ ಇಮಾಮರಿಗೆ ಸಾಕಷ್ಟು ಅಧಿಕಾರವನ್ನು ಕೊಟ್ಟಿತು. ಇದರ ಪರಿಣಾಣವಾಗಿ ಅವರು ವಿದ್ಯಾಮಂತ್ರಿಯಾಗಿರುವ ಕಾಲದಲ್ಲಿ ರಾಜ್ಯದಲ್ಲೆಲ್ಲಾ ಒಂದು ಸಾವಿರ ಪ್ರೈಮರಿ ಶಾಲೆಯನ್ನು ಹೊಸದಾಗಿ ಸ್ಥಾಪಿಸುವ ಯೋಜನೆಯನ್ನು ಮಾಡಲಾಯಿತು. ಮೊದಲನೆಯ ವರ್ಷದಲ್ಲೆ ಸುಮಾರು 500 ಹೊಸ ಸ್ಕೂಲುಗಳನ್ನು ಮಂಜೂರು ಮಾಡಲಾಯಿತು. ನಾಲ್ಕು ವರ್ಷಗಳಲ್ಲಿ ನಿಗದಿತ ಗುರಿಯಾದ ಒಂದು ಸಾವಿರ ಸ್ಕೂಲುಗಳನ್ನು ಪ್ರಾರಂಭಿಸಲಾಯಿತು. ಮಾಧ್ಯಮಿಕ ಶಿಕ್ಷಣಕ್ಕೂ ಪ್ರಾಮುಖ್ಯತೆಯನ್ನು ನೀಡಿ ಪ್ರತಿ ತಾಲ್ಲೂಕಿಗೂ ಎರಡು ಮೂರು ಮಾದ್ಯಮಿಕ ಶಾಲೆಗಳನ್ನು ಮಂಜೂರು ಮಾಡಲಾಯಿತು. ಅನೇಕ ಸ್ಥಳಗಳಲ್ಲಿ ಕಟ್ಟಡಗಳಿರಲಿಲ್ಲ. ಹೊಸ ಕಟ್ಟಡಗಳನ್ನು ಕಟ್ಟಲಾಯಿತು. ಇಷ್ಟೆಲ್ಲ ಮಾಡಿದರೂ ಸೌಲಭ್ಯಗಳು ಸಾಲದೆ ಹೋದಾಗ **"New Type Middle Schools"** ಎಂಬ ಹೆಸರಿನ ಹೊಸ ಏರ್ಪಾಟನ್ನು ಕಾರ್ಯರೂಪಕ್ಕೆ ತರಲಾಯಿತು. ಅನೇಕ ಸ್ಥಳಗಳಲ್ಲಿ ಅಪ್ಪರ್ ಪ್ರೈಮರಿ ಶಾಲೆಗಳು ಜಾರಿಯಲ್ಲಿದ್ದವು. ಈ ಸ್ಕೂಲ್‌ಗಳಲ್ಲಿ ಕನ್ನಡ ಲೋಯರ್ ಸೆಕಂಡರಿಯವರೆಗೆ ಶಿಕ್ಷಣ ಕೊಡುತ್ತಿದ್ದರು. ಇಂಗ್ಲೀಷ್ ಭಾಷೆ ಒಂದು ಬಿಟ್ಟು ಬಾಕಿ ವಿಷಯವನ್ನು ಕನ್ನಡ ಭಾಷೆಯ ಮೂಲಕ ಲೋವರ್ ಸೆಕೆಂಡರಿ ಪರೀಕ್ಷೆವರೆಗೂ ನಡೆಯುತ್ತಿತ್ತು. ಇದರಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿತ್ತು. ಅವರು ಪುನಃ ಮಿಡಲ್ ಸೂಲ್ಕಿಗೆ ಸೇರಿದಾಗ ಇಂಗ್ಲೀಷ್ ಭಾಷೆಯೊಂದರಲ್ಲಿಯೇ ಶಿಕ್ಷಣ ಹೊಂದಿ ಅದರಲ್ಲಿ ಮಾತ್ರವೇ ಇಂಗ್ಲೀಷ್ ಲೋವರ್ ಸೆಕಂಡರಿ ಪರೀಕ್ಷೆಗೆ ಕೂತು ತೇರ್ಗಡೆಯಾಗಬೇಕಾಗಿತ್ತು. ಈ ಅನಾನುಕೂಲತೆಗಳನ್ನು ತಪ್ಪಿಸಲು ಅಪ್ಪರ್ ಪ್ರೈಮರಿ ಸ್ಕೂಲಿನಲ್ಲಿ ಇಂಗ್ಲೀಷ್ ಶಿಕ್ಷಣ ಕೊಡುವ ಇಬ್ಬರು ಉಪಾಧ್ಯಾಯರನ್ನು ನೇಮಿಸಲು ಇಮಾಮ್‌ರವರು ನಿರ್ಧಾರ ಕೈಗೊಂಡರು. ಈ ಏರ್ಪಾಡಿನಿಂದಾಗಿ ಮಿಡಲ್ ಸೂಲ್ಕಿನ ಎಲ್ಲಾ ಸೌಕರ್ಯಗಳೂ ಅಲ್ಲಿ ದೊರೆತ ಹಾಗಾಯಿತು. ಇದರಿಂದ ಖರ್ಚೂ ಕಡಿಮೆಯಾಗಿ ವಿದ್ಯಾಭ್ಯಾಸದ ಸೌಕರ್ಯವೂ ಹೆಚ್ಚಾಯಿತು.

ಶ್ರೀ ಮಹಮ್ಮದ್ ಇಮಾಮರು ವಿದ್ಯಾಮಂತ್ರಿಯಾಗಿದ್ದಾಗ ಮತ್ತೊಂದು ಮಹತ್ತರ ಬೆಳವಣಿಗೆಯು ವಿದ್ಯಾಕ್ಷೇತ್ರದಲ್ಲಾಯಿತು. ವಯಸ್ಕರ ಶಿಕ್ಷಣ ಪ್ರಾರಂಭಿಸಿದ ಹೆಗ್ಗಳಿಕೆ ಇಮಾಮರದಾಯಿತು. ಗ್ರಾಮಾಂತರ ಪ್ರದೇಶಗಳಲ್ಲಿ ಅನಕ್ಷರಸ್ಥ ವಯಸ್ಕರು ಬಹು ಸಂಖ್ಯೆಯಲ್ಲಿದ್ದುದನ್ನು ಗಮನಿಸಿದ ಇಮಾಮರು ಅವರಿಗೆ ಕನಿಷ್ಠ ಪಕ್ಷ ಓದು ಬರಹ ಬರುವಷ್ಟಾದರೂ ಶಿಕ್ಷಣವನ್ನು ಕೊಡಬೇಕೆಂಬ ನಿರ್ಧಾರ ಕೈಗೊಂಡರು. ಇದಕ್ಕಾಗಿ ನ್ಯಾಯ

ವಿಧಾಯಕ ಸಭೆಯೊಂದನ್ನು ಸೇರಿಸಿ (ಶ್ರೀ ಬಿ.ಎಂ.ಶ್ರೀಕಂಠಯ್ಯನವರು ನ್ಯಾಯ ವಿಧಾಯಕ ಸಭೆಯ ಅಧ್ಯಕ್ಷರು) ಅದರ ಸಲಹೆಯ ಪ್ರಕಾರ ಒಂದು ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿಯು ವರದಿಯನ್ನಾಧರಿಸಿ ವಯಸ್ಕರ ಶಿಕ್ಷಣದ ಒಂದು ಯೋಜನೆಯನ್ನು ತಯಾರಿಸಲಾಯಿತು. ಈ ಯೋಜನೆಯಂತೆ ಈಗಾಗಲೆ ಶಾಲೆಗಳಲ್ಲಿ ಪಾಠ ಕಲಿಸುತ್ತಿರುವ ಉಪಾಧ್ಯಾಯರುಗಳಿಗೆ 5 ರಿಂದ 10 ರೂಪಾಯಿಗಳವರೆಗೆ ಹೆಚ್ಚುವರಿ ಸಂಭಾವನೆಯನ್ನು ಕೊಟ್ಟು ಅನಕ್ಷರಸ್ಥರಿಗೆ ಅಕ್ಷರಾಭ್ಯಾಸವನ್ನು ಮಾಡಿಸುವ ಜವಾಬ್ದಾರಿಯನ್ನು ವಹಿಸಲಾಯಿತು. ಈ ಯೋಜನೆಯಿಂದಾಗಿ ಕಡಿಮೆ ಸಂಬಳದಿಂದ ಅತೃಪ್ತರಾಗಿದ್ದ ಉಪಾಧ್ಯಾಯರಿಗೆ ಸಹಾಯ ಮಾಡಿದಂತೆಯೂ ಆಯಿತು. ಹಾಗೆಯೇ ವಯಸ್ಕರ ಶಿಕ್ಷಣವೂ ಸರಕಾರಕ್ಕೆ ವಯಸ್ಕ ಶಿಕ್ಷಣ ವ್ಯವಸ್ಥೆಯು ಬರೇ ಅಧಿಕಾರಿಗಳಿಂದಲೇ ತುಂಬಿ ಹೋಗಿ ಯಾವ ನಿರೀಕ್ಷಿತ ಫಲವನ್ನೂ ನೀಡದೆ ಇದ್ದುದ್ದನ್ನು ಖಂಡಿಸಬೇಕಾದದ್ದು ಒಂದು ರೀತಿಯಲ್ಲಿ ವಿಪರ್ಯಾಸ ಎನ್ನಬಹುದು, ಏನೇ ಆದರೂ ಬಹಳ ಹಿಂದೆಯೇ ಇಂತಹ ಯೋಜನೆಯೊಂದನ್ನು ಪ್ರಥಮ ಬಾರಿಗೆ ಯೋಜಿಸಿ ಕಾರ್ಯರೂಪಕ್ಕೆ ತಂದ ಕೀರ್ತಿ ಇಮಾಮರಿಗೆ ಸಲ್ಲುತ್ತದೆ.

### ಮಾನವೀಯತೆಯನ್ನು ಮೆರೆದ ಸಚಿವರು:

ಶ್ರೀ ಮಹಮ್ಮದ್ ಇಮಾಂ ಸಾಬ್ ಮಹಾರಾಜರ ಸರ್ಕಾರಕ್ಕೆ ನಿಷ್ಠರಾಗಿದ್ದವರು. ಅವರು ಸಚಿವರಾಗಿದ್ದ ಕಾಲದಲ್ಲಿ ಮೈಸೂರು ಪ್ರಾಂತ್ಯದಲ್ಲಿ ಕಾಂಗ್ರೆಸ್ ನೇತೃತ್ವದ ಸ್ವಾತಂತ್ರ್ಯ ಚಳುವಳಿ ಬಹಳ ತೀವ್ರ ಸ್ವರೂಪ ಪಡೆದುಕೊಂಡಿತ್ತು. ಎಲ್ಲ ಕಡೆಯೂ ಚಳುವಳಿಗಳು ಪ್ರಾರಂಭವಾಗಿದ್ದವು. ಮಹಾರಾಜರ ಸರ್ಕಾರ ಚಳುವಳಿಯನ್ನು ಹತ್ತಿಕ್ಕಲು ಪ್ರಯತ್ನಿಸಿತು. ವಿದ್ಯಾರ್ಥಿಗಳು ಬಹಳ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಒಬ್ಬ ಸಚಿವರಾಗಿ ಇಮಾಮರು ಚಳುವಳಿಯನ್ನು ಶಮನ ಮಾಡಲು ಪ್ರಯತ್ನಿಸಿದರು. ಅವರು ಆಗ ವಿದ್ಯಾಮಂತ್ರಿಯ ಜೊತಗೆ ರೈಲ್ವೆ ಮಂತ್ರಿಯೂ ಆಗಿದ್ದರು. ನಂತರ ನ್ಯಾಯ ಮತ್ತು ಪೋಲೀಸ್ ಖಾತೆಯ ಮಂತ್ರಿಗಳಾಗಿದ್ದರು. ಶ್ರೀ ರಾಮನಾಥನ್ ರವರು ನಿವೃತ್ತರಾದ ನಂತರ ಪೊಲೀಸ್ ಖಾತೆಯನ್ನು ಇವರಿಗೆ ವಹಿಸಿಕೊಡಲಾಯಿತು. ಇಷ್ಟೆಲ್ಲಾ ಅಧಿಕಾರವಿದ್ದರೂ ಯಾವ ಸಮಯದಲ್ಲೂ ಚಳುವಳಿಗಾರರ ಮೇಲೆ ಪರ್ದ, ದೌರ್ಜನ್ಯಗಳನ್ನು ತೋರಿಸದೆ ಅತ್ಯಂತ ಸಂಯಮದಿಂದ ತಮ್ಮ ಕಾರ್ಯವನ್ನು ನಿರ್ವಹಿಸಿದರು. ಇಲ್ಲಿ ಆಗ ನಡೆದ ಎರಡು ಘಟನೆಗಳನ್ನು ಉದಾಹರಿಸುವುದರ ಮೂಲಕ ಇಮಾಮರು ಎಂತಹ ಮಾನವೀಯ ಅಂತಃಕರಣದ ವ್ಯಕ್ತಿಯಾಗಿದ್ದರು ಎನ್ನುವುದನ್ನು ನಾವು ಅರ್ಥ ಮಾಡಿಕೊಳ್ಳಬಹುದು.

ಒಂದು ಬಾರಿ ವಿದ್ಯಾರ್ಥಿ ಚಳುವಳಿ ತೀವ್ರವಾಗಿದ್ದಾಗ ವಿದ್ಯಾರ್ಥಿಗಳು ಚಳುವಳಿಯಲ್ಲಿ ಭಾಗವಹಿಸಿದರೆ ಅವರ ಭವಿಷ್ಯದ ಮೇಲಾಗುವ ಪ್ರತಿಕೂಲ ಪರಿಣಾಮವನ್ನು ಗಮನದಲ್ಲಿಟ್ಟುಕೊಂಡು ಇಮಾಮರು ಸ್ವತಹ ವಿದ್ಯಾರ್ಥಿಗಳನ್ನು ಸಮಾದಾನ ಪಡಿಸಿ ಶಾಲಾ ಕಾಲೇಜುಗಳಿಗೆ ಕಳುಹಿಸಿಕೊಡಲು ಪ್ರಯತ್ನಿಸಿದರು. ಅದು ಫಲಪ್ರದವಾಗದೆ ಇದ್ದಾಗ ಮೈಸೂರು ಕಾಲೇಜಿಗೆ ಭೇಟಿಕೊಟ್ಟು ಘೋಷಣೆಗಳನ್ನು ಕೂಗುತ್ತಿದ್ದ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಭಾಷಣ ಮಾಡಲು ಪ್ರಯತ್ನಿಸಿದರು. ಆಗ ವಿದ್ಯಾರ್ಥಿ ನಾಯಕರಾಗಿದ್ದ (ನಂತರ ರೆವಿನ್ಯೂ ಸಚಿವರಾದ) ಎಂ.ವಿ. ಕೃಷ್ಣಪ್ಪನವರು "ಸಚಿವರ ಭಾಷಣವನ್ನು ಕೇಳಬೇಡಿ, ಈ ಕಡೆ ಬನ್ನಿ" ಎಂದು

ವಿದ್ಯಾರ್ಥಿಗಳನ್ನು ಬೇರೆಕಡೆಗೆ ಕರೆದೊಯ್ದುದ್ದನ್ನು ಇಮಾಮರು ನೆನಪಿಸಿಕೊಳ್ಳುತ್ತಿದ್ದರು. ಸಚಿವರು ತಮ್ಮ ಪ್ರಯತ್ನವನ್ನು ಬಿಡದೆ ಶಿವಮೊಗ್ಗ, ದಾವಣಗೆರೆಗೆ ಭೇಟಿ ಕೊಟ್ಟು ಅಲ್ಲೂ ವಿದ್ಯಾರ್ಥಿಗಳ ದೃಢನಿರ್ಧಾರವನ್ನು ಮನಗಂಡ ಸಚಿವರು ಶಾಲಾ ಕಾಲೇಜುಗಳನ್ನು ಕೆಲವು ಕಾಲ ಮುಚ್ಚಿಸುವ ನಿರ್ಧಾರ ಕೈಗೊಂಡರು.

ಮತ್ತೊಂದು ಘಟನೆಯೆಂದರೆ, 'ಭಾರತ ಬಿಟ್ಟು ತೊಲಗಿ' ಚಳುವಳಿಯಲ್ಲಿ ಭಾಗವಹಿಸಿದ್ದ ಸಾವಿರಾರು ಜನರನ್ನು ಜೈಲಿಗೆ ಹಾಕಲಾಗಿತ್ತು. ಅವರಿಗೆ ಪ್ರತಿನಿತ್ಯ ಒಳ್ಳೆಯ ಊಟದ ವ್ಯವಸ್ಥೆಯನ್ನು ಮಾಡಲಾಗಿತ್ತು. ಆ ವ್ಯವಸ್ಥೆ ಎಷ್ಟು ಚೆನ್ನಾಗಿತ್ತೆಂದರೆ ಜೈಲಿನಿಂದ ಬಿಡುಗಡೆಗೊಂಡ ಕೆಲವರ ತೂಕ ಹೆಚ್ಚಾಗಿದ್ದು ಕಂಡು ಬಂದಿತು ಎಂದು ಹೇಳುತ್ತಿದ್ದರು. ಜೈಲಿನಲ್ಲಿದ್ದ ಕೆಲವರು ಹಲವಾರು ಕಾರಣಗಳಿಂದಾಗಿ ಹಂಗಾಮಿಯಾಗಿ ಬಿಡುಗಡೆ ಮಾಡಬೇಕೆಂದು ಕೇಳಿಕೊಳ್ಳುತ್ತಿದ್ದರು. ಹಾಗೆ ಬಿಡುಗಡೆಯನ್ನು ಕೋರಿ ಬಂದ ಅರ್ಜಿಗಳನ್ನು ಪರಿಶೀಲನೆಗಾಗಿ ಸಂಬಂಧಪಟ್ಟ ಡೆಪ್ಯೂಟಿ ಕಮೀಷನರ್ ಮತ್ತು ಪೋಲೀಸ್ ಸೂಪರಿಂಟೆಂಡೆಂಟ್‌ರವರಿಗೆ ಕಳುಹಿಸಿಕೊಡಲಾಗುತ್ತಿತ್ತು. ಅವರ ಶಿಫಾರಸ್ಸಿನ ಮೇಲೆ ಕೆಲವರನ್ನು ಬಿಡುಗಡೆ ಮಾಡಲಾಗುತ್ತಿತ್ತು ಮತ್ತೆ ಕೆಲವರ ಅರ್ಜಿಗಳನ್ನು ತಿರಸ್ಕರಿಸಲಾಗುತ್ತಿತ್ತು. ಈ ನಿಯಮದಿಂದಾಗಿ ಹಲವು ಕೈದಿಗಳು ತೀವ್ರ ತೊಂದರೆಗೊಳಗಾಗಿದ್ದರು. ಶ್ರೀ ಇಮಾಮರು ಪೋಲೀಸ್ ಖಾತೆ ವಹಿಸಿಕೊಂಡ ನಂತರ ಮಾಡಿದ ಕೆಲಸವೆಂದರೆ ಆಗ ಕೈದಿಯಾಗಿದ್ದ ಶಿವಮೊಗ್ಗ ರತ್ನಮ್ಮ ಮಾಧವರಾವ್ ಅವರು ತಮ್ಮ ಮಗುವಿಗೆ ಕಾಯಿಲೆಯಾಗಿರುವುದರಿಂದ ತಮ್ಮನ್ನು ಹಂಗಾಮಿಯಾಗಿ ಬಿಡುಗಡೆ ಮಾಡಬೇಕೆಂದು ಸಲ್ಲಿಸಿದ ಅರ್ಜಿಯನ್ನು ತಕ್ಷಣವೆ ಪುರಸ್ಕರಿಸಿ ಅವರನ್ನು ಪೆರೋಲ್ ಮೇಲೆ ಬಿಡುಗಡೆ ಮಾಡಬಹುದೆಂದು ಅರ್ಜಿಯ ಮೇಲೆ ಆಜ್ಞೆ ಮಾಡಿದ್ದು. ಹೀಗೆ ಬಂದ ಹಲವಾರು ಅರ್ಜಿಗಳನ್ನು ಅವರುಗಳು ಕೊಟ್ಟ ಕಾರಣಗಳು ನಿಜವೆಂದು ಕಂಡುಬಂದ ಕೂಡಲೆ ಬಿಡುಗಡೆಗೆ ಆಜ್ಞೆ ಮಾಡುತ್ತಿದ್ದರು. ಹೀಗೆ ಬಿಡುಗಡೆ ಮಾಡುವ ಮೊದಲು ಸ್ಥಳೀಯ ಅಧಿಕಾರಿಗಳ ಅಭಿಪ್ರಾಯವನ್ನು ಪಡೆಯುವುದು ಸೂಕ್ತವೆಂದು ದಿವಾನ್ ಮಾಧವರಾಯರು ಸೂಚಿಸಿದಾಗ ಇಮಾಮರು "ಬಿಡುಗಡೆಯಾಗಿರುವವರೆಲ್ಲರೂ ನನ್ನ ಸ್ನೇಹಿತರು ಮತ್ತು ಪರಿಚಯಸ್ಥರು. ಅವರಲ್ಲಿ ನನಗೆ ನಂಬಿಕೆ ಇದೆ. ಅವರ ಬಿಡುಗಡೆಯಿಂದ ಆಕ್ಷೇಪಣೀಯವಾದ ಯಾವ ನಡುವಳಿಕೆಯೂ ಬರುವುದಿಲ್ಲ" ಎಂದು ಭರವಸೆ ಕೊಟ್ಟರು. ಹೀಗೆ ನೂರಾರು ಜನರನ್ನು ಬಿಡುಗಡೆ ಮಾಡಲಾಯಿತು. ಆ ಪಟ್ಟಿಯಲ್ಲಿ ಚಂಗಲರಾಯರೆಡ್ಡಿ, ಹೆಚ್.ಕೆ. ದಾಸಪ್ಪ, ಕೆ. ಹನುಮಂತಯ್ಯ ಹುಲ್ಲೂರು ಶ್ರೀನಿವಾಸ ಜೋಯಿಸರು, ಪಾಳ್ಳಿ ಸೀತಾರಾಮಯ್ಯ, ಎಸ್. ಚೆನ್ನಯ್ಯ ಮೊದಲಾದವರು ಇದ್ದರು.

## ಅಭಿವೃದ್ಧಿ ಕಾರ್ಯಕ್ರಮಗಳು:

ಶ್ರೀ ಇಮಾಮರ ಕಾರ್ಯ ದಕ್ಷತೆಯನ್ನು ಪರಿಗಣಿಸಿ ಕೆಲಕಾಲದ ನಂತರ ವಿದ್ಯುಚ್ಛಕ್ತಿ, ಲೋಕೋಪಯೋಗಿ ಇಲಾಖೆ, ನೀರಾವರಿ, ರೈಲ್ವೆ, ಅಬ್ಕಾರಿ, ಸಹಕಾರಿ ಖಾತೆಗಳನ್ನು ಅವರಿಗೆ ಕೊಡಲಾಯಿತು. ಇವರ ಕಾಲದಲ್ಲಿ ವಿದ್ಯುಚ್ಛಕ್ತಿ ಹಾಗೂ ನೀರಾವರಿ ಕ್ಷೇತ್ರಗಳಲ್ಲಿ ಗಮನಾರ್ಹವಾದ ಕೆಲಸಗಳು ನಡೆದವು. ಜಗಳೂರು ತಾಲ್ಲೂಕಿನಲ್ಲಿ ಜಿನಗಿಹಳ್ಳ ಗಡಿ ಮಾಕುಂಟೆಹಳ್ಳಿ, ಬಿಳಿಚೋಡು ಹಳ್ಳಗಳಿಗೆ ಒಡ್ಡುಗಳನ್ನು ಹಾಕಿ ಕೆರೆಗಳನ್ನು ಕಟ್ಟಲು ಏರ್ಪಾಡು ಮಾಡಲಾಯಿತು. ಈ ಕೆರೆಗಳು

ಈಗಲೂ ಉಪಯೋಗದಲ್ಲಿದೆ. ಸುಮಾರು 400 ಎಕರೆ ಪ್ರದೇಶಕ್ಕೆ ನೀರಾವರಿ ಸೌಕರ್ಯ ದೊರೆಯಿತು. ಇದಲ್ಲದೆ ಇರ್ಕಸಂದ್ರ, ಗಾಣದ ಹುಣಿಸೆ, ತುಂಗಾ ಅಣೆಕಟ್ಟೆ, ನುಗೂ ಜಲಾಶಯ ಇವುಗಳ ಕಾಮಗಾರಿಗಳೂ ನಡೆದು ನೀರಾವರಿ ಸೌಕರ್ಯವನ್ನು ಒದಗಿಸಲಾಯಿತು, ಇಮಾಮರು ಸಚಿವರಾಗಿದ್ದ ಕಾಲದಲ್ಲೆ ಜೋಗ್ ವಿದ್ಯುಚ್ಛಕ್ತಿ ಕಾಮಗಾರಿಯಲ್ಲಿ ಮುಖ್ಯವಾದ ಕೆಲಸಗಳೆಲ್ಲ ಮುಗಿದು 1,20,000 ಕಿಲೋವ್ಯಾಟಿನಷ್ಟು ವಿದ್ಯುತ್‌ನ್ನು ಉತ್ಪಾದಿಸಿ ಹಂಚುವ ವ್ಯವಸ್ಥೆ ಮಾಡಲಾಯಿತು. ಕೆಲಸಕ್ಕೆ ಕಂಟ್ರಾಕ್ಟರುಗಳನ್ನು ನೇಮಿಸುವ ಪದ್ಧತಿ ಆಗ ಇರಲಿಲ್ಲ. ದೊಡ್ಡ ದೊಡ್ಡ ಕಾಮಗಾರಿಗಳನ್ನು ಇಂಜಿನಿಯರುಗಳೆ ಅಮಾನಿಯಾಗಿ ಮಾಡಿಸುತ್ತಿದ್ದರು. ಇದರಿಂದಾಗಿ ಕೆಲಸಗಳು ಸುಗಮವಾಗಿ ನಡೆದು ಹಣವೂ ಹೆಚ್ಚು ಖರ್ಚಾಗುತ್ತಿರಲಿಲ್ಲವೆಂದು ಇಮಾಮರು ಹೇಳುತ್ತಿದ್ದರು. 1943-44 ರಲ್ಲಿ ಎರಗಿದ ಭಾರಿ ಸಿಡಿಲಿನಿಂದಾಗಿ ಶಿವನ ಸಮುದ್ರದ ವಿದ್ಯುತ್ ಕೇಂದ್ರದ ಎಲ್ಲಾ ಯಂತ್ರಗಳು ಸುಟ್ಟು ಹೋಗಿ ರಾಜ್ಯದಲ್ಲೆಲ್ಲಾ ವಿದ್ಯುತ್ ಸಂಚಾರ ನಿಂತುಹೋಯಿತು. ಆಗ ಇಮಾಮರ ನೇತೃತ್ವದಲ್ಲಿ ಸುಟ್ಟು ಹೋದ ಸಲಕರಣೆಗಳನ್ನು ಕೇವಲ ಎರಡು ತಿಂಗಳಲ್ಲಿ ಪುನರುಜ್ಜೀವನಗೊಳಿಸಲಾಯಿತು. ಆವಶ್ಯಕ ಸಾಮಗ್ರಿಗಳನ್ನು (ಭಾರತ) ಸರ್ಕಾರದ ಮಿಲಿಟರಿ ಇಲಾಖೆಯಿಂದ ತರಿಸಲ್ಪಟ್ಟವು. ಕೆಲವು ಅಗತ್ಯ ಉಪಕರಣಗಳನ್ನು ಇಂಗ್ಲೆಂಡಿನಿಂದ ತರಿಸಲಾಯಿತು. ಅಷ್ಟು ಶೀಘ್ರಗತಿಯಲ್ಲಿ ಧಕ್ಷತೆಯಿಂದ ಕಾರ್ಯನಿರ್ವಹಿಸಿದ ಮೈಸೂರಿನ ಇಂಜಿನಿಯರುಗಳಿಗೆ ದೇಶದಲ್ಲೆಲ್ಲಾ ಪ್ರಾಶಸ್ತ್ಯ ದೊರೆಯಿತು.

ರೈಲ್ವೆ ಇಲಾಖೆಯನ್ನೂ ಬಹಳಷ್ಟು ಅಭಿವೃದ್ಧಿಗೊಳಿಸಿದ ಕೀರ್ತಿ ಇಮಾಮ್‌ಸಾಬ್ ರವರಿಗೆ ಸಲ್ಲುತ್ತದೆ. ಇವರ ಕಾಲದಲ್ಲಿ ಚಾಮರಾಜನಗರದಿಂದ ಸತ್ಯಮಂಗಲಕ್ಕೆ ರೈಲು ಮಾರ್ಗ ನಿರ್ಮಿಸಲು ಯೋಜನೆಯನ್ನು ತಯಾರಿಸಿ ಅನುಮತಿಗಾಗಿ ಭಾರತ ಸರ್ಕಾರಕ್ಕೆ ಕಳುಹಿಸಲಾಯಿತು. ಆದರೆ ದುರದೃಷ್ಟದಿಂದ ಅನುಮತಿಯನ್ನು ನೀಡಲಿಲ್ಲ. ದಾವಣಗೆರೆ ಮತ್ತು ಚಿಕ್ಕಜಾಜೂರು ರೈಲ್ವೆ ಸ್ಟೇಷನ್‌ಗಳು ಮಾತ್ರ ಇವರ ಕಾಲದಲ್ಲಿ ಕಟ್ಟಲ್ಪಟ್ಟವು.

### ಸರಳ ನಿಸ್ವಾರ್ಥ ರಾಜಕಾರಣಿ:

ಸಚಿವರಾಗಿ ನಾಲ್ಕು ವರ್ಷಗಳ ಅವಧಿ ಮುಗಿದ ನಂತರ ಶ್ರೀ ಇಮಾಮರು ತುಮಕೂರು, ಚಿತ್ರದುರ್ಗ ಮುಸ್ಲಿಂ ಕ್ಷೇತ್ರದಿಂದ ಶಾಸನ ಸಭೆಗೆ ಮತ್ತೆ ಚುನಾಯಿತರಾದರು. ಅವರಿಗೆ ಮತ್ತೊಮ್ಮೆ ಮಂತ್ರಿಯಾಗುವ ಅವಕಾಶವಿತ್ತು. ಆದರೆ ಮಹಾರಾಜರು ಖಾಸಗಿ ಸಚಿವರಾಗಲು ಹೊಸಬರಿಗೆ ಅವಕಾಶ ಕೊಡಬೇಕೆಂಬ ನೀತಿಯನ್ನು ಅನುಸರಿಸಿದುದರಿಂದ ಇಮಾಮ್ ಸಾಬ್ ಹಾಗೂ ಗುಂಡಪ್ಪಗೌಡರು ನಿವೃತ್ತರಾಗಬೇಕಾಯಿತು. ಇಮಾಮರ ಸ್ನೇಹಿತರು ಅವರು ಬೆಂಗಳೂರಿನಲ್ಲಿಯೇ ನೆಲಸಬೇಕೆಂದು ಒತ್ತಾಯಿಸಿದರು. ಬೆಂಗಳೂರಿನಲ್ಲಿಯೆ ಇದ್ದರೆ ಯಾವುದಾದರೊಂದು ಪದವಿ ದೊರಕಬಹುದೆಂದು ಸ್ನೇಹಿತರ ಅಭಿಪ್ರಾಯವಾಗಿತ್ತು. ಆದರೆ ಇಮಾಮರು ಇದಕ್ಕೆ ಸಮ್ಮತಿಸಲಿಲ್ಲ. ರಾಜಕೀಯವೆನ್ನುವುದು ಉದರ ಪೋಷಣೆಯ ಮಾರ್ಗವೂ ಅಲ್ಲ ಅದೊಂದು ಶಾಶ್ವತವಾದ ಜೀವನ ಮಾರ್ಗವೂ ಅಲ್ಲ ಎನ್ನುವುದು ಅವರ ಧೋರಣೆ. ಅವರೇ ಹೇಳುವಂತೆ "ನಿಜವಾದ ಸೇವೆ ಮಾಡುವವನು ಸ್ವಾರ್ಥ ಸಾಧನೆಗಾಗಿ ದುರುಪಯೋಗಪಡಿಸಿಕೊಂಡರೆ ಅದು ನಂಬಿಕೆ ದ್ರೋಹವಾಗಿ ಹೀನಕಾರ್ಯವಾಗುತ್ತದೆ" ಹೀಗೆಂದುಕೊಂಡ ಅವರು ಸೀದಾ ಬೆಂಗಳೂರಿನಿಂದ

ಜಗಳೂರಿಗೆ ಹಿಂದಿರುಗಿ ಬಂದು ಎಂದಿನಂತೆ ಅವರ ಹಳೆಯ ಸ್ನೇಹಿತರ, ಬಂಧುಗಳ ಮತ್ತು ರೈತರ ಮಧ್ಯೆ ಸೇರಿ ವ್ಯವಸಾಯ ವೃತ್ತಿಯನ್ನು ಕೈಗೊಂಡರು. ಸಚಿವರಾಗಿದ್ದನ್ನು ಸಂಪೂರ್ಣ ಮರೆತು ಹಳ್ಳಿಯ ಸ್ನೇಹಿತರೊಡನೆ ಹಳ್ಳಿಯವನ ಹಾಗೆ ತಿರುಗಾಡಲು ಪ್ರಾರಂಭಿಸಿದರು. ಆ ಸಮಯದಲ್ಲಿ ಅವರು ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ ಮುಂದುವರೆದರು. ಆ ಸಭೆಯಲ್ಲಿ ವಿರೋಧ ಪಕ್ಷವಾದ ಪ್ರಜಾ ಸೋಷಿಯಲಿಸ್ಟ್ ಪಾರ್ಟಿಯ ನಾಯಕರಾಗಿ ರೈತರ ಪರ ಹೋರಾಡಿದರು.

ಶ್ರೀ ಇಮಾಮ್‌ರವರು ಸಚಿವ ಸ್ಥಾನದಿಂದ ನಿವೃತ್ತರಾದ ಕಾಲದಲ್ಲಿ ದಿವಾನರನ್ನಾಗಿ ಶ್ರೀ ಎನ್.ಮಾಧವರಾಯರ ಸ್ಥಾನಕ್ಕೆ ಶ್ರೀ ಅರ್ಕಾಟ್ ರಾಮಸ್ವಾಮಿ ಮೊದಲಿಯಾರರನ್ನು ನೇಮಕ ಮಾಡಲಾಯಿತು. ಇದರಿಂದಾಗಿ ತಮಗೆ ಅಸಂತೋಷವಾಯಿತೆಂದು ಇಮಾಮರು ಹೇಳುತ್ತಾರೆ. ಅವರ ಅಭಿಪ್ರಾಯದಲ್ಲಿ ಮೈಸೂರಿನಲ್ಲಿಯೇ ನುರಿತು ಅರಿತವರು ದಿವಾನರಾಗಿದ್ದರೆ ಮೈಸೂರಿನವರಿಗೆ ಹೆಚ್ಚು ಪ್ರಯೋಜನವಾಗುತ್ತಿತ್ತು. ಅಲ್ಲದೆ ಮೈಸೂರಿನವರಿಗೆ ಹೆಚ್ಚು ಹೊರಗಿನವರನ್ನು ತಂದರೆ ಮೈಸೂರಿನವರ ಆತ್ಮಗೌರವಕ್ಕೆ ಕುಂದಾಗುವುದೆಂದು ಅವರಿಗನ್ನಿಸಿತ್ತು. ರಾಮಸ್ವಾಮಿ ಮೊದಲಿಯಾರರ ಬಗ್ಗೆ ಅವರ ಅಸಂತೋಷಕ್ಕೆ ಇನ್ನೊಂದು ಕಾರಣವೂ ಇತ್ತು. ಅದುವರೆವಿಗೂ ದಿವಾನರಿಗೇ ಆಗಲಿ, ಸಚಿವರಿಗೇ ಆಗಲಿ ಸಭೆ ಸಮಾರಂಭಗಳಲ್ಲಿ ರಜತ ಕರಂಡವನ್ನು ಕೊಡುವ ಸಂಪ್ರದಾಯವಿರಲಿಲ್ಲ. ನಿಯಮವೂ ಇರಲಿಲ್ಲ. ಈ ವಿಶೇಷ ಗೌರವವು ಮಹಾರಾಜರಿಗೆ ಮಾತ್ರ ಸಲ್ಲುತ್ತಿತ್ತು. ಇಮಾಮರು ಸಚಿವರಾಗಿದ್ದಾಗ ಬೆಳ್ಳೇರಿಯ ಮುನಿಸಿಪಾಲಿಟಿಯವರು ಮತ್ತು ವರ್ತಕ ಸಂಘದವರು ಅವರಿಗೆ ಭಿನ್ನವತ್ತಳೆಯನ್ನು ಅರ್ಪಿಸಲು ಬಂದಾಗ, ಆ ಮರ್ಯಾದೆ ಶ್ರೀ ಮನ್ಮಹಾರಾಜರಿಗೆ ಮಾತ್ರ ಸಲ್ಲತಕ್ಕದ್ದೆಂದು ಅವರಿಗೆ ತಿಳಿಸಿ ಅದನ್ನು ವಿನಿಯಪೂರ್ವಕವಾಗಿ ತಿರಸ್ಕರಿಸಿದ್ದರು. ಶ್ರೀ ರಾಮಸ್ವಾಮಿ ಮೊದಲಿಯಾರರು ಆ ಸಂಪ್ರದಾಯವನ್ನು ಮುರಿದು ಪ್ರತಿ ಸಭೆ ಸಮಾರಂಭಗಳಲ್ಲಿ ಗೌರವದ ಪ್ರತೀಕಗಳನ್ನು ಸ್ವೀಕರಿಸಲು ಪ್ರಾರಂಭಿಸಿದರು. ಒಂದು ಬಾರಿ ಅವರು ಚಿನ್ನದ (ಕ್ಯಾಸ್‌ಕೆಟ್) ಗಳನ್ನು ಸಹ ಸ್ವೀಕರಿಸಿದರು. ದಿವಾನರ ಈ ನಡತೆ ಇಮಾಮರಿಗೆ ಸಹಜವಾಗಿಯೇ ಹಿಡಿಸಲಿಲ್ಲ,

## ಮಧ್ಯಪಾನ ನಿರೋಧ ನೀತಿ:

ಈ ಸಮಯದಲ್ಲಿ ಪಾನ ನಿರೋಧ ಜಾರಿಗೆ ತರಬೇಕೆಂದು ಕಾಂಗ್ರೆಸ್ಸಿಗರು ಚಳುವಳಿ ಮಾಡುತ್ತಿದ್ದರು. ಮದ್ರಾಸ್ ಹಾಗೂ ಬೊಂಬಾಯಿಯಲ್ಲಿ ಪಾನನಿರೋಧ ಜಾರಿಗೆ ತರಬೇಕೆಂದು ಕಾಂಗ್ರೆಸ್ಸಿನವರು ಒತ್ತಾಯಿಸುತ್ತಿದ್ದರು. ಮೈಸೂರು ರಾಜ್ಯದ ರಾಮನಗರದಲ್ಲಿ ಮಾತ್ರ ಪಾನನಿರೋಧ ಜಾರಿಯಲ್ಲಿತ್ತು. ಪಾನನಿರೋಧವನ್ನು ಜಾರಿಗೆ ತಂದಲ್ಲಿ ರಾಜ್ಯಕ್ಕೆ ಆರ್ಥಿಕವಾಗಿ ನಷ್ಟವಾಗುತ್ತದೆಂದು ಸರ್ಕಾರದ ಅಭಿಪ್ರಾಯವಾಗಿತ್ತು. ಆದರೂ ಕಾಂಗ್ರೆಸ್ಸಿನ ಒತ್ತಾಯಕ್ಕೆ ಮಣಿದು ಪಾನನಿರೋಧ ಸಮಿತಿಯನ್ನು ಸರ್ಕಾರವು ನೇಮಿಸಿತು. ಅದಕ್ಕೆ ಶ್ರೀ ಇಮಾಮರೆ ಅಧ್ಯಕ್ಷರು. ಸಮಿತಿಯು ಅನೇಕ ಜನರ ಸಾಕ್ಷ್ಯವನ್ನು ಕೇಳಿತು. ಅವರಲ್ಲಿಯೇ ಅನೇಕ ಅಭಿಪ್ರಾಯಗಳಿದ್ದವು. ಕೆಲವರು ಪಾನನಿರೋಧ ಯಶಸ್ವಿಯಾಗುವುದಿಲ್ಲವೆಂದೂ, ಅವರಿಂದಾಗಿ ಕಳ್ಳಭಟ್ಟಿ ತಯಾರಿಕೆ ಹೆಚ್ಚಾಗಿ ಕುಡಿತವೂ ಹೆಚ್ಚಾಗುತ್ತದೆಂದು ಅಭಿಪ್ರಾಯಪಟ್ಟರೆ, ಇನ್ನು ಕೆಲವರು ಅದಕ್ಕೆ ವಿರುದ್ಧವಾಗಿ

ಪಾನನಿರೋಧದಿಂದ ಬಡವರ ಮತ್ತು ನಿಮ್ನವರ್ಗದವರ ಆರ್ಥಿಕ ಸ್ಥಿತಿಯು ಉತ್ತಮವಾಗುವುದೆಂದೂ, ಹೆಂಡ, ಸರಾಯಿಂದ ಬಂದ ಮಲಿನವಾದ ಹಣದಿಂದ ಸರ್ಕಾರ ನಡೆಸಬಾರದೆಂದೂ ವಾದಿಸಿದರು.

ಈ ಎಲ್ಲ ವಾದವನ್ನು ಆಲಿಸಿದ ಇಮಾಮರ ಸಮಿತಿಯು ಕೊನೆಗೆ ಪಾನನಿರೋಧದ ಪರವಾಗಿ ವರದಿಯನ್ನು ಸಲ್ಲಿಸಿತು. ವರದಿಯಲ್ಲಿ ಪ್ರತಿ ವರ್ಷವೂ ಐದನೇ ಒಂದು ಭಾಗ ಹೆಂಡ ಸರಾಯಿ ಅಂಗಡಿಗಳನ್ನು ರದ್ದುಪಡಿಸುತ್ತಾ ಐದು ವರ್ಷದಲ್ಲಿ ಸಂಪೂರ್ಣ ಪಾನನಿರೋಧ ಜಾರಿಗೆ ತರಬೇಕೆಂದು ಅಭಿಪ್ರಾಯಪಟ್ಟಿತು. ಈ ವರದಿಯನ್ನು ಸರ್ಕಾರ ಒಪ್ಪಿತು. ಆದರೆ ಸರ್ಕಾರ ಐದನೇ ಒಂದು ಭಾಗ ಅಂಗಡಿಯನ್ನು ಮುಚ್ಚಿಸಿದರೂ ಉಳಿದ ಅಂಗಡಿಗಳನ್ನು ಪ್ರತಿವರ್ಷದಂತೆ ಹರಾಜಿನ ಮೂಲಕ ವಿಲೇವಾರಿ ಮಾಡದೆ ಕಂಟ್ರಾ ಕ್ಟರುಗಳಿಗೆ ನೇರವಾಗಿ ವಹಿಸಿಕೊಟ್ಟಿತು. ಇದರಿಂದಾಗಿ ಹರಾಜು ಮೂಲಕ ಸರ್ಕಾರಕ್ಕೆ ಬರುತ್ತಿದ್ದ ವರಮಾನ ನಿಂತುಹೋಯಿತು. ಈ ನಿರ್ಧಾರದಿಂದ ದಿವಾನರ ಮೇಲೆ ಹಲವರು ಆರೋಪವನ್ನು ಮಾಡಿದರು. ಅವರು ಕಂಟ್ರಾಕ್ಟರುಗಳ ಪ್ರಭಾವಕ್ಕೆ ಒಳಗಾಗಿದ್ದಾರೆ ಎನ್ನುವುದು ಹಲವರ ಅಭಿಪ್ರಾಯವಾಗಿತ್ತು. ಇದರ ಬಗ್ಗೆ ನ್ಯಾಯ ವಿಧಾಯಕ ಸಭೆಯಲ್ಲೂ ಬಿಸಿ ಬಿಸಿ ಚರ್ಚೆ ನಡೆಯಿತು.

1947ನೇ ಅಕ್ಟೋಬರಿನಲ್ಲಿ ಕಾಂಗ್ರೆಸ್ ಸರ್ಕಾರವು ಸ್ಥಾಪಿತವಾಯಿತು. ಅದು ಸಂಪೂರ್ಣ ಪಾನನಿರೋಧವನ್ನು ಕೋಲಾರ, ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಕೂಡಲೇ ಜಾರಿಗೆ ತಂದಿತು. ಅಲ್ಲಿಗೆ ಈ ಪ್ರಕರಣವು ಮುಗಿಯಿತು.

### ಸ್ವಾತಂತ್ರ್ಯ ನಂತರದ ರಾಜಕೀಯ:

ಸ್ವಾತಂತ್ರ್ಯ ನಂತರದ ರಾಜಕೀಯದಲ್ಲಿ ಶ್ರೀ ಇಮಾಮರು ಸಕ್ರಿಯವಾಗಿಯೆ ಭಾಗವಹಿಸಿದರು. ಶ್ರೀ ಚಂಗಲರಾಯ ರೆಡ್ಡಿಯವರು 1947ರಲ್ಲಿ ಮುಖ್ಯಮಂತ್ರಿಯಾದಾಗ ಕಾಂಗ್ರೆಸ್‌ಗೆ ಬಹು ಮತವಿದ್ದರೂ ಒಂದೂ ವ್ಯವಸ್ಥಿತವಾದ ವಿರೋಧ ಪಕ್ಷವಿರಲಿಲ್ಲ. ಸರ್ಕಾರದ ಆಡಳಿತದಲ್ಲಿ ಮತ್ತು ನೀತಿಯಲ್ಲಿ ಲೋಪದೋಷಗಳು ಕಂಡುಬರುತ್ತಿದ್ದರೂ ಇದನ್ನೆದುರಿಸಲು ಒಂದು ವಿರೋಧ ಪಕ್ಷವಿಲ್ಲದನ್ನು ಮನಗಂಡು ಇಮಾಮರು ಶ್ರೀಗಳಾದ ಡಿ.ಎಸ್. ಮಲ್ಲಪ್ಪ, ಓ.ವೀರಬದ್ರಪ್ಪ, ಎಂ.ಸಿ.ಲಿಂಗೇಗೌಡರು ಮತ್ತು ಇತರ ಸದಸ್ಯರನ್ನು ಒಟ್ಟುಗೂಡಿಸಿ ಒಂದು ವಿರೋಧ ಪಕ್ಷ ಸರ್ಕಾರದ ನೀತಿ ಹಾಗೂ ಕಾರ್ಯಕ್ರಮಗಳನ್ನು ರಚನಾತ್ಮಕವಾಗಿ ಟೀಕಿಸಿ ಒಂದು ಮಾದರಿ ವಿರೋಧ ಪಕ್ಷವಾಗಿ ಕಾರ್ಯನಿರ್ವಹಿಸಿದ್ದು ಇಮಾಮರ ದೂರದೃಷ್ಟಿ, ಪ್ರಜಾಪ್ರಭುತ್ವದ ಮಾದರಿ ಸರ್ಕಾರದ ಬಗ್ಗೆ ಅವರಿಗಿದ್ದ ಅರಿವನ್ನು ಸೂಚಿಸುತ್ತದೆ. ಹೀಗೆ ರಚಿಸಿದ ವಿರೋಧ ಪಕ್ಷವು ಭಾರತ ದೇಶದ ಯಾವ ಪಕ್ಷಕ್ಕೂ ಸಂಬಂಧಿಸಿದುದಾಗಿರಲಿಲ್ಲ. 1951ರ ನವೆಂಬರ್‌ನಲ್ಲಿ ಶ್ರೀ ಆಚಾರ್ಯ ಕೃಪಲಾನಿಯವರು ಬೆಂಗಳೂರಿಗೆ ಬಂದು ಮೈಸೂರು ಸರ್ಕಾರದ ವಿರೋಧ ಪಕ್ಷದ ಪ್ರಮುಖರನ್ನೆಲ್ಲಾ ಭೇಟಿ ಮಾಡಿ ಆ ಪಕ್ಷವನ್ನು ಅವರ ನೇತೃತ್ವದ ಕೆ.ಎಂ.ಪಿ.ಪಾರ್ಟಿಯಲ್ಲಿ ಮಿಲನಗೊಳ್ಳಬೇಕೆಂದು ಸೂಚಿಸಿದರು. ಅವರು ಈ ಕುರಿತು ಶ್ರೀಯುತ ಇಮಾಮರನ್ನು ಭೇಟಿ ಮಾಡಲು ಬಯಸಿದರು. ಇಮಾಮರು ಆಗ ಅಸ್ವಸ್ಥರಾಗಿ ವಿಕ್ಟೋರಿಯಾ

ಆಸ್ಪತ್ರೆಯಲ್ಲಿದ್ದುದರಿಂದ ಅಲ್ಲಿಯೆ ಅವರನ್ನು ಭೇಟಿಯಾಗಿ ಪ್ರಸ್ತಾಪವನ್ನು ಮುಂದಿಟ್ಟರು. ಇಮಾಮರಿಂದ ಅವಕ್ಕೆ ಒಪ್ಪಿಗೆ ದೊರೆತೊಡನೆ ವಿರೋಧ ಪಕ್ಷವು ಕೆ.ಎಂ.ಪಿ ಪಕ್ಷದಲ್ಲಿ ವಿಲೀನವಾಗಿ 1952ರಲ್ಲಿ ನಡೆದ ಚುನಾವಣೆಯಲ್ಲಿ ಆ ಪಕ್ಷದಿಂದಲೆ ಅವರು ಸ್ಪರ್ಧಿಸಿದರು.

ಮುಂದೆ ಶ್ರೀ ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಯಾದಾಗಲೂ ಮಹಮ್ಮದ್ ಇಮಾಮರು ವಿರೋಧಪಕ್ಷದ ನಾಯಕರಾಗಿ ಮುಂದುವರೆದರು. ಹನುಮಂತಯ್ಯನವರ ಸರ್ಕಾರದ ಹಣಕಾಸು ನೀತಿಯನ್ನು ಇಮಾಮರು ತೀವ್ರವಾಗಿ ಖಂಡಿಸುತ್ತಿದ್ದರು. ಹನುಮಂತಯ್ಯನವರು ವೈಯಕ್ತಿಕವಾಗಿ ಅವರ ಸ್ನೇಹಿತರಾಗಿದ್ದರೂ ಸಹ ರಾಜ್ಯದ ಹಿತಾಸಕ್ತಿಗೆ ಸಂಬಂಧಿಸಿದ ವಿಷಯಗಳಲ್ಲಿ ಅವರು ಯಾವುದೇ ಮುಲಾಜಿಲ್ಲದೆ ಅವರನ್ನು ಟೀಕಿಸುತ್ತಿದ್ದರು. ಆದರೆ ಅವರಿಗೆ ಸರಿ ಎನಿಸಿದ ವಿಷಯಗಳನ್ನು ಉಳಿದವರು ಎಷ್ಟೇ ವಿರೋಧ ವ್ಯಕ್ತಪಡಿಸಿದರೂ ಹನುಮಂತಯ್ಯನವರ ಬೆಂಬಲಕ್ಕೆ ನಿಲ್ಲುತ್ತಿದ್ದರು. ಇದಕ್ಕೆ ಒಂದು ಉತ್ತಮವಾದ ಉದಾಹರಣೆಯೆಂದರೆ ವಿಧಾನಸೌಧದ ನಿರ್ಮಾಣದ ಸಮಯದಲ್ಲಿ ಹನುಮಂತಯ್ಯನವರ ಬೆಂಬಲಕ್ಕೆ ಅವರು ನಿಂತಿದ್ದುದು. ಸುಮಾರು ಎರಡು ಕೋಟಿ ರೂಗಳ ವೆಚ್ಚದಲ್ಲಿ ನಿರ್ಮಾಣವಾಗುತ್ತಿದ್ದ ವಿಧಾನಸೌಧದ ಬಗ್ಗೆ ಎಲ್ಲ ಕಡೆಯಿಂದಲೂ ಟೀಕೆಗಳು ಕೇಳಿಬರುತ್ತಿದ್ದವು. ರಾಜ್ಯದ ಅಭಿವೃದ್ಧಿಗೆ ವಿನಿಯೋಗವಾಗಬೇಕಿದ್ದ ಹಣ ಕೇವಲ ಒಂದು ಕಟ್ಟಡಕ್ಕೆ ವ್ಯಯವಾಗುತ್ತಿದ್ದುದನ್ನು ಅನೇಕರಿಗೆ ಸಹಿಸಲಾಗಲಿಲ್ಲ. ಆದರೆ ಇಮಾಮರಿಗೆ ಅಂತಹ ಕಟ್ಟಡದ ಅವಶ್ಯಕತೆ ಇದೆ ಎಂಬುದು ಮನವರಿಕೆಯಾಗಿತ್ತು. ವನಮಹೋತ್ಸವ, ಸಂಸ್ಕೃತಿ ಪ್ರಚಾರ, ಸಿಬ್ಬಂದಿ ಖರ್ಚು ಮುಂತಾದ ಭಾವನಾತ್ಮಕ ಕೆಲಸಗಳಿಗೆ ವಿಶೇಷ ಹಣ ಖರ್ಚಾಗುತ್ತಿರುವಾಗ ಈ ಕಟ್ಟಡಕ್ಕೆ ಎರಡು ಕೋಟಿ ರೂಗಳು ಖರ್ಚಾದರೂ ಚಿಂತೆಯಿಲ್ಲ. ಒಂದು ದಿವ್ಯವಾದ ಸ್ಥಿರವಾದ ಆಸ್ತಿ ದೇಶಕ್ಕೆ ಲಭ್ಯವಾಗುತ್ತದೆಂಬುದು ಅವರ ಭಾವನೆಯಾಗಿತ್ತು. ಮುಂದೊಮ್ಮೆ ಇದನ್ನು ಸಮರ್ಥಿಸುತ್ತಾ ಆಯವ್ಯಯದ ಭಾಷಣದಲ್ಲಿ ಅವರು ಹೀಗೆ ಹೇಳುತ್ತಾರೆ.

"Sri Hanumanthaiah will be remembered for two things, First for having constructed the building in the state and secondly for having created the biggest deficit in the State finance".

ಒಮ್ಮೆ ಹನುಮಂತಯ್ಯನವರು ಇಮಾಮರನ್ನು ಕಟ್ಟಡದ ಕೆಲಸ ನಡೆಯುವಲ್ಲಿಗೆ ಕರೆದುಕೊಂಡು ಹೋಗಿ ಕಟ್ಟಡದ ಮಹಾದ್ವಾರದ ಮೇಲು ಭಾಗದಲ್ಲಿ ಒಂದು ನೀತಿಭೋಧಕವಾದ ಒಂದು ವಾಕ್ಯವನ್ನು ಕೆತ್ತಿಸಬೇಕೆಂದು ಅವರ ಸಲಹೆಯನ್ನು ಕೇಳಿದರು. ಇಬ್ಬರೂ ಯೋಚಿಸಿ 'ಸರ್ಕಾರಿ ಕೆಲಸ ದೇವರ ಕೆಲಸ' **(Government work is God's work)** ಎಂಬ ಪದಗಳನ್ನು ದ್ವಾರದ ಮೇಲೆ ಕೆತ್ತಿಸಬೇಕೆಂದು ಅಲ್ಲಿದ್ದ ಇಂಜಿನಿಯರ್‌ರವರಿಗೆ ಸೂಚಿಸಿದರು.

ಕರ್ನಾಟಕದ ಏಕೀಕರಣದಲ್ಲೂ ಜಗಳೂರು ಇಮಾಮರು ಬಹಳ ಗಮನಾರ್ಹವಾದ ಪಾತ್ರವನ್ನು ವಹಿಸಿದರು. 1953ರಲ್ಲಿ ಮುಖ್ಯಮಂತ್ರಿಗಳಾದ ಕೆಂಗಲ್ ಹನುಮಂತಯ್ಯನವರು ಉತ್ತರ ಕರ್ನಾಟಕದ ಮುಖಂಡರುಗಳ ಕರೆಗೆ ಓಗೊಟ್ಟು ಏಕೀಕರಣದ ಪರವಾಗಿ ಪ್ರಚಾರ ಮಾಡಲು ನಿರ್ಧರಿಸಿದರು. ಉತ್ತರ ಕರ್ನಾಟಕದವರಿಗೆ ಅವರ ಪ್ರದೇಶ ಆಗಿನ ಮೈಸೂರು ರಾಜ್ಯದೊಡನೆ ವಿಲೀನವಾಗಬೇಕೆಂಬ ಇಚ್ಛೆ ಇದ್ದರೆ, ಮೈಸೂರಿನ ಹಲವರಿಗೆ ಅದು ಸುತರಾಂ

ಒಪ್ಪಿಗೆಯಿರಲಿಲ್ಲ. ಉತ್ತರ ಕರ್ನಾಟಕದ ಪ್ರದೇಶಕ್ಕೆ ಹೋಲಿಸಿದರೆ ಮೈಸೂರು ರಾಜ್ಯ ಆರ್ಥಿಕವಾಗಿ ಬಹಳ ಮುಂದುವರಿದಿದ್ದರಿಂದ ಹಿಂದುಳಿದ ಪ್ರದೇಶಗಳನ್ನು ಸೇರಿಸಿಕೊಳ್ಳುವುದರಿಂದ ತಮ್ಮ ರಾಜ್ಯದ ಹಿತಕ್ಕೆ ಧಕ್ಕೆ ಬರುತ್ತದೆಂದು ಅವರ ವಾದವಾಗಿತ್ತು. ಕೆಂಗಲ್ ಹನುಮಂತಯ್ಯನವರು ಈ ವಿರೋಧವನ್ನು ಲೆಕ್ಕಿಸದೆ ಏಕೀಕರಣಕ್ಕೆ ಬೆಂಬಲವಾಗಿ ಜನಾಭಿಪ್ರಾಯವನ್ನು ರೂಪಿಸಲು ಧಾರವಾಡ, ಬಿಜಾಪುರ ಜಿಲ್ಲೆಗಳ ಪ್ರವಾಸ ಕೈಗೊಂಡರು. ಆ ಪ್ರವಾಸಕ್ಕೆ ತಮ್ಮ ಜೊತೆಯಲ್ಲಿ ಆಗ ವಿರೋಧ ಪಕ್ಷದ ನಾಯಕರಾಗಿದ್ದ ಇಮಾಮರನ್ನು ಕರೆದುಕೊಂಡು ಹೋದರು. ಆ ಪ್ರವಾಸದಲ್ಲಿ ಉತ್ತರ ಕರ್ನಾಟಕದ ಜನರು ಮೈಸೂರು ರಾಜ್ಯದೊಡನೆ ವಿಲೀನವಾಗುವುದಕ್ಕೆ ತೋರಿದ ಉತ್ಸಾಹವನ್ನು ನೋಡಿ ಇಬ್ಬರೂ ಕರ್ನಾಟಕದ ಏಕೀಕರಣಕ್ಕೆ ಶ್ರಮಿಸಬೇಕೆಂದು ಸಂಕಲ್ಪ ಮಾಡಿದರು. ಇದಕ್ಕೆ ಮೈಸೂರಿನ ಶಾಸನ ಸಭೆಯ ಬಹಳಷ್ಟು ಸದಸ್ಯರಿಂದ ವಿರೋಧ ವ್ಯಕ್ತವಾಗಿದ್ದರಿಂದ ಉತ್ತರ ಕರ್ನಾಟಕದ ಹಣಕಾಸಿನ ಸ್ಥಿತಿಗತಿಯನ್ನು ವಿಮರ್ಶಿಸಿ ವರದಿಯನ್ನು ಸಲ್ಲಿಸಲು ಶ್ರೀ ಎಂ. ಶೇಷಾದ್ರಿಯವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿಯು ತನ್ನ ವರದಿಯಲ್ಲಿ ಹೊಸದಾಗಿ ಸೇರಲಿರುವ ಪ್ರದೇಶಗಳಲ್ಲಿ ಆದಾಯಕ್ಕಿಂತ ಖರ್ಚು ಜಾಸ್ತಿಯಾಗುತ್ತದೆಂದು ಅಂಕಿ ಅಂಶಗಳ ಆಧಾರದ ಮೇಲೆ ತೋರಿಸಿದ್ದುದರಿಂದ ವಿಧಾನ ಸಭೆಯಲ್ಲಿ ಇದಕ್ಕೆ ವಿರೋಧ ಮತ್ತಷ್ಟು ಜಾಸ್ತಿಯಾಯಿತು. ಇಂತಹ ಸಮಯದಲ್ಲೂ ಇಮಾಮರು ಏಕೀಕರಣದ ಪರವಾಗಿಯೇ ವಾದಿಸಿದರು. ಉತ್ತರ ಕರ್ನಾಟಕದಲ್ಲಿರುವ ಭೂ ಸಂಪತ್ತು, ಖನಿಜ ಸಂಪತ್ತು, ಅರಣ್ಯ ಸಂಪತ್ತು ಮತ್ತು ಏಕೀಕರಣವಾದ ನಂತರ ಉದಯವಾಗಿರುವ ವಿಶಾಲ ಮೈಸೂರಿಗೆ ಬರಲಿರುವ 200 ಮೈಲಿ ಸಮುದ್ರ ತೀರ ಇವನ್ನು ಗಣನೆಗೆ ತೆಗೆದುಕೊಂಡು ಏಕೀಕರಣಕ್ಕೆ ಬೆಂಬಲ ನೀಡಬೇಕೆಂಬುದು ಅವರ ವಾದವಾಗಿತ್ತು. ಇದುವರೆಗೆ ನಮ್ಮಿಂದ ಅಗಲಿದ್ದ ಅಣ್ಣತಮ್ಮಂದಿರನ್ನು ನಮ್ಮಲ್ಲಿಗೆ ಬರಮಾಡಿಕೊಳ್ಳಲು ಎಷ್ಟು ತ್ಯಾಗ ಮಾಡಬೇಕಾಗಿದ್ದರೂ ಅದಕ್ಕೆ ಸಿದ್ಧರಾಗಬೇಕೆಂದು ವಿಧಾನ ಸಭೆಯಲ್ಲಿ ಅವರು ಸ್ಪಷ್ಟ ಮಾತುಗಳಲ್ಲಿ ಹೇಳಿದರು.

ಕರ್ನಾಟಕದ ಏಕೀಕರಣದ ಪರವಾಗಿ ಇಮಾಮರು ಅನುಮೋದಿಸಿದ್ದು ಅವರ ಗೆಳೆಯರಲ್ಲಿ ಅನೇಕರಿಗೆ ಆಶ್ಚರ್ಯವನ್ನುಂಟುಮಾಡಿತು ಏಕೆಂದರೆ ಮಹಾರಾಜರಿದ್ದ ಕಾಲದಲ್ಲಿ ಅವರಿಗೆ ಏಕೀಕರಣದ ಬಗ್ಗೆ ಉತ್ಸಾಹವಿರಲಿಲ್ಲ. ಅವರಿಗೆ ಮಹಾರಾಜರ ಬಗ್ಗೆ ಇಟ್ಟಿದ್ದ ಭಯಭಕ್ತಿಯಿಂದಾಗಿ ಏಕೀಕರಣವಾದರೆ ಮಹಾರಾಜರ ಸ್ಥಾನಕ್ಕೆ ಎಲ್ಲಿ ಚ್ಯುತಿ ಬರುತ್ತದೋ ಎನ್ನುವ ಹೆದರಿಕೆ ಅವರನ್ನು ಕಾಡುತ್ತಿತ್ತು. ಅಲ್ಲದೆ ಮೈಸೂರಿನ ವೈಶಿಷ್ಟವನ್ನು ಕಾಪಾಡಿಕೊಂಡು ಬರಬೇಕೆಂಬುದು ಅವರ ಉದ್ದೇಶವಾಗಿತ್ತು. ಆದರೆ ಬೆಳಗಾವಿ ಹಾಗೂ ಇತರ ಉತ್ತರ ಕರ್ನಾಟಕದ ಪ್ರದೇಶಗಳಿಗೆ ಭೇಟಿ ಕೊಟ್ಟಾಗ ಅಲ್ಲಿನ ಜನರ ಸ್ನೇಹಪರತೆಯನ್ನು ಕಂಡು ಮರುಳಾದ ಅವರು ತಮ್ಮ ನಿಲುವನ್ನು ಕ್ರಮೇಣ ಬದಲಿಸಿಕೊಂಡರು. ಅವರು ವಿಧಾನಸಭೆಯಲ್ಲಿ ಏಕೀಕರಣದ ಪರವಾಗಿ ಭಾಷಣ ಮಾಡುತ್ತಿದ್ದಾಗ ಅವರ ಸ್ನೇಹಿತರನೇಕರು "ನಿಮ್ಮ ಮಗಳ ಪ್ರಭಾವ ನಿಮ್ಮ ಮೇಲೆ ಬಿದ್ದಿರುವುದರಿಂದ ಹೀಗೆ ವಾದಿಸುತ್ತಿದ್ದೀರಿ" ಎಂದು ಹಾಸ್ಯ ಮಾಡುತ್ತಿದ್ದುದ್ದನ್ನು ಅವರು ನೆನಪಿಸಿಕೊಳ್ಳುತ್ತಾರೆ. ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರು ವಿಶಾಲ ಮೈಸೂರಿನ ಪ್ರಥಮ ಮುಖ್ಯಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡಾಗ ಶಾಸಕಾಂಗದ ಜಂಟಿ ಸಭೆಯಲ್ಲಿ ರಾಜ್ಯಪಾಲರ ಭಾಷಣದ ಮೇಲೆ ಮಾತನಾಡುತ್ತ ಇಮಾಮರು ಹೀಗೆ ಹೇಳಿದ್ದಾರೆ.

"Sir, this is a proud and happy day for me, because on this day, all of us, people from various parts of the state have come together here. It is a happy thing that we are meeting in this new and magnificent hall. Let us all welcome each other with fervour and zeal like brothers who were lost to each other for centuries and who have now been united. It is now up to us to work together for the good of the state. We have so much in common. We have common civilisation, common culture and a comman language. Let us now strive hard for the improvement of the State.

ಜಗಳೂರು ಇಮಾಮ್ ಸಾಬ್ ರವರು 1930 ರಿಂದ 1957ನೇ ಇಸವಿಯವರೆಗೆ ಮೈಸೂರು ರಾಜ್ಯದ ರಾಜಕೀಯದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡರು. ಪ್ರಜಾಪ್ರತಿನಿಧಿ, ನ್ಯಾಯ ವಿಧಾಯಕ ಸಭೆ ಹಾಗೂ ವಿಧಾನ ಸಭೆಯ ಸದಸ್ಯರಾಗಿ ಬಹಳ ದೀರ್ಘಕಾಲ ಸೇವೆ ಸಲ್ಲಿಸಿದರು. ಮುಂದೆ 1957ನೇ ಇಸವಿಯ ಸಾರ್ವತ್ರಿಕ ಚುನಾವಣೆಯಲ್ಲಿ ಪ್ರಜಾ ಸೋಷಿಯಲಿಸ್ಟ್ ಪಕ್ಷದ ಸದಸ್ಯರಾಗಿ ಚಿತ್ರದುರ್ಗ ಕ್ಷೇತ್ರದಿಂದ ಲೋಕಸಭೆಗೆ ಚುನಾಯಿತರಾದ 26 ಸದಸ್ಯರ ಪೈಕಿ 24 ಜನ ಕಾಂಗ್ರೆಸ್ಸಿಗೆ ಸೇರಿದವರಾಗಿದ್ದರು. ಇಮಾಮ ಸಾಬ್ ಹಾಗೂ ಬಿಜಾಪುರದ ಶ್ರೀ ಸುಗಂಧಿ ಮಾತ್ರ ವಿರೋಧ ಪಕ್ಷದ ಸದಸ್ಯರಾಗಿದ್ದರು. ಲೋಕಸಭೆಯಲ್ಲಿ ಕಾಂಗ್ರೆಸ್ಸಿಗೆ ಬಾರಿ ಬಹುಮತ ಇದ್ದ ಕಾಲ ಅದು. ಲೋಕಸಭೆಯ ಒಟ್ಟು 520 ಸದಸ್ಯರ ಪೈಕಿ 380 ಸದಸ್ಯರು ಕಾಂಗ್ರೆಸ್ಸಿಗರೆ ಆಗಿದ್ದರು. ಉಳಿದ 140 ಮಂದಿ ಸದಸ್ಯರು ಹತ್ತು ಹಲವು ಪಕ್ಷಗಳಲ್ಲಿ ಹಂಚಿಹೋಗಿದ್ದರು. ಅಂತಹ ಪರಿಸ್ಥಿತಿಯಲ್ಲಿ ವಿರೋಧ ಪಕ್ಷವು ಒಂದು ಪ್ರಭಲ ಸಂಘಟಿತ ಶಕ್ತಿಯಾಗಿ ಲೋಕಸಭೆಯಲ್ಲಿ ಭಾಗವಹಿಸುವುದು ಅಸಾಧ್ಯವಾದ ಮಾತೆ ಆಗಿತ್ತು. ಹಾಗಿದ್ದರೂ ಸಹ ಲೋಕಸಭೆಯ ಕಾರ್ಯಕಲಾಪಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಅಧಿಕಾರವನ್ನು ಮಹಮ್ಮದ್ ಇಮಾಮರು ತಪ್ಪಿಸಿಕೊಳ್ಳುತ್ತಿರಲಿಲ್ಲ. ಲೋಕಸಭೆಯಲ್ಲಿ ಪ್ರಥಮ ಭಾಷಣ ಮಾಡಲು ಅವರು ಒಂದು ತಿಂಗಳು ಕಾಯಬೇಕಾಯಿತು. ಆದರೆ ಅವರು ಮಾಡಿದ ಪ್ರಥಮ ಭಾಷಣ ಅನೇಕರ ಮೆಚ್ಚುಗೆಗೆ ಪಾತ್ರವಾಯಿತು. ರೈಲ್ವೆ ಆಡಳಿತದ ಮೇಲೆ ಅವರು ಮಾಡಿದ ಭಾಷಣದಲ್ಲಿ ಕೇಂದ್ರ ಸರ್ಕಾರ ದಕ್ಷಿಣ ಭಾರತಕ್ಕೆ ಅದರಲ್ಲೂ ಮೈಸೂರು ರಾಜ್ಯಕ್ಕೆ ರೈಲ್ವೆ ಕಾಮಗಾರಿಯನ್ನು ಮಾಡುವಲ್ಲಿ ತೋರಿದ ನಿರ್ಲಕ್ಷವನ್ನು ಮತ್ತು ಆಡಳಿತದ ಲೋಪದೋಷವನ್ನು ಅಂಕಿ ಅಂಶಗಳ ಆಧಾರದ ಮೇಲೆ ನಿರೂಪಿಸಿ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡರು. ಇದರಿಂದಾಗಿ ಮುಂದೆ ಅವರಿಗೆ ಲೋಕಸಭೆಯಲ್ಲಿ ಹೆಚ್ಚಿಗೆ ಮಾತನಾಡುವ ಅವಕಾಶ ದೊರೆಯಿತು. ಅವರು ಸಾರ್ವಜನಿಕ ಹಣಕಾಸು ಸಮಿತಿಯ ಸದಸ್ಯರಾಗಿ ಚುನಾಯಿತರಾದರು. ಅಷ್ಟೆ ಅಲ್ಲ ಲೋಕಸಭೆಯ ಛೇರ್‌ಮನ್ ಆಗಿ ನೇಮಿಸಲ್ಪಟ್ಟು ಸಭಾಧ್ಯಕ್ಷರು ಉಪಸಭಾಧ್ಯಕ್ಷರು ಇಲ್ಲದಿರುವಾಗ ಲೋಕಸಭೆಯ ಅಧ್ಯಕ್ಷತೆಯನ್ನು ವಹಿಸುವ ಅವಕಾಶಾವು ಅವರಿಗೆ ದೊರೆಯಿತು. ಇದು ಅವರ ಅಪಾರ ಅನುಭವ, ಪಾಂಡಿತ್ಯ ಹಾಗೂ ವ್ಯಕ್ತಿತ್ವಕ್ಕೆ ಸಂದ ಗೌರವವಾಗಿತ್ತು.

ಮಹಮ್ಮದ್ ಇಮಾಮರು ಒಬ್ಬ ವೃತ್ತಿಪರ ರಾಜಕಾರಣಿಯಾಗಲು ನಿರಾಕರಿಸುತ್ತಿದ್ದರು. ದೇಶದ ಹಿತದೃಷ್ಟಿಯೊಂದೆ ಅವರ ರಾಜಕೀಯ ನಿರ್ಧಾರಗಳಿಗೆ ಮಾರ್ಗ ಸೂಚಿಯಾಗಿತ್ತು. ಇಲ್ಲಿ ಯಾವುದೇ ಸಂಕುಚಿತ ಭಾವನೆಗಳಿಗೆ ಅವಕಾಶವಿರಲಿಲ್ಲ. ಅವರು ಪ್ರಜಾ ಸಮಾಜವಾದಿ ಪಕ್ಷದ ಲೋಕಸಭಾ ಸದಸ್ಯರಾಗಿದ್ದಾಗ ಅಂಚೆ ಮತ್ತು ತಂತಿ ಇಲಾಖೆಯ ಕಾರ್ಮಿಕರು ತಮ್ಮ ವೇತನವನ್ನು ಹೆಚ್ಚಿಸಲು ಮುಷ್ಕರ ಹೂಡಿದರು. ಈ ಮುಷ್ಕರಕ್ಕೆ ಇಮಾಮರ ಸಮಾಜವಾದಿ ಪಕ್ಷ ಬೆಂಬಲ ನೀಡಿತ್ತು. ಆದರೆ ದೇಶದ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಇಮಾಮರು ಈ ಮುಷ್ಕರವನ್ನು ವಿರೋಧಿಸಿದರು. ಕಾರ್ಮಿಕರ ಬೇಡಿಕೆಗಳಿಗೆ ಮನ್ನಣೆ ಕೊಟ್ಟರೆ ಸರ್ಕಾರದ ಬೊಕ್ಕಸಕ್ಕೆ ಸುಮಾರು 10 ಕೋಟಿಗಳು ಹೆಚ್ಚಿನ ಹೊರೆಯಾಗುವುದು ಮತ್ತು ಅದರ ಭಾರ ಅಂತಿಮವಾಗಿ ಪ್ರಜೆಗಳ ಮೇಲೆ ಬೀಳುವುದೆಂದು ಅವರು ವಾದಿಸಿದರು. ಸಾರ್ವಜನಿಕ ಸೇವೆಯಲ್ಲಿ ನಿರತವಾಗಿರುವ ಕಾರ್ಮಿಕರು ಮುಷ್ಕರ ಹೂಡಲೇಬಾರದು, ಭಿನ್ನಾಭಿಪ್ರಾಯಗಳನ್ನು ಸಂಧಾನದ ಮೂಲಕವೆ ಪರಿಹರಿಸಕೊಳ್ಳಬೇಕು, ಮುಷ್ಕರದಿಂದ ಪ್ರತಿಯೊಬ್ಬ ಪ್ರಜೆಯೂ ತೊಂದರೆಗೀಡಾಗಿ ದೇಶಕ್ಕೆ ಹಾನಿಯಾಗುತ್ತದೆ ಎಂಬುದು ಅವರ ನಿಲುವಾಗಿತ್ತು. ಇವರು ಈ ಹೇಳಿಕೆಯನ್ನಿತ್ತ ಮರು ದಿನವೇ ಪಿ.ಎಸ್.ಪಿ.ಪಾರ್ಟಿಯ ಸಭೆಯಲ್ಲಿ ಅವರು ಪಕ್ಷದ ಶಿಸ್ತಿಗೆ ವಿರೋಧವಾಗಿ ವರ್ತಿಸಿದ್ದಾರೆಂದೂ ಅದಕ್ಕಾಗಿ ಅವರ ಮೇಲೆ ಏಕೆ ಕ್ರಮ ಕೈಗೊಳ್ಳಬಾರದೆಂದು ಸಮಜಾಯಿಷಿ ಕೇಳಲಾಯಿತು. ಅದಕ್ಕೆ ಅವರು ಕೊಟ್ಟ ಉತ್ತರ ಅವರು ತಮ್ಮ ದೀರ್ಘಕಾಲ ಬದುಕಿನಲ್ಲಿ ನಂಬಿಕೊಂಡು ಬಂದ ತತ್ವಗಳಿಗನುಸಾರವಾಗಿಯೇ ಇತ್ತು. ಪಕ್ಷಕ್ಕಿಂತ ದೇಶದ ಹಿತವೇ ನನಗೆ ಮುಖ್ಯಎಂದು ಅವರು ಹೇಳಿದರು.

ಮೈಸೂರು ರಾಜ್ಯದ ಹಿತವನ್ನು ಕಾಪಾಡುವುದರಲ್ಲಿ ಎಂತಹ ನಿಲುವನ್ನಾದರೂ ತೆಗೆದುಕೊಳ್ಳಲು ಇಮಾಮರು ಹಿಂಜರಿಯುತ್ತಿರಲಿಲ್ಲ ಎನ್ನುವುದಕ್ಕೆ ಮತ್ತೊಂದು ಘಟನೆಯನ್ನು ಇಲ್ಲಿ ಉದಾಹರಿಸಬಹುದು. ಬೆಳಗಾಂ, ಖಾನಾಪುರ ಪ್ರದೇಶವನ್ನು ಮಹಾರಾಷ್ಟ್ರಕ್ಕೆ ಸೇರಿಸಬೇಕೆಂದು ಕೇಂದ್ರ ಸರಕಾರವನ್ನು, ಪ್ರಧಾನಿ ನೆಹರೂರವರನ್ನು ಒತ್ತಾಯ ಪಡಿಸಲು ಮಹಾರಾಷ್ಟ್ರದಿಂದ ಸುಮಾರು 2000 ಜನರಿಂದ ಕೂಡಿದ ಒಂದು ನಿಯೋಗವನ್ನು ಮಹಾರಾಷ್ಟ್ರದ ಪಿ.ಎಸ್.ಪಿ. ಸದಸ್ಯರು ಸ್ವಾಗತಿಸಿ ಪಾರ್ಲಿಮೆಂಟ್ ಭವನದ ಮುಂದೆ ಪ್ರದರ್ಶನವನ್ನು ಪ್ರಾರಂಭಿಸಿದರು. ಪ್ರಧಾನಿಯವರು ಸ್ವತಃ ಬಂದು ನಿಯೋಗವನ್ನು ಭೇಟಿ ಮಾಡಬೇಕೆಂದು ಒತ್ತಾಯಿಸಿದರು ಪಕ್ಷದ ಸದಸ್ಯರಾದ ಇಮಾಮರು ಸಹ ಇದಕ್ಕೆ ಬೆಂಬಲ ಕೊಡಬೇಕೆಂದು ಆಗ್ರಹಿಸಲಾಯಿತು. ಇದಕ್ಕೆ ಇಮಾಮರು ಸುತಾರಂ ಒಪ್ಪಲಿಲ್ಲ. 'ಮಹಾರಾಷ್ಟ್ರದ ಬಗ್ಗೆ ನಿಮಗೆ ಹೇಗೆ ಶ್ರದ್ಧೆ ಇದೆಯೋ ಮೈಸೂರಿನ ಬಗ್ಗೆ ನನಗೂ ಅದೇ ರೀತಿಯ ಶ್ರದ್ಧೆ ಇದೆ' ಎಂದು ಅವರು ಹೇಳಿದರು. 'ಸಭಾತ್ಯಾಗ ಮಾಡುವಾಗ ಸಭೆಯಲ್ಲಿ ಇರಬೇಡಿ' ಎನ್ನುವ ಮತ್ತೊಂದು ಸಲಹೆಗೆ "ಅದು ಹೇಡಿತನವಾಗುತ್ತದೆ, ಸಭಾತ್ಯಾಗವನ್ನು ನಾನು ಖಂಡಿಸುತ್ತೇನೆ ಮತ್ತು ನೀವೆಲ್ಲರೂ ಸಭಾತ್ಯಾಗ ಮಾಡಿದರೆ ನಾನು ಸಭೆಯಲ್ಲಿದ್ದು ನನ್ನ ಅಸಮ್ಮತಿಯನ್ನು ಸೂಚುಸುತ್ತೇನೆ' ಎಂದು ಖಾರವಾಗಿ ನುಡಿದರು. ಅಷ್ಟೆ ಅಲ್ಲ ಹಾಗೆ ಮಾಡಿದರೂ ಕೂಡ.

ಲೋಕಸಭೆಯಲ್ಲಿ ಇಮಾಮರು ಮಧ್ಯೆ ಪ್ರವೇಶಿಸಬೇಕಾದ ಮತ್ತೊಂದು ಘಟನೆಯೆಂದರೆ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರಿಂದ ರಚಿತವಾದ 'ಚೆನ್ನಬಸವನಾಯಕ'

ಕಾದಂಬರಿಯನ್ನು ಭಾರತ ದೇಶದ ಎಲ್ಲ ಭಾಷೆಗಳಿಗೂ ತರ್ಜುಮೆ ಮಾಡಬೇಕೆಂದು ಕನ್ನಡ ಸಾಹಿತ್ಯ ಅಕಾಡೆಮಿಯವರು ತೆಗೆದುಕೊಂಡ ನಿರ್ಧಾರದ ಬಗ್ಗೆ ಸಭೆಯಲ್ಲಿ ಚರ್ಚೆ ಬಂದಾಗ. ಆ ಕಾದಂಬರಿಯಲ್ಲಿ ಬಿದನೂರು ರಾಣಿ ವೀರಮ್ಮಾಜಿ ಪಾತ್ರ ಸರಿಯಾಗಿ ಚಿತ್ರಿತವಾಗಿಲ್ಲವೆಂದು, ಅನಗತ್ಯವಾಗಿ ಅವಳ ಪಾತ್ರವನ್ನು ಕೆಟ್ಟದಾಗಿ ಮೂಡಿಬಂದಿದೆಯೆಂದು ವೀರಶೈವರು ಪ್ರತಿಭಟಿಸಿ ಇದರ ತರ್ಜುಮೆ ಮಾಡಬಾರದೆಂದು ಬೇಡಿಕೆ ಸಲ್ಲಿಸಿದ್ದರು. ಶ್ರೀಯುತ ಇಮಾಮರು ಈ ಬಗ್ಗೆ ನಡೆದ ಚರ್ಚೆಯಲ್ಲಿ ಭಾಗವಹಿಸಿ ರಾಣಿ ವೀರಮ್ಮಾಜಿಯವರು ಸಾಧ್ವೀಮಣಿಯೆಂದೂ, ಅವರ ಮೇಲೆ ವ್ಯಭಿಚಾರ ದೋಷ ಮುಂತಾದವನ್ನು ಹೋರಿಸುವುದು ಬಹಳ ಜನರಿಗೆ, ಅದರಲ್ಲೂ ವೀರಶೈವರಿಗೆ ಮನನೋಯಿಸುವುದೆಂದು ತಿಳಿಸಿದರು. ಆಗ ಮಂತ್ರಿಯಾಗಿದ್ದ ಶ್ರೀ ಹುಮಾಯೂನ್ ಕಬೀರ್‌ರವರು ಇಮಾಮರ ವಾದಕ್ಕೆ ಮನ್ನಣೆ ಕೊಟ್ಟು ಆ ಕಾದಂಬರಿಯ ಭಾಷಾಂತರವನ್ನು ನಿಲ್ಲಿಸಿದರು.

ಹೀಗೆ ಶ್ರೀ ಇಮಾಮರು ತಮ್ಮ ರಾಜಕೀಯ ಜೀವನದಲ್ಲಿ ಯಾರಿಗೂ ನೋವಾಗದಂತೆ ಸದಾ ದೇಶದ ಹಿತವನ್ನು ಗಮನದಲ್ಲಿಟ್ಟುಕೊಂಡೆ ಬದುಕಿದರು. ಎಲ್ಲಾ ಕಾಲಕ್ಕೂ ಇವರದು ಒಂದು ಆದರ್ಶ ವ್ಯಕ್ತಿತ್ವ.

# ಭಾಗ - 2

# ಸದನದಲ್ಲಿ ಶ್ರೀ ಇಮಾಮರು

## 1952-53 ಆಯವ್ಯಯ ಪಟ್ಟಿ - ಸಾಮಾನ್ಯ ಚರ್ಚೆ (ಮುಂದುವರೆದ ಚರ್ಚೆ)

ಶ್ರೀ ಎಚ್.ಕೆ. ವೀರಣ್ಣಗೌಡರು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ ಬಳಿಕ.

ಜನಾಬ್. ಜೆ. ಮೊಹಮ್ಮದ್ ಇಮಾಂ (ಜಗಳೂರು) - ಮಾನ್ಯ ಸಭಾಧ್ಯಕ್ಷರೆ, ನಾನು ನನ್ನ ಬಜೆಟ್ ಮೇಲಿನ ಭಾಷಣವನ್ನು ಮಾಜಿ ಹಣಕಾಸು ಸಚಿವರಾಗಿದ್ದ ಶ್ರೀ ಹೆಚ್.ಸಿ. ದಾಸಪ್ಪನವರು ಮಧ್ಯಕಾಲೀನ ಬಜೆಟ್ ಮಂಡಿಸುವಾಗ ನೀಡಿದ ಸಲಹೆಯನ್ನು ಉಲ್ಲೇಖಿಸಿ ಪ್ರಾರಂಭಿಸುತ್ತಿದ್ದೇನೆ ಅದು ಹೀಗಿದೆ:

"ರಾಷ್ಟ್ರ ಕಟ್ಟುವ ವಿಭಾಗಗಳಲ್ಲಿ ಹೆಚ್ಚಿನ ಅಭಿವೃದ್ಧಿಯಾಗಬೇಕೆಂದು ಸಾರ್ವಜನಿಕರಿಂದ ಬೇಡಿಕೆಯಿದೆ ಮತ್ತು ಅದಕ್ಕೆ ಹೊಂದಿಕೊಂಡಂತೆ ಕಂಡುಬರುವ ಆದಾಯದ ಹೆಚ್ಚಳಕ್ಕೆ ಜವಾಬ್ದಾರಿಯನ್ನು ಹೊರಲು ಸಿದ್ಧವಿರುವುದನ್ನು ಅದು ಸೂಚಿಸುತ್ತದೆ. ವಿಶ್ವದಲ್ಲಿ ಅತೀ ಹೆಚ್ಚಿನ ನಂಬಿಕೆಯಿಟ್ಟು, ಆಹಾರ ಸಬ್ಸಿಡಿ ಕಡಿತದಿಂದ ಬಜೆಟ್‌ನಲ್ಲಿ ಉಂಟಾದ ದೊಡ್ಡ ಕಂದಕವನ್ನು ತುಂಬಲು ಸಾಧ್ಯವಿಲ್ಲ. ಭವಿಷ್ಯತ್ಕಾಲ ಎಲ್ಲವೂ ಸಂತೋಷದಾಯಕವೇ ಆಗಿರುವುದಿಲ್ಲ, ನಮ್ಮ ವೆಚ್ಚವನ್ನು ನಿಯಂತ್ರಣದಲ್ಲಿಟ್ಟರೆ ಮತ್ತು ಸಬ್ಸಿಡಿ ಕಡಿತದಿಂದ ಹಣಕಾಸಿನ ಅನಿರೀಕ್ಷಿತ ಪಲಾಯನದ ನಷ್ಟವನ್ನು ಸಾಮಾನ್ಯ ಆದಾಯವನ್ನು ಹೊರತು ಪಡಿಸಿ ಇತರ ಸಂಪನ್ಮೂಲದಿಂದ ತುಂಬಿಸಲು ಸಾಧ್ಯವಾದರೆ, ಶಾಂತಿಭಂಗ ಮಾಡುವ (ವ್ಯಾಕುಲ ಪರಿಸ್ಥಿತಿ) ಸ್ಥಿತಿಯನ್ನು ನಿರೀಕ್ಷಿಸಲು ಯಾವುದೇ ಕಾರಣವಿಲ್ಲ."

ಅವರು ಸಾಂದರ್ಭಿಕವಾಗಿ ಹೊಸ ಮಂತ್ರಿಮಂಡಲಕ್ಕೆ ಕೆಲವು ಸಲಹೆಗಳನ್ನು ನೀಡಿದರು.

"ಆದಾಯದಿಂದ ಹಣಕಾಸನ್ನು ಪೂರೈಸಬೇಕಾದ ಕೆಲವು ಹೊಸ ಯೋಜನೆಗಳನ್ನು ಆದಾಯದ ಕೊರತೆ ನಿವಾರಿಸಿ ಮತ್ತು ಆಹಾರದ ಯೋಜನೆಯ ನಷ್ಟವನ್ನು ಸರಿಪಡಿಸಿ ಕೇವಲ ಹೊಸ ತೆರಿಗೆಗಳ ಮೂಲಕ ಜಾರಿಗೆ ತರಬಹುದಾಗಿದೆ. ಮಧ್ಯಕಾಲಿನ ಬಜೆಟ್ ವ್ಯಾಪ್ತಿಯ ಹೊರಗೆ ಹಲವು ವಿಷಯಗಳಿವೆ ಮತ್ತು ಅವುಗಳನ್ನು ಸರ್ಕಾರವೇ ಸರಿಪಡಿಸಬೇಕು."

ಅವರು ತೆರಿಗೆಯ ಭಾರವನ್ನು ಹೊಸ ಮಂತ್ರಿ ಮಂಡಲದ ಮೇಲೆ ಹೊರಿಸಿದ್ದಾರೆ.

ಮಾನ್ಯರೆ, ಮಾಜಿ ಹಣಕಾಸು ಸಚಿವರ ಈ ಹೇಳಿಕೆ ಅಥವಾ ಸಲಹೆ ಅದೇನೇ ಆಗಿರಲಿ, ರಾಜ್ಯದ ಹಣಕಾಸು ಪರಿಸ್ಥಿತಿಯ ನೈಜ ಚಿತ್ರಣವನ್ನು ಕೊಡುತ್ತದೆ. ಮಾಜಿ ಹಣಕಾಸು ಸಚಿವರು ಹೊಸ ಮಂತ್ರಿ ಮಂಡಲಕ್ಕೆ ನೀಡಿದ ಈ ಸಲಹೆಗಳನ್ನು ತಾವೇ ಪಾಲಿಸಿದರೆ ಚೆನ್ನಾಗಿರುತ್ತಿತ್ತು ಎಂದು ನಾನು ಆಶಿಸುತ್ತೇನೆ. ಆದರೆ, ಅದರ ಕೀರ್ತಿ ಅವರಿಗೇ ಸಲ್ಲುತ್ತದೆ ಕೊನೆಯ ತನಕ ಬಜೆಟ್‌ನಲ್ಲಿನ ಕೊರತೆಯನ್ನು ಅವರು ಒಪ್ಪಲಿಲ್ಲವೆಂದು ಹೇಳಬಹುದು. ನೀವು ಬಜೆಟ್‌ನಲ್ಲಿ

ಕಾಣಬಹುದು 1952-53 ಪರಿಷ್ಕೃತ ಬಜೆಟ್‌ನಲ್ಲಿಯೂ, ಅವರು ಉಳಿತಾಯವನ್ನೇ ತೋರಿಸಿದ್ದಾರೆ. ಇದು ರಾಜ್ಯದ ಹಣಕಾಸಿನ ನೈಜ ಚಿತ್ರಣವನ್ನು ನೀಡುತ್ತದೆ.

ಮಾನ್ಯರೇ, ನಾನು ಈಗ ಪ್ರತಿವಾದಿಸಲ್ಪಟ್ಟ ಬಜೆಟನ್ನು ಅಧ್ಯಯನ ಮಾಡಿದ್ದೇನೆ ಮತ್ತು ಮುಖ್ಯಮಂತ್ರಿಗಳ ಹೇಳಿಕೆಯನ್ನು ನನಗೆ ಸಾಧ್ಯವಾದ ಮಟ್ಟಿಗೆ ಜಾಗರೂಕತೆಯಿಂದ ಓದಿದ್ದೇನೆ. ಈ ಬಜೆಟ್‌ನಲ್ಲಿ ಬಳಸಿದ ಹೊಸ ವಿಧಾನವನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಅದು ಸಂದೇಹಕ್ಕೆ ಆಸ್ಪದ ಕೊಡುವ ಹಲವು ಅಂಕೆಯ ಸಂಕೇತಾಕ್ಷರಗಳನ್ನು ಹೊಂದಿದೆ. ಬಜೆಟ್‌ನ ವಾಸ್ತವ ಪರಿಸ್ಥಿತಿಯನ್ನು ಒಬ್ಬ ಸಾಮಾನ್ಯ ವ್ಯಕ್ತಿ ಸ್ಪಷ್ಟವಾಗಿ ಕಂಡು ಹಿಡಿಯಲಾರ.

ಶ್ರೀ ಎ.ಭೀಮಪ್ಪ ನಾಯ್ಕ (ಮೊಳಕಾಲ್ಮೂರು) ಅವರು 1951-52ರ ವಾಸ್ತವಿಕವನ್ನಾದರೂ ಕಂಡು ಹಿಡಿಯಬಹುದೆ ?

ಜನಾಬ್ ಜೆ.ಮೊಹಮ್ಮದ್ ಇಮಾಂ - ಒಂದು ಸಾಮಾನ್ಯವಾದ ಸಾಧನವೆಂದರೆ ನನ್ನನ್ನು ವಿಚ್ಛಿನ್ನ ಗೊಳಿಸುವುದೇ ಆಗಿದೆ. ಆದರೆ ನಾನೇನು ಬೇಸರಪಡುವುದಿಲ್ಲ. (ನಗು) ಮಾನ್ಯರೇ, ಹಣಕಾಸಿನ ವಾಸ್ತವ ಪರಿಸ್ಥಿತಿಯನ್ನು ಕಂಡುಹಿಡಿಯುವುದು ಒಬ್ಬ ಸಾಮಾನ್ಯ ವ್ಯಕ್ತಿಗೆ ಕಷ್ಟ, ಆದಾಯದ ಮೂಲಗಳನ್ನು ತಿಳಿಯುವುದು, ಹಣಕಾಸಿನ ಸ್ಥಾನ ಮತ್ತು ರೇವಣಿಗಳ ಸ್ಥಾನ ತಿಳಿಯುವುದು ಇತ್ಯಾದಿ. ಅದಕ್ಕೆ ಸಾಕಷ್ಟು ಜಾಗರೂಕತೆಯಿಂದ ಪರಾಮರ್ಶಿಸಬೇಕು ಮತ್ತು ಹಣಕಾಸಿನ ಸೆಕ್ರೆಟರಿ ನಮಗೆ ಸಹಾಯ ಮಾಡದ ಹೊರತು, ವಾಸ್ತವ ಹಣಕಾಸು ಸ್ಥಿತಿಯನ್ನು ಕಂಡುಹಿಡಿಯಲು ನಮಗೆ ಸಾಧ್ಯವಿಲ್ಲವೆಂದು ನಾನು ಭಾವಿಸುತ್ತೇನೆ.

ಮಾನ್ಯರೇ, ಮುಖ್ಯಮಂತ್ರಿಗಳು ಬಜೆಟ್ಟು 101 ಲಕ್ಷ ರೂಪಾಯಿಗಳ ಕೊರತೆಯನ್ನು ಸೂಚಿಸುತ್ತಿದೆಯೆಂದು ಹೇಳಿದ್ದಾರೆ. ಜವಾಬ್ದಾರಿಯುತ ಸರ್ಕಾರ ಅಧಿಕಾರ ವಹಿಸಿಕೊಂಡಾಗಿನಿಂದ ಇದೇ ಮೊದಲ ಬಾರಿಗೆ ಅಂತಹ ಕೊರತೆಯನ್ನು ಬಜೆಟ್‌ನಲ್ಲಿ ತೋರಿಸಲಾಗಿದೆ. ಹಿಂದಿನ ಬಜೆಟ್ಟುಗಳಲ್ಲಿ ಇಂತಹ ವ್ಯತಿಕ್ರಮದ ಸ್ಥಿತಿಯನ್ನು ತೋರಿಸದಿದ್ದರೂ, 101 ಲಕ್ಷ ರೂಪಾಯಿಗಳ ಕೊರತೆ ವಾಸ್ತವ ಸ್ಥಿತಿಯನ್ನು ಸೂಚಿಸುವುದಿಲ್ಲವೆಂದು ನಾನು ಮಂಡಿಸಬೇಕಾಗಿದೆ.

ಮಾನ್ಯರೇ, ಕೊರತೆ ಬಜೆಟ್ ಬಗ್ಗೆ ನನ್ನ ಸ್ವಂತ ವ್ಯಾಖ್ಯೆ ಹೀಗಿದೆ. ಸಾಮಾನ್ಯ ಆದಾಯಕ್ಕಿಂತ ನಾವು ಮಂಡಿಸಬೇಕಾದ ಹೆಚ್ಚುವರಿ ವೆಚ್ಚವು ಬಜೆಟ್‌ನ ಕೊರತೆಯ ಭಾಗವನ್ನು ಪ್ರತಿನಿಧಿಸುತ್ತದೆ. ಹೆಚ್ಚುವರಿ ವೆಚ್ಚ ತುಂಬಿಸಲು ನಿಧಿಯಿಂದ ನಾವು ಪಡೆದಿರುವ ಹಣ ಅಥವಾ ರೇವಣಿಗಳಿಂದ ಪಡೆಯುವ ಹಣ ಅಥವಾ ಪ್ರಾರಂಭಿಕ ಶಿಲ್ಕಿನಿಂದ ಪಡೆಯುವ ಹಣ ಅಥವಾ ಖಜಾನೆ ಹುಂಡಿಗಳಿಂದ ಪಡೆಯುವ ಹಣ ಎಲ್ಲವೂ ಕೊರತೆಯನ್ನು ಸೂಚಿಸುತ್ತದೆ. ಈಗ ಮಾನ್ಯರೇ, ತುಂಬಿಸಬೇಕಾದ 101 ಲಕ್ಷ ರೂಪಾಯಿ ಕೊರತೆಯನ್ನು ಸೂಚಿಸಲಾಗಿದ್ದರೂ, ನನ್ನ ಅಭಿಪ್ರಾಯದಲ್ಲಿ ಅದು 41/2 ಲಕ್ಷ ರೂಪಾಯಿಗಳಷ್ಟು ಆಗುತ್ತದೆ.

ಶ್ರೀ ಎ.ಭೀಮಪ್ಪ ನಾಯ್ಕ - 4 1/2 ಲಕ್ಷವೋ ಅಥವಾ ಕೋಟಿಯೋ ?

ಜನಾಬ್ ಜೆ.ಮೊಹಮ್ಮದ್ ಇಮಾಂ - ಧನ್ಯವಾದಗಳು. ಅದು 4 1/2 ಕೋಟಿ ರೂಪಾಯಿಗಳು. ಅವರು ಯಾವಾಗಲೂ ನನ್ನ ರಕ್ಷಣೆಗೆ ಬರುತ್ತಾರೆ. (ನಗು)

ಮಾನ್ಯ ಸಭಾಪತಿಗಳು - ಆದ್ದರಿಂದಲೇ ಅವರು ನಿಮ್ಮನ್ನು ಆಗಾಗ್ಗೆ ತೊಂದರೆಪಡಿಸುತ್ತಾರೆ. (ನಗು)

ಜನಾಬ್ ಜೆ.ಮೊಹಮ್ಮದ್ ಇಮಾಂ - ನಾವು ಆಗಾಗ್ಗೆ ಜಗಳವಾಡುತ್ತೇವೆ ಏಕೆಂದರೆ ನಾವು ಪರಸ್ಪರ ಪ್ರೀತಿಸುತ್ತೇವೆ. (ನಗು). ಆದ್ದರಿಂದ, ಸಾಮಾನ್ಯ ವೆಚ್ಚಗಳಿಗೆ ಹೊರತಾಗಿ, ನಿಧಿಯಿಂದ ಇತರ ಮೂಲಗಳಿಂದ ಪೂರೈಸಲಾಗಿರುವ ಮಾಡಲ್ಪಟ್ಟ ಹೆಚ್ಚುವರಿ ವೆಚ್ಚವೂ 5 ಕೋಟಿ ರೂಪಾಯಿಗಳಷ್ಟಾಗಿದೆ ಮತ್ತು ನಾನು ಈ ಸಭೆಯ ಮಾನ್ಯ ಸದಸ್ಯರಿಗೆ ಇದನ್ನು ಹೇಳುತ್ತಿದ್ದೇನೆ.

ಇತರ ನಿಧಿಗಳಿಂದ 49 ಲಕ್ಷ ರೂಪಾಯಿಗಳನ್ನು ಕಳೆದ ಮೇಲೆ 101 ಲಕ್ಷವನ್ನು ಪಡೆಯಲಾಗಿದೆ. ಹಾಗಾದರೆ ಮಾನ್ಯರೇ, ಬೇರೆ ಬೇರೆ ನಿಧಿಗಳಿಂದ ಕೊರತೆ ತುಂಬಿಸಲು ಇದುವರೆಗೆ ಅವರು ಹಣವನ್ನು ಪಡೆಯುತ್ತಿದ್ದರು. ಮೊದಲು, ಅವರು ವಿಶೇಷ ದಾಸ್ತಾನಿಂದ ಹಣವನ್ನು ಪಡೆದುಕೊಂಡರು. ಆ ನಿಧಿ ಈಗ ಮಾಯವಾಗಿದೆ. ತಮ್ಮ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳೇ ಹೇಳಿರುವಂತೆ, ಎಲ್ಲಾ ನಿಧಿಗಳೂ ಕಡಿಮೆಯಾಗಿದೆ ಮತ್ತು ಮಾಯವಾಗಿದೆ. ಈಗ ಇನ್ನಾವುದೇ ಸಂಪನ್ಮೂಲಗಳಿಲ್ಲದೇ ಇರುವುದರಿಂದ, ಅವರು 49 ಲಕ್ಷವನ್ನು 3 ನಿಧಿಗಳಿಂದ ಪಡೆದುಕೊಂಡಿದ್ದಾರೆ. ಅದರಲ್ಲಿ ಒಂದು ರೇಷ್ಮೆ ಕೈಗಾರಿಕೆ ನಿಧಿ, ಮತ್ತು ನನ್ನ ಸ್ನೇಹಿತ ಶ್ರೀ ಹೆಚ್.ಕೆ.ವೀರಣ್ಣ ಹೇಳಿರುವಂತೆ ಕಬ್ಬು ತೆರಿಗೆ ನಿಧಿ ಮತ್ತು ಬರಗಾಲ ಪರಿಹಾರ ನಿಧಿಗಳಾಗಿವೆ.

ಶ್ರೀ ಎ.ಭೀಮಪ್ಪ ನಾಯ್ಕ - ಬರಗಾಲದ ಉದ್ದೇಶಕ್ಕಾಗಿಯೋ.

ಜನಾಬ್ ಜೆ.ಮೊಹಮ್ಮದ್ ಇಮಾಂ - ಆದ್ದರಿಂದ ಸಾಮಾನ್ಯ ಆದಾಯದಿಂದ ಹೊರತಾಗಿ ಈ 49 ಲಕ್ಷವನ್ನು ಪಡೆಯಲಾಗಿದೆ ಮತ್ತು ಇದು ನಿಜವಾಗಿಯೂ ಬಜೆಟ್‌ನಲ್ಲಿನ ಕೊರತೆಗೆ ಸೇರುತ್ತದೆ. ಆದ್ದರಿಂದ, ಮಾನ್ಯರೇ, ಮುಖ್ಯಮಂತ್ರಿಗಳು ಹೇಳಿರುವಂತೆ, ಕೊರತೆ 101 ಲಕ್ಷವಲ್ಲ ಆದರೆ ಬೇರೆ ರೀತಿಯ ನಿಧಿಯಿಂದ ಪಡೆಯಲಾದ 49 ಲಕ್ಷ ಒಳಗೊಂಡಂತೆ 150 ಲಕ್ಷ ರೂಪಾಯಿಗಳಷ್ಟು ಆಗಿದೆ. ಈ ಎರಡು ನಿಧಿಗಳಿಂದ ಪಡೆಯಲಾದ ಮೊತ್ತಕ್ಕೆ ಸಂಬಂಧಿಸಿದಂತೆ, ಈ ನಿಧಿಗಳಿಂದ ಹಣ ಪಡೆಯಲು ಅವರು ಯಾವ ಹಕ್ಕನ್ನೂ ಪಡೆದಿಲ್ಲವೆಂದು ನಾನು ಭಾವಿಸುತ್ತೇನೆ. ರೇಷ್ಮೆ ಕೈಗಾರಿಕೆ ನಿಧಿಯಿಂದ ಅವರು ಸುಮಾರು 6 ಲಕ್ಷ ರೂಪಾಯಿಗಳನ್ನು ಪಡೆದುಕೊಂಡಿದ್ದಾರೆ. ಈ ನಿಧಿಯನ್ನು ವಿಶೇಷ ಉದ್ದೇಶಗಳಿಗಾಗಿ ಸ್ಥಾಪಿಸಲಾಗಿತ್ತು: ಅದನ್ನು ರೇಷ್ಮೆ ಕೈಗಾರಿಕೆಯ ಸಹಾಯಕ್ಕಾಗಿ ಸ್ಥಾಪಿಸಲಾಗಿತ್ತು. ಆ ನಿಧಿಯಿಂದ ಸಾಮಾನ್ಯ ಉದ್ದೇಶಗಳಿಗಾಗಿ ಹಣ ಪಡೆಯುವುದು ಮತ್ತು ಸಾಮಾನ್ಯ ಆದಾಯದಲ್ಲಿ ಅದನ್ನು ಸಂಯೋಜಿಸುವುದು ಪ್ರಜಾಪ್ರಭುತ್ವಕ್ಕೆ ವಿರುದ್ಧವಾಗಿದೆ ಮತ್ತು ಅನ್ಯಾಯವಾಗಿದೆ ಎಂದು ನಾನು ಹೇಳುತ್ತೇನೆ. ಏಕೆಂದರೆ ಅದು ಸುಪ್ತವಾಗಿದೆ ಮತ್ತು ರೇಷ್ಮೆ ನಿಧಿ ರೇಷ್ಮೆ ಕೈಗಾರಿಕೆಯ ಅಭಿವೃದ್ಧಿಗಾಗಿ ಇದೆ ಎಂದು ಪ್ರತಿಯೊಬ್ಬರೂ ಒಪ್ಪಲೇಬೇಕು ಮತ್ತು ಆ ನಿಧಿಯಿಂದ ಹಣ ಪಡೆಯಲು ಅವರಿಗೆ ಹಕ್ಕಿಲ್ಲ. ಒಂದು ವೇಳೆ ಅವರು ಸಾಮಾನ್ಯ ನಿಧಿಗಳಾದ, ಅಂದರೆ ರಿಸರ್ವ್ ನಿಧಿಯಿಂದ ಅದನ್ನು

ಪಡೆದುಕೊಂಡಿದ್ದರೆ, ಅದು ಸರಿಯಾಗಿದೆ. ಆದರೆ ವಿಶೇಷ ಉದ್ದೇಶಕ್ಕಾಗಿ ಇರುವ ವಿಶೇಷ ನಿಧಿಯ ಹಣವನ್ನು ಬಳಸುವುದು ಕ್ರಮಬದ್ಧವಾಗಿಲ್ಲ.

ಹಾಗೆಯೇ, ಶ್ರೀ ಹೆಚ್.ಕೆ. ವೀರಣ್ಣಗೌಡ ಹೇಳಿದಂತೆ ಕಬ್ಬಿಣ ತೆರಿಗೆ ನಿಧಿ ಕೂಡ. ಮಾನ್ಯರೇ, ನಾನು ಸರ್ಕಾರದಲ್ಲಿ ಒಂದು ನಿಧಿ ರಚಿಸಲು ಕಬ್ಬಿನ ಮೇಲೆ ತೆರಿಗೆ ವಿಧಿಸುವ ಮಸೂದೆಯನ್ನು ಹೊರಡಿಸಲಾಗಿತ್ತು ಮತ್ತು ಅದು ಒಂದು ನಿರ್ದಿಷ್ಟ ಉದ್ದೇಶ ಹೊಂದಿತ್ತು ಎಂದು ನಾನು ಭಾವಿಸುತ್ತೇನೆ. ಅನೇಕ ಕಾಂಗ್ರೆಸ್ ಸ್ನೇಹಿತರಿಂದ ಅದರ ಹೇರಿಕೆ ವಿರುದ್ಧ ಆಕ್ಷೇಪಣೆ ಇತ್ತು. ಆ ಅವಧಿಯಲ್ಲಿ ತೆರಿಗೆ ಮೂಲಕ ಏನೇ ಹಣವನ್ನು ವಸೂಲಿ ಮಾಡಿದರೂ, ಅದನ್ನು ಮಂಡ್ಯ ಪ್ರದೇಶದ ಅಭಿವೃದ್ಧಿಗೆ ಬಳಸಲಾಗುವುದು ಮತ್ತು ಪ್ರಮುಖವಾಗಿ ಆ ಪ್ರದೇಶದಲ್ಲಿ ಸಂಪರ್ಕದ ಅಭಿವೃದ್ಧಿಗೆ ಬಳಸಲಾಗುವುದು ಎಂದು ಆಶ್ವಾಸನೆ ನೀಡಲಾಗಿತ್ತು. ಅದು ಕೊಡಲ್ಪಟ್ಟ ಆಶ್ವಾಸನೆ ಮತ್ತು ಆ ಆಶ್ವಾಸನೆಯಂತೆ ತೆರಿಗೆ ವಿಧಿಸಲಾಯಿತು ಮತ್ತು ಈಗ ಆ ನಿಧಿಯನ್ನು ಅಕ್ರಮವಾಗಿ ಬೇರೊಂದು ಉದ್ದೇಶಕ್ಕೆ ಬಳಸಿಕೊಳ್ಳುವುದು ಅತ್ಯಂತ ವಿಧಿರಹಿತವಾಗಿದೆ.

ಶ್ರೀ ಹೆಚ್.ಕೆ. ವೀರಣ್ಣಗೌಡ - ಒಳ್ಳೆ ಸಮಯ ಬಂದರೆ ಅವರು ಅದನ್ನು ಹಿಂದಿರುಗಿಸುತ್ತಾರೆ.

ಶ್ರೀ ಎ. ಭೀಮಪ್ಪ ನಾಯ್ಕ - ಕೃಷಿ ಅಭಿವೃದ್ಧಿಗಿಂತ 10 ಪಟ್ಟು ಹೆಚ್ಚು ಹಣದಿಂದ ಅಲ್ಲಿ ಆ ಪ್ರದೇಶದಲ್ಲಿ ಒಂದು ಕಾಲೇಜನ್ನು ಸ್ಥಾಪಿಸಲಾಗಲಿರುವುದೆಂದು ಅವರು ಭಾವಿಸುತ್ತಾರೆಯೇ ?

ಜನಾಬ್ ಜೆ.ಮೊಹಮ್ಮದ್ ಇಮಾಂ - ಸರಿ ಮಾನ್ಯರೇ, ಅವರಿಗೆ ಬಜೆಟ್‌ನ ಪ್ರಾಮುಖ್ಯತೆ ತಿಳಿದಿಲ್ಲ. (ನಗು). ನಾನು ಅವರ ಹಿರಿಯನಾಗಿ ಅವರಿಗೆ ಬೋಧಿಸಬೇಕಾಗಿದೆ. ಯಾವುದೇ ಒಂದು ಉದ್ದೇಶಕ್ಕೆ ವಿಶೇಷ ನಿಧಿ ಸ್ಥಾಪಿಸಿದಾಗ ಮತ್ತು ಅದೇ ಉದ್ದೇಶಕ್ಕೆ ಅದನ್ನು ಬಳಸಲಾಗುತ್ತದೆಂಬ ಆಶ್ವಾಸನ ನೀಡಿದಾಗ, ಅದನ್ನು ಬೇರೆ ಉದ್ದೇಶಕ್ಕೆ ಬಳಸುವುದು ಕ್ರಮರಹಿತವಾಗಿದೆಯೆಂದು ನಾನು ಹೇಳಿದ್ದೇನೆ. ನಿಮಗೆ ಅದನ್ನು ಬಳಸಲು ಯಾವ ಹಕ್ಕೂ ಇಲ್ಲ.

ಈಗ ನೀವು ಅದನ್ನು ಬಳಸಿದ್ದೀರಿ ಮತ್ತು ಅದರಿಂದಲೇ ಕೊರತೆ 150 ಲಕ್ಷಕ್ಕೆ ಬಂದಿದೆ.

ಶ್ರೀ ಕಡಿದಾಳ್ ಮಂಜಪ್ಪ - ನೀವು ಬರಗಾಲ ಪರಿಹಾರ ನಿಧಿ ಬಗ್ಗೆ ಏನನ್ನೂ ಹೇಳಲಿಲ್ಲ ?

ಜನಾಬ್ ಜೆ.ಮೊಹಮ್ಮದ್ ಇಮಾಂ - ನಾನು ಅದಕ್ಕೆ ಬರುತ್ತಿದ್ದೇನೆ. ನೀವು 20 ಲಕ್ಷವನ್ನು ಬರಗಾಲಕ್ಕಾಗಿ ನೇಮಿಸಿದ್ದೀರಿ ಮತ್ತು ನೀವು ಬರಗಾಲ ಪರಿಹಾರ ನಿಧಿಯಿಂದ ಹಣವನ್ನು ಪಡೆದಿದ್ದೀರಿ. ಅದಕ್ಕಾಗಿ ನಾನು ಯಾವ ಆಕ್ಷೇಪಣೆಯನ್ನೂ ಮಾಡುತ್ತಿಲ್ಲ. ಆದ್ದರಿಂದ ನೀವು ನನ್ನನ್ನು ವಿವೇಚನೆಯುಳ್ಳ ವ್ಯಕ್ತಿಯೆಂದು ಪರಿಗಣಿಸಬೇಕು.

ಶ್ರೀ ಎಲ್. ಸಿದ್ದಪ್ಪ - ಅವರು ಆ ಪ್ರದೇಶವನ್ನು ಬರಗಾಲ ಪೀಡಿತವೆಂದು ಘೋಷಿಸಲು ಬಯಸುತ್ತಿಲ್ಲ.

ಜನಾಬ್ ಜೆ. ಮೊಹಮ್ಮದ್ ಇಮಾಂ - ಈ ಗೌರವಾನ್ವಿತ ಮಂತ್ರಿಗಳು ನನ್ನ ಹಳೆಯ ಹೇಳಿಕೆಗಳನ್ನು ಗಮನಿಸಬೇಕೆಂದು ನಾನು ಬಯಸುತ್ತೇನೆ ಮತ್ತು ಅಲ್ಲಿ ನಾನು ಹೇಳಿದ್ದು ಸತ್ಯವೆಂದು ಅವರು ಕಾಣಬಹುದಾಗಿದೆ.

ಶ್ರೀ ಹೆಚ್. ಸಿದ್ಧವೀರಪ್ಪ - ಒಬ್ಬ ಒಳ್ಳೆ ಜ್ಯೋತಿಷಿ.

ಜನಾಬ್ ಜೆ. ಮೊಹಮ್ಮದ್ ಇಮಾಂ - ಜ್ಯೋತಿಷಿ ಅಲ್ಲ. ಅದು ಸಾಮಾನ್ಯ ಜ್ಞಾನ - ಬಹಳಷ್ಟು ಸಾಮಾನ್ಯ ಜ್ಞಾನ.

ಮಾನ್ಯರೇ, ಗೌರವಾನ್ವಿತ ಮಂತ್ರಿಗಳು ಹಣವನ್ನು ಪಡೆದಿರುವ ಹಲವಾರು ಅಂಶಗಳನ್ನು ಗಮನಿಸಿದ್ದಾರೆ. ಸರಿಮಾನ್ಯರೇ, ಒಂದು ವೇಳೆ ನೀವು ಬಜೆಟ್‌ನಲ್ಲಿನ ಅಂಕಿ ಅಂಶಗಳನ್ನು ಗಮನಿಸಿದರೆ 100 ಲಕ್ಷ ಖಜಾನೆ ಹುಂಡಿಗಳಿಂದ ಪಡೆಯಲಾಗಿದೆ ಎಂಬುದನ್ನು ನೀವು ಕಾಣಬಹುದಾಗಿದೆ. ಅವರು ಅದನ್ನು ಬಳಸಲು ಉದ್ದೇಶಿಸಿದ್ದಾರೆ. ಬಜೆಟ್‌ನಲ್ಲಿ ಅವರು ಯಾವುದೇ ಮೊತ್ತವನ್ನು ಪುನರ್ ಹೂಡಿಕೆ ಮಾಡಿಲ್ಲ. ಇದು ಪೂರ್ಣ ಮೊತ್ತ ಮಾಯವಾಗಿರುವುದನ್ನು ಮತ್ತು ಪ್ರಸ್ತುತ ಅಥವಾ ಬಂಡವಾಳ ವೆಚ್ಚಕ್ಕೆ ಅದನ್ನು ಬಳಸಿರುವುದನ್ನು ಇದು ತೋರಿಸುತ್ತದೆ.

ನಾನು ನಂತರ ಉಳಿತಾಯ ಖಾತೆ ಠೇವಣಿಗಳಿಗೆ ಹೋಗುತ್ತೇನೆ. ಅಲ್ಲಿ ಸ್ವೀಕೃತಿ 390 ಲಕ್ಷ ಆಗಿರುವುದನ್ನು ನೀವು ಕಾಣಬಹುದು. ಅವರು 45 ಲಕ್ಷ ಪಡೆದಿದ್ದಾರೆ. ನಂತರ ರಾಜ್ಯದ ಸರ್ಟಿಫಿಕೇಟ್‌ಗಳು : ಅವರು 36 ಲಕ್ಷ ಸ್ವೀಕೃತಿಗೆ ಅವಕಾಶ ನೀಡಿದ್ದಾರೆ ಮತ್ತು 20 ಲಕ್ಷ ಮರು ಹೂಡಿಕೆ ಮಾಡಿದ್ದಾರೆ. ಆದ್ದರಿಂದ ಅವರು 16 ಲಕ್ಷ ಪಡಿದಿದ್ದಾರೆ. ರಾಜ್ಯ ಪ್ರಾವಿಡೆಂಟ್ ನಿಧಿ : 14 ಲಕ್ಷದಲ್ಲಿ ಅವರು ಸುಮಾರು 5 ಲಕ್ಷ ಬಳಸಿದ್ದಾರೆ. ನಂತರ ಹೂಟೆ ಖಾತೆ : 18 ಲಕ್ಷ ಮಾಯವಾಗಿದೆ ಮತ್ತು 27 ಲಕ್ಷ ಠೇವಣಿಗಳಲ್ಲಿ ಮತ್ತು ಇತರ 6 ಲಕ್ಷ ಠೇವಣಿಗಳು : ನಂತರ 80 ಲಕ್ಷ ನಗದು ಹಣ ಮಾಯವಾಗಿದೆ ಮತ್ತು ಪ್ರಾರಂಭಿಕ ನಗದು ಶುಲ್ಕದಲ್ಲಿ ಅವರು ಸ್ವಲ್ಪ ಹಣವನ್ನು ಬಳಸಿದ್ದಾರೆ. ಆದ್ದರಿಂದ ಒಟ್ಟಿನಲ್ಲಿ 435 ಲಕ್ಷ ಬೇರೆ ಬೇರೆ ಮೂಲಗಳಿಂದ ಪಡೆಯಲಾಗಿದೆ. ನಾನು ಖಜಾನೆ ಹುಂಡಿಯಿಂದ ಹೊರಬರುವ ಸಾಲದ ಬಗ್ಗೆ ಒಂದು ಆಶ್ಚರ್ಯಕರ ಲಕ್ಷಣವನ್ನು ತೋರಿಸುತ್ತಿದ್ದೇನೆ. 1951-52ರಲ್ಲಿ ನೀವು ನೋಡಬಹುದು, ನಾವು 350 ಲಕ್ಷದಷ್ಟು ಖಜಾನೆ ಹುಂಡಿಗಳನ್ನು ಹೊಂದಿದ್ದೆವು. ಈಗ 1952-53ರಲ್ಲಿ ಅದು ಕಡಿಮೆಯಾಗಿದೆ ಮತ್ತು 100 ಲಕ್ಷಕ್ಕೆ ಇಳಿದಿದೆ ಮತ್ತು ಈ 100 ಲಕ್ಷ ಮಾಯವಾಗಿದೆ. ಹಾಗೆಯೇ ನಗದು ಶುಲ್ಕ ಕೂಡ, ಸರ್ಕಾರ ಈ ಮೂಲಗಳಿಂದ ಹಣ ಪಡೆಯುವ ಉದ್ದೇಶ ಹೊಂದಿರುವುದರಲ್ಲಿ ಯಾವುದೇ ಸಂಶಯವಿಲ್ಲ. ಇದು ಅವರು ಪಡೆದ ಮೊತ್ತಗಳಾಗಿವೆ.

| | (ರೂಪಾಯಿ ಲಕ್ಷಗಳಲ್ಲಿ) |
|---|---|
| 1. ಖಜಾನೆ ಹುಂಡಿ | 100 |
| 2. ಉಳಿತಾಯ ಖಾತೆ | 45 |
| 3. ರಾಜ್ಯ ಸರ್ಟಿಫಿಕೇಟ್ | 16 |
| 4. ರಾಜ್ಯ ಪ್ರಾವಿಡೆಂಟ್ ನಿಧಿ | 05 |
| 5. ನಾಗರೀಕ ಖಾತೆ | 40 |
| 6. ಹೂಟೆ ಖಾತೆ | 18 |
| 7. ಠೇವಣಿಗಳು | 27 |
| 8. ಇತರೆ | 06 |
| 9. ಇತರ ಠೇವಣಿಗಳು | 22 |
| 10. ನಗದು ಶುಲ್ಕ | 80 |
| 11. ಪ್ರಾರಂಭಿಕ ನಗದು ಶುಲ್ಕ | 76 |
| ಒಟ್ಟು | 435 |

ಮಾನ್ಯರೇ, ಈ 43 ಲಕ್ಷ ಮೊತ್ತವನ್ನು ಸಾಮಾನ್ಯ ವೆಚ್ಚ ಮತ್ತು ಆದಾಯ ಮತ್ತು ಕೊರತೆಯ ಜೊತೆಯಲ್ಲಿ ಬಂಡವಾಳ ಮತ್ತು ಪ್ರಸ್ತುತ ವೆಚ್ಚಕ್ಕಾಗಿ ಬಳಸಿಕೊಳ್ಳಲು ಉದ್ದೇಶಿಸಲಾಗಿದೆ.

ಮಾನ್ಯರೇ, ಇದಕ್ಕೆ ವಿರುದ್ಧವಾಗಿ, ಬಂಡವಾಳ ವೆಚ್ಚಕ್ಕಾಗಿ ನೀಡಲ್ಪಟ್ಟ ಮೊತ್ತ ಎಷ್ಟು ? ಸುಮಾರು 504 ಲಕ್ಷ ನೀರಾವರಿಗೆ ಮತ್ತು 275 ಲಕ್ಷ ಕೇಂದ್ರ ಧನ ಸಹಾಯವನ್ನು ಮತ್ತು 38 ಲಕ್ಷ ಹೆಚ್ಚು ಆಹಾರ ಬೆಳೆಯಲು ನಿರೀಕ್ಷಿಸಲಾಗಿದೆ. ಆದ್ದರಿಂದ 748 ಲಕ್ಷದಲ್ಲಿ 435 ಲಕ್ಷ + 313 ಲಕ್ಷ, ಭಾರತ ಸರ್ಕಾರದಿಂದ ಅವರು ಬಂಡವಾಳ ವೆಚ್ಚಕ್ಕಾಗಿ 504 ಲಕ್ಷ ವೆಚ್ಚ ಮಾಡಲು ಉದ್ದೇಶಿಸಿದ್ದಾರೆ. ಉಳಿದ 244 ಲಕ್ಷ ದಿನನಿತ್ಯದ ಸಾಮಾನ್ಯ ವೆಚ್ಚಕ್ಕಾಗಿ ಬಳಸಲಾಗುತ್ತದೆ. ಈ ಎಲ್ಲಾ ಮೊತ್ತಗಳೂ ಅಂದರೆ 748 ಲಕ್ಷ ಬಂಡವಾಳ ವೆಚ್ಚಕ್ಕಾಗಿ ಬಳಸಲಾಗಿದೆಯೆಂದು ಒಂದು ಕ್ಷಣದಲ್ಲಿ ಒಪ್ಪಿಕೊಂಡರೆ, ಆ ಎಲ್ಲಾ ಮೊತ್ತವನ್ನು ಬಂಡವಾಳ ವೆಚ್ಚಕ್ಕಾಗಿ ಬಳಸಿಲ್ಲ ಮತ್ತು ಬಂಡವಾಳ ವೆಚ್ಚಕ್ಕಾಗಿ ಪ್ರಸ್ತುತ ವೆಚ್ಚಕ್ಕಾಗಿ ಬಳಸಿಕೊಳ್ಳಲಾಗಿದೆ.

ಮಾನ್ಯರೇ, ಈಗ ನಾನು ಬಜೆಟ್‌ನ ಸಂಪೂರ್ಣ ಪರಿಸ್ಥಿತಿಯನ್ನು ಹೇಳುತ್ತೇನೆ. ಬಜೆಟ್‌ನ ಪರಿಸ್ಥಿತಿ ಏನು ? ಸಾಮಾನ್ಯ ವೆಚ್ಚ ಮತ್ತು ಆದಾಯಕ್ಕೆ ಸಂಬಂಧಿಸಿದಂತೆ, ಬಜೆಟ್‌ನ ಪ್ರಕಾರ, ಮುಖ್ಯಮಂತ್ರಿಗಳು ಹೇಳಿದಂತೆ ನಾವು 150 ಲಕ್ಷ ಕೊರತೆ ಅನುಭವಿಸುತ್ತಿದ್ದೇವೆ ಮತ್ತು ಇತರ

ಮೂಲಗಳಿಂದ 244 ಲಕ್ಷ ರೂಪಾಯಿಗಳನ್ನು ಪಡೆಯಲಾಗಿದೆ. ಎರಡನೆಯದಾಗಿ, ನಮ್ಮ ಸಂಪನ್ಮೂಲಗಳು ಯಾವುವು ? ಎಲ್ಲಾ ನಿಧಿಗಳೂ ಮಾಯವಾಗಿವೆ.

ಶ್ರೀ ಎಮ್. ಶಂಕರಲಿಂಗೇಗೌಡ - ಅವು ಇನ್ನೂ ಉಳಿದಿವೆ.

ಜನಾಬ್ ಜಿ. ಮೊಹಮ್ಮದ್ ಇಮಾಂ - ನಾನು ಈಗ ಅದಕ್ಕೆ ಬರುತ್ತೇನೆ. ನಾವು ಕಾಯ್ದಿಟ್ಟ ಯಾವ ನಿಧಿಗಳನ್ನು ಹೊಂದಿದ್ದೇವೆ ? ನಮ್ಮ ಎಲ್ಲಾ ಕಾಯ್ದಿಟ್ಟ ನಿಧಿಗಳೂ ಮಾಯವಾಗಿದೆ ಮತ್ತು ನಮ್ಮ ನಗದು ಶುಲ್ಕ ಕೇವಲ 370 ಲಕ್ಷ ರೂಪಾಯಿಗಳಾಗಿದೆ. ನಮ್ಮ ಎಲ್ಲಾ ಖಜಾನೆ ಹುಂಡಿಗಳೂ ಮಾಯವಾಗಿವೆ ಮತ್ತು ಅವಲಂಬಿಸಲು ನಮಗೆ ಏನು ಇಲ್ಲ. ಶ್ರೀ ವೀರಪ್ಪ ಗೌಡರು ಹೇಳಿದರು "ಆಪದ್ಧನ, ಆಪದ್ಧನ", "ಆಪತ್ತು" ಬರುತ್ತದೆ ಆದರೆ "ಧನ" ಇಲ್ಲ. ಅದು ಪರಿಸ್ಥಿತಿಯಾಗಿದೆ. ನಮ್ಮ ಹೊಣೆಗಾರಿಕೆ ಏನು ? ಹೊಣೆಗಾರಿಕೆ ನಿವಾರಿಸಲು ಸಂಪನ್ಮೂಲಗಳು ಯಾವುವು ಮತ್ತು ನಮ್ಮ ಆಸ್ತಿಗಳು ಯಾವುವು ? ಒಂದು ವೇಳೆ ನೀವು ದಯಮಾಡಿ ಬಜೆಟ್ ಮನವಿಯ 79ನೇ ಪುಟ ಪರಿಶೀಲಿಸಿದರೆ ಆಗ ಸರ್ಕಾರ 15,6900.000 ರೂಪಾಯಿಗಳಷ್ಟು ಸಾಲಪತ್ರ ಹೊಂದಿರುವುದನ್ನು ನೀವು ಕಾಣಬಹುದು. ಹಿಂದೊಮ್ಮೆ ಮಾಜಿ ಹಣಕಾಸು ಸಚಿವರು ಎಲ್ಲಾ ಸಾಲ ಪತ್ರಗಳನ್ನು ಮಾರಾಟ ಮಾಡುತ್ತೇನೆಂದು ಬೆದರಿಕೆ ಹಾಕಿದ್ದರೂ ಅವರು ಸಾಲ ಪತ್ರಗಳನ್ನು ಹೊಂದಿದ್ದಾರೆಂದು ನಾನು ಆಶಿಸುತ್ತೇನೆ. ಅವು ಅಲ್ಲವೆ ಎಂದು ನಾವು ಆಶಿಸುತ್ತೇವೆ. ಇದಕ್ಕೆ ವಿರುದ್ಧವಾಗಿ, ಕೊರತೆ ನಿಧಿಯ ಬಗ್ಗೆ ಮತ್ತು ಇತರ ವಿಷಯಗಳ ಹೊಣೆಗಾರಿಕೆ ಏನು ? ನೀವು ಹೇಳಿಕೆಯಿಂದ ತಿಳಿಯಬಹುದು 31ನೇ ಮಾರ್ಚ್ 1952ರಲ್ಲಿ ಅಂದಾಜು ಬಾಕಿ 3,172 ಲಕ್ಷ ರೂಪಾಯಿಗಳೆಂದು, 31 ಕೋಟಿರೂ ಹಲವು ಬಾಬ್ತುಗಳನ್ನು ಹೊಂದಿದೆ (Sinking fund) ತೀರುವೆ ನಿಧಿ, ಬರಗಾಲ ಪರಿಹಾರ ನಿಧಿ, ರಾಜ್ಯ ಪ್ರಾವಿಡೆಂಟ್ ನಿಧಿ, ವಿಮಾನಿಧಿ ಇತ್ಯಾದಿ, ಇದು ಅವರು ಎದುರಿಸಬೇಕಾದ ಸರ್ಕಾರದ ಹೊಣೆಗಾರಿಕೆಯಾಗಿದೆ. ಇದಕ್ಕೆ ಪ್ರತಿಯಾಗಿ, ನಾವು ಕೇವಲ 15 ಕೋಟಿರೂ ಮತ್ತು 69 ಲಕ್ಷ ರೂಪಾಯಿಗಳ ಸಾಲ ಪತ್ರಗಳನ್ನು ಹೊಂದಿದ್ದೇವೆ. ಉಳಿದುದರ ಬಗ್ಗೆ ಏನು ? ಹೇಗೇ ಹೊಣೆಗಾರಿಕೆಯನ್ನು ನಿಭಾಯಿಸುವುದು ? 1947ರಲ್ಲಿ ಅದು ಹೇಗಿತ್ತು ಎಂಬುದಕ್ಕೆ ನಾನು ಇಲ್ಲಿ ಎಂದು ಉದಾಹರಣೆ ಕೊಡುತ್ತೇನೆ. ಈ ಮಂತ್ರಿ ಮಂಡಲ ಅಧಿಕಾರ ವಹಿಸಿಕೊಳ್ಳುವ ಸ್ವಲ್ಪ ಮೊದಲು, ಹೊಣೆಗಾರಿಕೆಯ ಸ್ಥಿತಿ ಹೇಗಿತ್ತು. ರಾಜ್ಯದ ತೀರುವೆ ನಿಧಿಗೆ ಪ್ರತಿಯಾಗಿ 16 1/2 ಕೋಟಿ ರೂಪಾಯಿಗಳು ಸಾಲ ಮತ್ತು ಹೊಣೆಗಾರಿಕೆ ಇತರ ಅಂಶಗಳೊಂದಿಗೆ ಅವರು ನಗದು ಸಂಪನ್ಮೂಲ ಹೊಂದಿದ್ದರು. ನಗದು ಸಂಪನ್ಮೂಲ 36 ಕೋಟಿ ರೂಪಾಯಿಗಳು ಮತ್ತು ಇತರ ಕಾಯ್ದಿಟ್ಟ ನಿಧಿಯನ್ನು ಹೊರತುಪಡಿಸಿ 36 ಕೋಟಿ ರೂ.ಗಳ ಹಲವು ನಗದು ಸಂಪನ್ಮೂಲಗಳಿದ್ದವು. ಆದ್ದರಿಂದ ಯಾವ ಭಯವೂ ಇರಲಿಲ್ಲ ಮತ್ತು ನಮ್ಮ ಹೊಣೆಗಾರಿಕೆ ಸಾಕಷ್ಟು ಕಡಿಮೆ ಇತ್ತು. ಈಗ ನಮ್ಮ ಹೊಣೆಗಾರಿಕೆ ಏನಾಗಿದೆ ? ರಾಜ್ಯ ಎದುರಿಸಬೇಕಾದ ಹೊಣೆಗಾರಿಕೆ ಎಷ್ಟು ? ಅದು ತುಂಬಾ ಸರಳವಾಗಿದೆ, ಅಂದರೆ 16 1/2 ಕೋಟಿ ರೂಪಾಯಿಗಳ ಸಾಲದ ಬಾಂಡುಗಳು. ಇದಕ್ಕೆ ಕೇಂದ್ರ ನೀಡಿದ ಸಾಲ ಸೇರಿಸಬೇಕು, ಮುಖ್ಯಮಂತ್ರಿಗಳ ಹೇಳಿಕೆಯಲ್ಲಿರುವಂತೆ ಅದು ಸುಮಾರು 7 1/2 ಕೋಟಿ ರೂಪಾಯಿಗಳಷ್ಟಾಗುತ್ತದೆ - ಈ ವರ್ಷದ ಸಾಲವನ್ನು ಸೇರಿಸಿ ಅದು 7 1/2 ಕೋಟಿ ರೂಪಾಯಿಗಳಾಗುತ್ತದೆ. ಇದಕ್ಕೆ ತೀರುವೆ ನಿಧಿ ಹೊಣೆಗಾರಿಕೆ, ರಾಜ್ಯ ವಿಮಾ ನಿಧಿ,

ಮತ್ತು ಇತರ ನಿಧಿ ಸೇರಿಸಿದರೆ, ಅದು 17 ಕೋಟಿ ರೂಪಾಯಿಗಳಷ್ಟಾಗುತ್ತದೆ. ಆದ್ದರಿಂದ ರಾಜ್ಯ ನಿವ್ವಳ 40 ಕೋಟಿ ರೂಪಾಯಿಗಳ ಹೊಣೆಗಾರಿಕೆ ಹೊಂದಿದೆ ಮತ್ತು ಇದನ್ನು ಭರಿಸಲು ಸಂಪನ್ಮೂಲಗಳು ಯಾವುವು ? ನಗದು ಸಾಲ ಪತ್ರಗಳ ಮೊತ್ತ 15 ಕೋಟಿ ರೂಪಾಯಿಗಳಷ್ಟಿದೆ. ಮತ್ತೇನಾದರೂ ಇದೆಯೆ ? ಇದು ಶೋಚನೀಯ ಪರಿಸ್ಥಿತಿ ಅಲ್ಲವೆ ? ನಿಶ್ಚಿತವಾಗಿಯೂ, ಇದು ಬಹಳ ದುಃಖಕರ ಸ್ಥಿತಿ, ಬಹಳ ಕಳವಳಕಾರಿ ಸ್ಥಿತಿ ಮತ್ತು ನಿರುತ್ಸಾಹಕರ ಪರಿಸ್ಥಿತಿಯಾಗಿದೆ.

ಶ್ರೀ ಎಮ್. ಶಂಕರಲಿಂಗೇಗೌಡ - ಆದರೆ ಆಸ್ತಿ ಬಗ್ಗೆ ಏನು ?

ಜನಾಬ್ ಜೆ. ಮೊಹಮ್ಮದ್ ಇಮಾಂ - ನನ್ನ ಸ್ನೇಹಿತರಾದ ಶ್ರೀ ಶಂಕರಲಿಂಗೇಗೌಡರು ನನಗೆ ಆಸ್ತಿಯ ಬಗ್ಗೆ ನೆನಪು ಮಾಡಿಕೊಡುತ್ತಿದ್ದಾರೆ. ರೈಲ್ವೆ ಆಸ್ತಿಯನ್ನು ನಾವು ವರ್ಗಾವಣೆ ಮಾಡಿದ ಮೇಲೆ ಆಸ್ತಿಗಳ ಹೊಣೆಗಾರಿಕೆಗಿಂತ 6 ಕೋಟಿ ರೂಪಾಯಿಗಳಷ್ಟು ಹೆಚ್ಚಾಗಿದೆ. 1947-48ರಲ್ಲಿ ಆಸ್ತಿಗಳು 60 ಕೋಟಿ ಮತ್ತು 62 ಲಕ್ಷ ರೂಪಾಯಿಗಳಷ್ಟಿತ್ತು. ಈಗ ಪ್ರಸ್ತುತ ವರ್ಷ ಆಸ್ತಿಗಳು ಎಷ್ಟಿವೆ ? ಅದು ರೈಲ್ವೆ ಆಸ್ತಿ ಸೇರಿ ಸುಮಾರು 67 ಕೋಟಿ ರೂಪಾಯಿಗಳಷ್ಟಿದೆ. ಆದ್ದರಿಂದ ಈ ಅವಧಿಯಲ್ಲಿ (ರೈಲ್ವೆ ಆಸ್ತಿಯೂ ಸೇರಿ) ಆಸ್ತಿಗಳು 6 1/2 ಕೋಟಿ ರೂಪಾಯಿ ಹೆಚ್ಚಿವೆ, ಬಂಡವಾಳ ಕಾರ್ಯಗಳಿಗಾಗಿ ನಾವು ಈ ಅವಧಿಯಲ್ಲಿ ಮಾಡಿದ ವೆಚ್ಚ ಸುಮಾರು 30.35 ಕೋಟಿ ರೂಪಾಯಿಗಳಾಗುತ್ತವೆ. ಹೆಚ್ಚಳ ಬಹಳಷ್ಟು ಕಂಡು ಬಂದಿದೆ. ನಾವು ಮಾಡಿರುವ ಎಲ್ಲಾ ವೆಚ್ಚಗಳ ಮೊತ್ತದಷ್ಟು ಆಸ್ತಿಗಳು 7 ಕೋಟಿ ರೂಪಾಯಿಗಳಷ್ಟು ಹೆಚ್ಚಲೇಬೇಕೆ ಮತ್ತು ಹೊನ್ನೇಮರಡು ಅಥವಾ ಮೇಕೆದಾಟು ಅಥವಾ ಹೆಚ್ಚು ಆಹಾರ ಬೆಳೆಯುವ ಪ್ರಣಾಳಿಕೆಯ ಬಗ್ಗೆ ಆಡಿದ ಉದ್ದುದ್ದ ಮಾತುಗಳು ಮಾರಿ ಈ ಹೆಚ್ಚಳ ಸಾಕೆ ? ಮಹಾರಾಜರು ಹೇಳಿದ್ದಾರೆ "ಮೊದಲ ಅಧ್ಯಾಯ ಆರಂಭವಾಗಿದೆ" ಮತ್ತು ಎರಡನೇ ಅಧ್ಯಾಯ ಆರಂಭಗೊಂಡಿದೆ. ಎಲ್ಲಾ ಜವಾಬ್ದಾರಿಯಿಂದೊಡಗೂಡಿ ನಾನು ಹೇಳುತ್ತೇನೆ ಈ ಅಧ್ಯಾಯ ಹಣಕಾಸಿನ ದುಂದುವೆಚ್ಚದ, ಜವಾಬ್ದಾರಿ ಇಲ್ಲದ ಮತ್ತು ಅದು ಅವರು ನಮಗೆ ಬಿಟ್ಟು ಹೋದ ಪರಂಪರೆ, ನಿರ್ಧನಿಸರ್ಕಾರದ ಪರಂಪರೆ, ನಿಧಿ ರಹಿತ ಮತ್ತು ಹೆಚ್ಚು ಹೊಣೆಗಾರಿಕೆ ನಮ್ಮ ತಲೆ ಮೇಲೆ ಈಗ ಬೀಳುವಂತಹ ಅಧ್ಯಾಯವಾಗಿದೆ. ಇದು ಒಂದು ಶೋಚನೀಯ ಪರಿಸ್ಥಿತಿ. ಶಿಕ್ಷಣ ಮತ್ತು ವೈದ್ಯಕೀಯ ವಿಭಾಗಗಳಿಗೆ ಮಾಡಿದ ಹೆಚ್ಚುವರಿ ಹಣದ ವಿನಿಯೋಗಕ್ಕಾಗಿ ನನ್ನ ಸ್ನೇಹಿತರು ಸರ್ಕಾರವನ್ನು ಅಭಿನಂದಿಸಿದ್ದಾರೆ. ಅವರು ಮಾಡಿದುದಕ್ಕೆ ನಾನು ಸಂತೋಷವಾಗಿದ್ದೇನೆ, ಆದರೆ ಅದೇ ಪೂರ್ಣವಲ್ಲ. ನಾನು ಇನ್ನು ಹೆಚ್ಚು ಬಯಸುತ್ತೇನೆ. ಇಂಗ್ಲೆಂಡಿನಲ್ಲಿ ಎಂತಹ ವೈದ್ಯಕೀಯ ಸೌಲಭ್ಯ ನೀಡಿದ್ದಾರೆಂದು ನಾನು ನೋಡಿದ್ದೇನೆ. ಇಲ್ಲಿ 16 ವರ್ಷದವರೆಗೆ ಕಡ್ಡಾಯ ಉಚಿತ ಶಿಕ್ಷಣ ರಾಜ್ಯದಾದ್ಯಂತ ಅಸ್ತಿತ್ವದಲ್ಲಿದೆ.

ಶ್ರೀ ಎ. ಭೀಮಪ್ಪ ನಾಯ್ಕ - ನಾನು 77ನೇ ಪುಟದತ್ತ ಗಮನವನ್ನು ಕೇಳಲೆ ? ಹೊಣೆಗಾರಿಕೆಗಿಂತ 823.57 ಲಕ್ಷ ಹೆಚ್ಚು ಆಸ್ತಿಗಳು .............

ಜನಾಬ್ ಜೆ. ಮೊಹಮ್ಮದ್ ಇಮಾಂ - ಅದೇ ನಾನು ಹೇಳಿದ್ದು.

ಮಾನ್ಯ ಸಭಾಪತಿಗಳು - ನೀವು '6 ಕೋಟಿ' ಹೇಳಿದಿರೆಂದು ನಾನು ಭಾವಿಸುತ್ತೇನೆ.

ಜನಾಬ್ ಜೆ. ಮೊಹಮ್ಮದ್ ಇಮಾಂ - ನಾನು ಸರಿಪಡಿಸುತ್ತೇನೆ, ನಾನು ರೈಲ್ವೆ ಆಸ್ತಿಗಳನ್ನು ಕಳೆಯಬೇಕಿತ್ತು ಎಂದು ಭಾವಿಸುತ್ತೇನೆ. ಅವರು 774 ಲಕ್ಷ ರೂಪಾಯಿಗಳಷ್ಟು ಮೈಸೂರು ರಾಜ್ಯ ರೈಲ್ವೆ ಆಸ್ತಿಯನ್ನು ತೆಗೆದುಕೊಂಡಿದ್ದಾರೆ. 1952-53 ರಲ್ಲಿಯೂ, ಸರಿಪಡಿಕೆಯಲ್ಲೂ ನಾವು ರೈಲ್ವೆ ಆಸ್ತಿಯನ್ನು ತೆಗೆದುಕೊಂಡಿದ್ದೇವೆ, ಅದನ್ನು ಮಾಡಬಾರದಾಗಿತ್ತು.

ನಾನು ಇಂಗ್ಲೆಂಡಿನ ಬಗ್ಗೆ ಮಾತನಾಡುತ್ತಿದ್ದೆ. ನಾನು ಒಬ್ಬ ಆಶಾವಾದಿ. ಇಲ್ಲಿಯೂ ಅಂತಹದೇ ಶೈಕ್ಷಣಿಕ ಮತ್ತು ವೈದ್ಯಕೀಯ ಸೌಲಭ್ಯಗಳನ್ನು ಅಳವಡಿಸಬೇಕೆಂದು ನಾನು ಬಯಸುತ್ತೇನೆ. ಈ ವರ್ಷ ನಾವು ಧನ ಸಹಾಯವನ್ನು ಸ್ವಲ್ಪ ಹೆಚ್ಚು ಲಕ್ಷಕ್ಕೆ ಏರಿಸಬಹುದು, ಆದರೆ ನಾವು ಸ್ಥಿರವಾದ ಬಜೆಟ್ ಹೊಂದದ ಹೊರತು, ಉತ್ತಮ ಬಜೆಟ್ ಹೊಂದದ ಹೊರತು ಸಂವಿಧಾನದ 4ನೇ ಅಧ್ಯಾಯದಲ್ಲಿ ಕೊಟ್ಟಿರುವ ಎಲ್ಲಾ ನಿರ್ದೇಶನಗಳನ್ನು ಜಾರಿಗೆ ತರುವ ಅಭಿವೃದ್ಧಿ ಪರ ನೀತಿಯನ್ನು ಹೊಂದಲು ಸಾಧ್ಯವಿಲ್ಲ.

ಇನ್ನೊಂದು ಕಡೆ, ಶಾಲೆಗಳನ್ನು ತೆರೆಯುತ್ತಿರುವ ನೀತಿಯನ್ನು ಪರಿಗಣಿಸಿದರೆ, ನೀವು ನೀಡಿದ ಹಣಕಾಸು ಮೊತ್ತ, ಎಲ್ಲವೂ ಅಪವ್ಯಯವಾಗುವುದೆಂದು ನಾನು ನಂಬಿದ್ದೇನೆ.

ಈಗ ಅರ್ಥವ್ಯವಸ್ಥೆಗೆ ಬಂದರೆ, ಮುಖ್ಯಮಂತ್ರಿಗಳು ರಾಜ್ಯದ ಅರ್ಥವ್ಯವಸ್ಥೆಯ ಬಗ್ಗೆ ಅವರು ಹಲವು ಬಾರಿ - ಸರ್ಕಾರದ ವೆಚ್ಚವನ್ನು ಕಡಿಮೆ ಮಾಡುವುದರಲ್ಲಿ ಆಸಕ್ತಿ ತೋರಿದ್ದಾಗಿ ಹೇಳಿದ್ದಾರೆ. ಅವರು ಅಧಿಕ ಆಶೋತ್ತರಗಳನ್ನು ನೀಡಿದ್ದಾರೆ. ಅವರು ವೆಚ್ಚ ಕಡಿಮೆಮಾಡಿ ಕೊರತೆ ನಿವಾರಿಸುವಷ್ಟಾದರೂ ಬಜೆಟ್‌ನಲ್ಲಿ ಹೊಂದಾಣಿಕೆ ಮತ್ತು ಸಮತೋಲನವನ್ನು ಮಾಡುತ್ತಾರೆ ಎಂದು ಭಾವಿಸಿದ್ದೆ. ಆದರೆ, ಇಲ್ಲಿಗೆ ಬಂದ ಮೇಲೆ, ಬಜೆಟ್ ನೋಡಿದ ಮೇಲೆ, ಯಾವುದೇ ಮಿತವ್ಯಯವನ್ನು ನಾನು ಕಾಣಲಿಲ್ಲ. ಮಿತವ್ಯಯ ಎಂದರೇನು ? ವೆಚ್ಚದಲ್ಲಿ ಇಳಿತ ಎಂದರೇನು ? ವೆಚ್ಚದಲ್ಲಿ ಇಳಿತ ಎಂದರೆ ಹಿಂದಿನ ವರ್ಷದ ಇಳಿತಕ್ಕಿಂತ ಈ ವರ್ಷದ ವೆಚ್ಚದಲ್ಲಿನ ಇಳಿತ ಕಡಿಮೆ ಇರಬೇಕು. ಒಂದು ವೇಳೆ ಮುಖ್ಯಮಂತ್ರಿಗಳು ನಿಜವಾಗಿಯೂ ಹಣಕಾಸಿನ ಪರಿಸ್ಥಿತಿ ಸುಧಾರಿಸಲು ಆಸಕ್ತಿ ಹೊಂದಿದ್ದರೆ, ಕೊರತೆ ನಿವಾರಿಸಲು, ಅವರ ಆಸಕ್ತಿಯಿಂದ, ಇದು ಅವರ ಮುಖ್ಯ ಉದ್ದೇಶವಾಗಬೇಕಿತ್ತು, ಹಣಕಾಸಿನ ಪರಿಸ್ಥಿತಿ ಸುಧಾರಿಸುವ ಉದ್ದೇಶವನ್ನು ಈಡೇರಿಸಲು ಅವರು ಮಿತವ್ಯಯವನ್ನು ಜಾರಿಗೆ ತರಬೇಕಾಗಿತ್ತು. ಅದಕ್ಕೆ ಬದಲಾಗಿ ಅವರು 30 ಲಕ್ಷ ರೂಪಾಯಿಗಳ ಇಳಿತವನ್ನು ಕುರುಹಾಗಿ ತೋರಿಸಿಬಿಟ್ಟಿದ್ದಾರೆ ಮತ್ತು ಇನ್ನೊಂದು ಕಡೆ ವೆಚ್ಚವನ್ನು ಹೆಚ್ಚಿಸಿದ್ದಾರೆ. ಈಗ, ಒಂದು ವೇಳೆ ನಾವು ಬಜೆಟ್‌ನತ್ತ ಗಮನ ಹರಿಸಿದರೆ, ಹಿಂದಿನ ವರ್ಷ ಒಟ್ಟು ವೆಚ್ಚ ಸುಮಾರು 18 ಕೋಟಿ ರೂಪಾಯಿಗಳಾಗಿತ್ತು. ಈಗ ಅದು 20 ಕೋಟಿ ಆಗಿದೆ. ಕೈಗಾರಿಕೆ ಮೇಲಿನ ಹೆಚ್ಚುವರಿ ವೆಚ್ಚವನ್ನು ತೆಗೆದಿರಿಸಿ ವೆಚ್ಚದಲ್ಲಿನ ನಿವ್ವಳ ಹೆಚ್ಚಳ ಸುಮಾರು ರೂ 100 ಲಕ್ಷವಾಗಿದೆ. ವಾಸ್ತವವಾಗಿ ಯಾವುದೇ ಮಿತವ್ಯಯವಿಲ್ಲ. ಮಿತವ್ಯಯ ಸಂಪನ್ಮೂಲ ಹೆಚ್ಚಿಸುವಂತೆ ಮತ್ತು ಒಟ್ಟಾರೆ ವೆಚ್ಚ ಕಡಿಮೆಯಾಗುವಂತೆ ಇರಬೇಕು. ಆದರೆ ಇಲ್ಲಿ ಅದನ್ನು ಮಿತವ್ಯಯವೆಂದು ಪರಿಗಣಿಸಲು ಸಾಧ್ಯವಿಲ್ಲ, ಏಕೆಂದರೆ, ಒಟ್ಟಾರೆ ವೆಚ್ಚ ಹೆಚ್ಚಾಗಿದೆ ಮತ್ತು ಅಲ್ಲಿ ಇಲ್ಲಿ ಆದಾಯ ಕಡಿಮೆಯಾಗಿದೆ. ಆದ್ದರಿಂದ ಇದು ಮಿತವ್ಯಯ ಅಲ್ಲ. ಏಕೆಂದರೆ ವೆಚ್ಚದಲ್ಲಿ ಹೆಚ್ಚಳ ಉಂಟಾಗಿದೆ, ಮತ್ತು ಕೆಲವು ವಿಭಾಗಗಳಲ್ಲಿ ಅವರು ಸ್ವಲ್ಪ ಉಳಿತಾಯವನ್ನು ಜಾರಿಗೆ

ತಂದಿದ್ದಾರೆ ಎಂದ ಮಾತ್ರಕ್ಕೆ ನಾನು ಅದನ್ನು ಮಿತವ್ಯಯವೆಂದು ಹೇಳಲಾರೆ ಅಥವಾ ಮುಖ್ಯಮಂತ್ರಿಗಳು ಬಜೆಟ್‌ನಲ್ಲಿ ಸ್ಥಿರತೆಯನ್ನು ತರಲು ಪ್ರಯತ್ನಿಸಿದ್ದಾರೆ ಎಂದು ಒಪ್ಪಿಕೊಳ್ಳಲಾರೆ. ನಾನು ನೋಡುವಂತೆ, ನಾವು ತುಂಬಾ ಗೊಂದಲದಲ್ಲಿದ್ದೇವೆ, ಪ್ರಮುಖವಾಗಿ ನಾನು ಏಕೆಂದರೆ ನನ್ನ ಮಂತ್ರಿ ಸ್ಥಾನದಲ್ಲಿ ಹೆಚ್ಚು ಸಂಪದ್ಭರಿತ ದಿನಗಳನ್ನು ನೋಡಿದ್ದೇನೆ, ಸರ್ಕಾರ ಅಧಿಕ ಹಣ ಮತ್ತು ಹೆಚ್ಚುವರಿ ನಿಧಿಗಳನ್ನು ಆಗ ಹೊಂದಿತ್ತು. ಆದರೆ ಇಲ್ಲಿ ಈಗ ನಾನು ನೋಡುತ್ತಿರುವುದು ನಿಜಕ್ಕೂ ಶೋಚನೀಯವಾಗಿದೆ. ನನಗೆ ಬಹಳಷ್ಟು ನೋವುಂಟಾಗಿದೆ. ಮುಖ್ಯಮಂತ್ರಿಗಳು ತುಂಬಾ ಕಠಿಣವಾದ, ಜವಾಬ್ದಾರಿಯುತ ಕ್ರಮಗಳನ್ನು ಬಜೆಟ್ ಸ್ಥಿರತೆಗಾಗಿ ಕೈಗೊಳ್ಳಬೇಕೆಂದು ನಾನು ನಂಬುತ್ತೇನೆ. ನಾವು ಕೇಂದ್ರದ ಧನಸಹಾಯವನ್ನು ಮತ್ತೆ ಅವಲಂಬಿಸಿರಲು ಸಾಧ್ಯವಿಲ್ಲ. ಅವರು ನಮಗೆ ಈಗಾಗಲೇ ಸಾಲದ ಮೂಲಕ 7 ಕೋಟಿ ರೂಪಾಯಿಗಳನ್ನು ಕೊಟ್ಟಿದ್ದಾರೆ. ನಮ್ಮ ಬಜೆಟ್‌ನ ಸ್ಥಿತಿ ಏನಾಗಿದೆ ? ಹಣಕಾಸಿನ ವಿಷಯದಲ್ಲಿ ನಾವು ನಿಸ್ಸಹಾಕರಾಗಿದ್ದೇವೆ. ಪ್ರತಿಯೊಂದಕ್ಕೂ ನಾವು ಕೇಂದ್ರವನ್ನು ಅವಲಂಬಿಸುತ್ತಿದ್ದೇವೆ. ನೀವು ಹಣಕಾಸು ಮಂತ್ರಿಗಳ ಭಾಷಣವನ್ನೇ ತೆಗೆದುಕೊಳ್ಳಿ ಪ್ರತಿಯೊಂದಕ್ಕೂ ಕೇಂದ್ರ ಸಹಾಯ ನೀಡದೆ ಹೋದರೆ ನಮ್ಮ ಅಭಿವೃದ್ಧಿ ಮುಂದುವರಯುವುದಿಲ್ಲವೆಂದು ಅವರು ಹೇಳುತ್ತಾರೆ. ಆದ್ದರಿಂದ ನಾವು ನಿಸ್ಸಹಾಯಕ ಪರಿಸ್ಥಿತಿಯಲ್ಲಿದ್ದೇವೆ. ನಾವು ನಮ್ಮ ಕಾಲ ಮೇಲೆ ನಿಲ್ಲಲು ಸಾಧ್ಯವಾಗಬೇಕು. ಮೈಸೂರು ತನ್ನ ಕಾಲ ಮೇಲೆ ತಾನು ನಿಲ್ಲಬಹುದು. ಹಿಂದೆಯೂ ಅದು ತನ್ನ ಕಾಲ ಮೇಲೆ ತಾನು ನಿಂತಿದೆ ಮತ್ತೆ ಅನೇಕ ನೀರಾವರಿ ಯೋಜನೆ ಹಾಗೂ ಕೈಗಾರಿಕೆಗಳನ್ನು ಅದು ಕೈಗೊಂಡಿದೆ. ಮೈಸೂರು ಹಣಕಾಸಿನ ನೆರವಿನಿಂದಲೇ ಅದು ಎಲ್ಲವನ್ನೂ ಮಾಡಿದೆ. ಮುಖ್ಯಮಂತ್ರಿಗಳು ಈ ನೀತಿಯನ್ನು ಅನುಸರಿಸಬೇಕು ಮತ್ತು ಅವರು ಪ್ರಯತ್ನ ಸಾಕಷ್ಟು ಮಾಡಬೇಕು. ನಾನು ಅವರನ್ನೇ ಪೂರ್ಣ ಜವಾಬ್ದಾರರೆಂದು ಹೇಳುತ್ತಿಲ್ಲ. ಅವರ ಇಲಾಖೆಗೆ ಅವರು ಹೊಸಬರು ಎಂಬುದನ್ನು ನಾನು ಬಲ್ಲೆ. ಯಾವ ರೀತಿಯಲ್ಲಾದರೂ ಅವರು ಬಜೆಟ್‌ನ್ನು ಅದರ ಹಿಂದಿನ ಸ್ಥಿತಿಗೆ ಬರುವಂತೆ ಅವರು ಬಜೆಟ್‌ನಲ್ಲಿ ಸ್ಥಿರತೆ ಹಾಗೂ ಸಮತೋಲನ ತರಲು ಪ್ರಯತ್ನಿಸಬೇಕು. ನಮ್ಮ ನಿಧಿಗೆ ಸ್ವಲ್ಪ ವಂತಿಗೆ ನೀಡುವಷ್ಟು ಸಮತೋಲನ ಮಾಡಲು ಸಾಧ್ಯವಾದರೂ, ನಾನು ಅದನ್ನು ತೃಪ್ತಿಕರವೆಂದು ಪರಿಗಣಿಸುವುದಿಲ್ಲ.

ಮಾನ್ಯರೇ, ಈಗ ನಾನು ಹೊಸ ಆದಾಯದ ಮೂಲಗಳಿಗೆ ಬರುತ್ತೇನೆ. ಮೂಲಗಳು ಯಾವುವು ? ನಮ್ಮ ಒಳಗಿನ ಭಾವನೆಗಳು ಮತ್ತು ನಂಬಿಕೆಗಳನ್ನು ದೂರ ಇಡುವಂತೆ ನಿಮ್ಮನ್ನು ಕೇಳುತ್ತಿದ್ದೇನೆ. ಪಾನ ನಿಷೇದ ನೀತಿಗೆ ಸಂಬಂಧಿಸಿದಂತೆ, ನಾನು ಅದರ ಬಗ್ಗೆ ದೀರ್ಘವಾಗಿ ಮಾತನಾಡುವುದಿಲ್ಲ ಏಕೆಂದರೆ, ಅದರ ಬಗ್ಗೆ ಮಾತನಾಡಲು ಇನ್ನೊಂದು ಅವಕಾಶ ತೆಗೆದುಕೊಳ್ಳಬಯಸುತ್ತೇನೆ. ಮಾನ್ಯರೇ ಈ ಪಾನ ನಿಷೇಧ ನೀತಿ ರಾಜಾಜಿಯವರ ಅಚ್ಚುಮೆಚ್ಚಿನ ಕಾನೂನಾಗಿದೆ. ಒಬ್ಬ ನಿಜವಾದ ಪೋಷಕರಾಗಿ ಇದು ಉಪಯುಕ್ತವಾದ ಕಾರ್ಯವೆಸಗಲಿ ಇಲ್ಲದಿರಲಿ ಅವರು ಅದನ್ನು ಇಷ್ಟಪಡುತ್ತಾರೆ. ಇದು ಸರ್ಕಾರದ ಗಮನಕ್ಕೆ ಬರಬೇಕಾದ ಒಂದು ಅಂಶ, ಇಂತಹ ಸನ್ನಿವೇಶದಲ್ಲಿ, ಆದಾಯ ಹೆಚ್ಚಿಸುವ ರೀತಿಯಲ್ಲಿ, ಒಂದೆಡೆ ಪಾನ ನಿಯಂತ್ರಣ, ಮತ್ತೊಂದೆಡೆ ಸರ್ಕಾರಕ್ಕೆ ಒಳ್ಳೆಯ ಆದಾಯ ಬರುವಂತೆ ಈ ನೀತಿಯನ್ನು ಪರಿಷ್ಕರಿಸುವ ಅಗತ್ಯವಿಲ್ಲ. ಮುಖ್ಯಮಂತ್ರಿಗಳು ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗೆ ಭೇಟಿ ನೀಡಿದ್ದಾರೆ. ನಾನು

ಕೂಡ ಅಲ್ಲಿಗೆ ಹೋಗಿದ್ದೇನೆ. ಅಲ್ಲಿ ಅಳವಡಿಸಿಕೊಂಡ ಪದ್ಧತಿ, ಸ್ವೀಡನ್ನಿನಲ್ಲಿ ಅಳವಡಿಸಿರುವ ಪದ್ಧತಿ, ಕೇವಲ ಆದಾಯ ತರುವುದೇ ಅಲ್ಲದೆ ಅದೇ ವೇಳೆಗೆ ಪಾನದ ಕೆಡುಕನ್ನು ಸರಿಯಾಗಿ ನಿಯಂತ್ರಿಸುವಂತೆಯೂ ಇದೆ. ಇಂಗ್ಲೆಂಡಿನಲ್ಲಿ 100% ತೆರಿಗೆ ವಿಧಿಸಲಾಗಿದೆ. ಅದೂ ಕೂಡ ಪಾನನಿಷೇಧದ ಒಂದು ಮಾರ್ಗವಾಗಿದೆ. ನಾವು ವಿಷಯವನ್ನು ಛಿನ್ನಗೊಳಿಸಬಾರದು. ನಾವು ಭಾವನೆಗಳ ಪ್ರಭಾವಕ್ಕೆ ಒಳಗಾಗಬಾರದು. ಪ್ರಸ್ತುತದಲ್ಲಿ ರಾಜ್ಯ ಪಾನ ನಿಷೇಧ ಪದ್ಧತಿ ವಿಫಲವಾಗಿದೆಯೆಂದೂ, ಸಮಾಜಕ್ಕೆ ಅಪಾಯಕರವೆಂದೂ ಪ್ರತಿಯೊಬ್ಬರೂ ತಿಳಿದಿದ್ದಾರೆ. ಹಳ್ಳಿಗಳಲ್ಲಿ ನೂರಾರು ಜನರು ಅಕ್ರಮ ಮಧ್ಯ ತಯಾರಿಕೆಯಲ್ಲಿ ತೊಡಗಿದ್ದಾರೆ. ಅದು ಹಳ್ಳಿಗಳಲ್ಲಿ ಯಶಸ್ವಿಯಾಗಿದೆ. ದುಷ್ಪರಿಣಾಮಕ್ಕೆ ಒಳಗಾದ ಪ್ರದೇಶಗಳೆಂದರೆ ಹಳ್ಳಿಗಾಡುಗಳೇ ಆಗಿವೆ. ಕೆಲವು ಹಳ್ಳಿಗಳಲ್ಲಿ, ಪ್ರತಿಯೊಂದು ಮನೆಗೂ ಒಂದು ಅಕ್ರಮ ಮದ್ಯ ತಯಾರಿಕಾ ಘಟಕ ಹೊಂದಿವೆ. ಅವರು ವಿಷಕಾರಕ ಪದಾರ್ಥಗಳನ್ನು ಭಟ್ಟಿ ಇಳಿಕೆಗೆ ಬಳಸುತ್ತಿದ್ದಾರೆ. ಇದರಿಂದ ಅನೇಕ ಯುವಜನರು ಸತ್ತಿದ್ದಾರೆ. ಅವರು ಮಧ್ಯವನ್ನು ರಸಗೊಬ್ಬರ, ಅಮೋನಿಯಂ ಸಲ್‌ಫೇಟ್ ಮತ್ತು ಕಲ್ಲಚಕ್ಕೆಯಿಂದ ಮಾಡುತ್ತಾರೆ. ನೀವು ಕಠಿಣವಾದ ಬದಲಾವಣೆ ತರದ ಹೊರತು ಪಾನನಿಷೇಧ ಸಮಾಜಕ್ಕೆ ಜನರ ಆರೋಗ್ಯಕ್ಕೆ ಒಂದು ದೊಡ್ಡ ಸಮಸ್ಯೆಯಾಗುತ್ತದೆಂದು ನೀವು ಕಾಣಬಹುದು. ಒಂದು ವೇಳೆ ನೀವು ಬಯಸುವುದಾದರೆ, ನಾವು ಒಂದು ಸತ್ಯಶೋಧಕ ಸಮಿತಿಯನ್ನು ನೇಮಿಸುತ್ತೇವೆ. ಇದು ಸರಿಯಾದ ಸಮಯ, ಮೈಸೂರು ಈ ರೀತಿ ಆಶ್ರಯವನ್ನು ನೆರೆಹೊರೆ ರಾಜ್ಯಗಳಲ್ಲಿ ನೋಡಿ ಪಡೆದಿದೆ ಎಂದು ನಾನು ಭಾವಿಸುತ್ತೇನೆ. ನನ್ನ ಮಾತನ್ನು ನಂಬಿ. ನೀವು ಜನರ ಕೃತಜ್ಞತೆಯನ್ನು ಪಡೆಯುವಿರಿ ಮತ್ತು ರಾಜ್ಯದ ಹಣಕಾಸನ್ನು ಸುಧಾರಿಸುವಿರಿ. ನೀವು ಸಮಿತಿಯೊಂದನ್ನು ನೇಮಕ ಮಾಡಿ ಮತ್ತು ಪಾನ ನಿಷೇಧವನ್ನು ಬೇರೊಂದು ರೀತಿಯಲ್ಲಿ ಜಾರಿಗೆ ತನ್ನಿ. ಅದು ಮಧ್ಯಪಾನವನ್ನು ಪೂರ್ಣವಾಗಿ ನಿವಾರಿಸುವ ಮತ್ತು ಮಧ್ಯವನ್ನು ಅನುಭೋಗಿಸುವ ವಿಷಯವನ್ನು ನಿಯಂತ್ರಿಸುವ ಪಾನ ನಿಷೇಧವಾಗಬೇಕು. ನೀವು ಬಯಸಿದರೆ ಒಂದು ಸಮಿತಿ ನೇಮಕ ಮಾಡಿ ಮತ್ತು ರಾಜ್ಯಕ್ಕೆ ಆದಾಯ ತರುವ ಮತ್ತು ಜನರ ಆರೋಗ್ಯವನ್ನು ನಿಯಂತ್ರಿಸುವ ಸಾಧನಗಳನ್ನು ಮತ್ತು ಕ್ರಮಗಳನ್ನು ಕಂಡು ಹಿಡಿಯಿರಿ. ಇದು ಮುಖ್ಯವಾಗಿ ಗಮನಿಸಬೇಕಾದ ವಿಷಯವಾಗಿದೆ.

ಈ ರೀತಿ ಕರುಣಾಜನಕ ಸ್ಥಿತಿಯಲ್ಲಿ ನಾವು ಇರುವುದಕ್ಕೆ ಮತ್ತೊಂದು ಕಾರಣ ಇದಾಗಿದೆ. ಕಾಂಗ್ರೆಸ್ ಅಧಿಕಾರಕ್ಕೆ ಬರುವ ಮೊದಲು, ಸರ್ಕಾರ ಚಿನ್ನದ ತೆರಿಗೆಯಿಂದ ಸಾಕಷ್ಟು ಆದಾಯವನ್ನು ಪಡೆಯುತ್ತಿತ್ತು. ಪ್ರತಿವರ್ಷ 1 1/2 ಕೋಟಿ ರೂಪಾಯಿಗಳಷ್ಟು ಆದಾಯವನ್ನು ಪಡೆಯುತ್ತಿದ್ದೆವು. ಅದು ಬಹಳ ಚರ್ಚೆಯ ನಂತರ ಅಳವಡಿಸಲ್ಪಟ್ಟಿತ್ತು. ಒಂದು ದಿನ ಈ ಸಭೆಯಲ್ಲಿ ಚಿನ್ನದ ತೆರಿಗೆಯನ್ನು ತೆಗೆದು ಹಾಕಲು ಒಂದು ಮಸೂದೆ ಮಂಡಿಸಿದಾಗ ನಾವೆಲ್ಲರೂ ಆಶ್ಚರ್ಯ ಚಕಿತರಾಗಿದ್ದೆವು. ನಾನು ಇದರ ವಿರುದ್ಧ ಹೋರಾಡಿದ್ದೆ. ಇದು ರಾಜ್ಯದ ಒಂದು ಒಳ್ಳೆಯ ಆದಾಯದ ಮೂಲವೆಂದು. ನ್ಯಾಯಯುತ ಮೂಲವೆಂದು ಮತ್ತು ಇದನ್ನು ಬಿಡಬಾರದೆಂದು ನಾನು ಹೇಳಿದ್ದೆ. ಮಾನ್ಯರೇ, ತೆರಿಗೆಯನ್ನು ರದ್ದುಗೊಳಿಸುವ ಯೋಜನೆಯನ್ನು ಇಲ್ಲಿ ಸಂಚು ಮಾಡಲಿಲ್ಲ ಆದರೆ ಲಂಡನ್ನಿನಲ್ಲಿ ಸಂಚು ಮಾಡಲಾಗಿತ್ತೆಂದು ನಾನು ಬಲ್ಲೆ. ನಾನು ಸತ್ಯವಾಗಿ ಹೇಳುತ್ತಿದ್ದೇನೆ. ಅದು ಸರ್ ಆರ್ಕಾಟ್ ರಾಮಸ್ವಾಮಿ ಮುದಲಿಯಾರ್, ಶ್ರೀ ಹೆಚ್.ಸಿ. ದಾಸಪ್ಪ

ಮತ್ತು ಜಾನ್ ಟೇಲರ್ ಹಾಗೂ ಮಕ್ಕಳ ಜಂಟಿ ಸಭೆಯಲ್ಲಿ ಚಿನ್ನದ ತೆರಿಗೆಯನ್ನು ರದ್ದುಗೊಳಿಸುವ ಬಗ್ಗೆ ನಿರ್ಧರಿಸಲಾಗಿತ್ತು ಮತ್ತು ಅವರು ಇಲ್ಲಿಗೆ ಬಂದರು ಹಾಗೂ ಒಂದೇ ದಿನದಲ್ಲಿ ಅದನ್ನು ಇಲ್ಲಿ ಜಾರಿಗೆ ತಂದರು ಮತ್ತು ಅದನ್ನು ಹೆಚ್ಚಿನ ಸಂಖ್ಯೆಯಿಂದ ಜಾರಿಗೆ ತರಲಾಯಿತು. ಆಗ ಅವರು ನಮಗೆ ಅನೇಕ ಭರವಸೆಯಿತ್ತರು. ಈ ಹೊಸ ಯೋಜನೆ ಹೆಚ್ಚು ಆದಾಯ ತರುವುದೆಂದು ಅವರು ಹೇಳಿದ್ದರು. ಆದರೆ ನಾವು 150 ಕೋಟಿ ನಷ್ಟ ಅನುಭವಿಸಿದ್ದೇವೆ (ಕಳೆದುಕೊಂಡಿದ್ದೇವೆ). ಆದರೆ ಈಗ ಪರಿಸ್ಥಿತಿ ಏನಾಗಿದೆ ?

ಶ್ರೀ ಎ. ಭೀಮಪ್ಪ ನಾಯ್ಕ - ಬಡ ಹುಟ್ಟುಗೋಲಿನ ಕೆಲಸ !

ಜನಾಬ್ ಜೆ. ಮೊಹಮ್ಮದ್ ಇಮಾಂ - ಹೌದು. ಅವರು ಬಡ ಹುಟ್ಟುಗೋಲಿನ ಕೆಲಸ ಮತ್ತು ಮುಂದಿನ ಅಭಿವೃದ್ಧಿ ಕಾರ್ಯ ಮಾಡುವಂತೆ ಹೇಳಿದ್ದಾರೆ. ಈಗ ಪರಿಸ್ಥಿತಿ ಏನಾಗಿದೆ ? ಯಾವುದೇ ಕ್ರಮ ಕೈಗೊಂಡಿಲ್ಲ.

ಚಿನ್ನದ ತೆರಿಗೆ ರದ್ದುಗೊಳಿಸಿದ ಮೇಲೆ ಯಾವುದೇ ಕ್ರಮ ಕೈಗೊಂಡಿಲ್ಲ ಅಥವಾ ಚಿನ್ನದ ಗಣಿಯ ಮೇಲೆ ಯಾವುದೇ ನಿಗಾ ಇಟ್ಟಿಲ್ಲ. ಒಪ್ಪಂದದ ಪ್ರಕಾರ ಒಬ್ಬ ಲೆಕ್ಕ ಪರಿಶೋಧಕರನ್ನು ನೇಮಕ ಮಾಡಬೇಕು. ಇದುವರೆಗೆ, ಯಾವುದೇ ಲೆಕ್ಕ ಪರಿಶೋಧಕನನ್ನು ನೇಮಕ ಮಾಡಿಲ್ಲವೆಂದು ನಾನು ನಂಬುತ್ತೇನೆ. ಒಬ್ಬ ನಿರ್ದೇಶಕರನ್ನೂ ನೇಮಿಸಬೇಕು ಯಾವ ನಿರ್ದೇಶಕರನ್ನೂ ನೇಮಿಸಿಲ್ಲವೆಂದು ನಾನು ಭಾವಿಸುತ್ತೇನೆ. ಪದ್ಧತಿಯನ್ನು ಪರಿಶೀಲಿಸಲು ಯಾರೂ ಇಲ್ಲ. ಅವರು ಚಿನ್ನವ ತೆರಿಗೆ ಮತ್ತು ರಾಯಲ್ಟಿ ಕಂಡುಹಿಡಿಯಲು ತಮ್ಮದ್ದೇಯಾದ ವಿಧಾನ ಹೊಂದಿದ್ದಾರೆ. ನಾವು ಚಿನ್ನದ ತೆರಿಗೆಯನ್ನು ಕಳೆದುಕೊಂಡಿದ್ದೇವೆ. ದಕ್ಷಿಣ ಆಫ್ರಿಕಾ ಮತ್ತು ಆಸ್ಟ್ರೇಲಿಯಾದಂತಹ ಪ್ರದೇಶಗಳಲ್ಲಿ, ಚಿನ್ನದ ಗಣಿ ಕಂಪನಿಗಳ ಚಿನ್ನದ ಮೇಲೆ ತೆರಿಗೆ ವಿಧಿಸಲಾಗುತ್ತದೆ. ಮೈಸೂರಿನಲ್ಲಿ ಏಕೆ ಅಷ್ಟು ಅಸಭ್ಯ ರೀತಿಯಲ್ಲಿ ಅದನ್ನು ರದ್ದುಗೊಳಿಸಲಾಯಿತು ಎಂಬುದು ಪರಿಗಣಿಸಬೇಕಾದ ವಿಷಯವಾಗಿದೆ. ಇಂತಹ ಆದಾಯದ ಮೂಲಗಳು ಸುಧಾರಿಸದೇ ಹೋದರೆ ನಿಮ್ಮ ಹಣಕಾಸು ಸುಧಾರಿಸುವುದಿಲ್ಲ.

ಮಾರಾಟ ತೆರಿಗೆಗೆ ಸಂಬಂಧಿಸಿದಂತೆ ಕೆಲವೊಂದು ತಪ್ಪುಗಳಿವೆ ಎಂದು ನಾನು ಹೇಳುತ್ತೇನೆ. ಮಾರಾಟ ತೆರಿಗೆಯಿಂದ ನಾವು 1 1/2 ಕೋಟಿ ರೂಪಾಯಿ ಪಡೆದರೆ ಮದ್ರಾಸು 20 ಕೋಟಿ ಪಡೆಯುತ್ತದೆ. ವಿಭಾಗದ ಅಧಿಕ ಕಾಳಜಿಯಿಂದ ನಾವು ಹೆಚ್ಚು ಆದಾಯ ಪಡೆಯಬಹುದಾಗಿದೆಯೆಂದು ನಾವು ಭಾವಿಸುತ್ತೇನೆ.

ಕೈಗಾರಿಕೆಗಳನ್ನು ತೆಗೆದುಕೊಳ್ಳಿ ನಾನು ಸಣ್ಣ ಉಳಿತಾಯದ ಬಗ್ಗೆ ತೃಪ್ತನಾಗಿಲ್ಲ. ನಾನು ಯಾವಾಗಲೂ ಹೇಳುತ್ತಿದ್ದೇನೆ: "ಮಾರೆತೊ ಹಾಥಿಕೊ ಮಾರನಾ" ಈ ರೀತಿಯ ಹಣಕಾಸಿನ ಬಡ ಸ್ಥಿತಿ ಸ್ವಲ್ಪ ಮಟ್ಟಿಗೆ ನಿಯಂತ್ರಣವನ್ನು ಹೇರಿರುವುದರಿಂದಲೇ ಆಗಿದೆ ಎಂದು ನನಗೆ ಗೊತ್ತಿದೆ. ಪೂರ್ತಿಯಾಗಿ ಇಂತಹ ನಿಯಂತ್ರಣಗಳನ್ನು ನಿವಾರಿಸದ ಹೊರತು, ಈ ಆಹಾರ ವಿಭಾಗವನ್ನು ರದ್ದುಗೊಳಿಸುವ ಹೊರತು, ನಮ್ಮ ಹಣಕಾಸು ಸುಧಾರಿಸುವುದಿಲ್ಲ. ಒಬ್ಬ ಜವಾಬ್ದಾರಿಯುತ ವ್ಯಕ್ತಿಯಾಗಿ, ಈ 3 ಕಾರಣಗಳಿಗಾಗಿ ಎಷ್ಟೆ ತೊಂದರೆಗಳಾದರೂ ನಿಯಂತ್ರಣವನ್ನು ತೆಗೆದು ಹಾಕಬೇಕೆಂದು ನಿಮ್ಮನ್ನು ಕೇಳುತ್ತಿದ್ದೇನೆ. 95% ಜನರು ನಿಯಂತ್ರಣ

ನಿವಾರಿಸುವುದರ ಪರವಾಗಿದ್ದಾರೆಂದು ನಾನು ಭಾವಿಸುತ್ತೇನೆ. ಕಳೆದ 12 ವರ್ಷಗಳಿಂದ ನಿಯಂತ್ರಣಗಳನ್ನು ಕಾರ್ಯಗತಗೊಳಿಸಲಾಗಿದೆ ಮತ್ತು ಅವುಗಳು ಧನಾತ್ಮಕ ತೊಡಕಾಗಿವೆ. ನಿಯಂತ್ರಣ ರದ್ದತಿಯಿಂದ ಎಲ್ಲಾ ಸಮಸ್ಯೆಗಳು ನಿವಾರಣೆಯಾಗುತ್ತದೆ ಮತ್ತು ಸರ್ಕಾರಕ್ಕೆ ಸಾಕಷ್ಟು ಉಳಿತಾಯ ಆಗುತ್ತದೆ. ನೀವು ಜನರನ್ನು ಧನ ಲೋಭದಿಂದ ಜನರಿಂದ ರಕ್ಷಿಸಬಹುದು ಮತ್ತು ಲಂಚಗುಳಿತನ ಕಡಿಮೆಯಾಗುತ್ತದೆ. ಎರಡನೆಯದಾಗಿ, ನಿಯಂತ್ರಣಗಳು ಜನರ ಹಿತಕ್ಕಾಗಿ ಇವೆ. ಸಾಧಾರಣ ವೆಚ್ಚದಲ್ಲಿ ಜನರಿಗೆ ಸರಿಯಾಗಿ ಆಹಾರ ಸಿಗುವಂತೆ ಮಾಡುವುದು ನಿಯಂತ್ರಣದ ಉದ್ದೇಶವಾಗಿದೆ. ಯಾವುದೇ ರೀತಿಯಲ್ಲಿ ಜನರನ್ನು ತೊಂದರೆಗೆ ಒಳಪಡಿಸಬಾರದೆಂದು ನಿಯಂತ್ರಣಗಳು ಇವೆ. ಸರ್ಕಾರ ಸಾಕಷ್ಟು ಸಬ್ಸಿಡಿ ನೀಡುವಂತೆ ಮಾಡಲು ನಿಯಂತ್ರಣಗಳಿವೆ. ಆದರೆ ನೀವು ಈ ಷರತ್ತುಗಳನ್ನು ಪೂರ್ತಿ ಮಾಡಿದ್ದೀರಾ ? ಅದಕ್ಕೆ ಸಂಬಂಧಿಸಿದಂತೆ ನೀವು ಕಾಳಸಂತೆ ಮಾರುಕಟ್ಟೆ ಬೆಲೆಯನ್ನು ನಿಗದಿಪಡಿಸಿದ್ದೀರಿ.

ಮಾನ್ಯ ಸಭಾಪತಿ - ಆಹಾರ ನೀತಿಯ ಚರ್ಚೆಗೆ ಒಂದು ದಿನವನ್ನು ಮೀಸಲಿಡಲಾಗಿದೆ. ವಿಸ್ತರಿಸಲಾಗಿ ನಂತರ ಅದನ್ನು ಹೇಳಬಹುದು.

ಜನಾಬ್ ಜೆ. ಮೊಹಮ್ಮದ್ ಇಮಾಂ - ನೀವು ಅಕ್ಕಿಯ ಬೆಲೆಯನ್ನು ಕ್ರಮಬದ್ಧವಾಗಿ ಏರಿಸಿಲ್ಲ. ಒಂದು ರೂಪಾಯಿಗೆ 1 1/2 ಸೇರು ಅಕ್ಕಿ, ಕಾಳ ಸಂತೆಯಲ್ಲಿ ಒಳ್ಳೆಯ ಅಕ್ಕಿಯನ್ನು 1 ರೂಪಾಯಿಗೆ 2 ಸೇರು ಮತ್ತು ದಪ್ಪ ಅಕ್ಕಿಯನ್ನು 2 1/2 ಸೇರು ಮಾರಲಾಗುತ್ತಿದೆ. ಈ ನಿಯಂತ್ರಣಗಳು ಒಂದು ಸಮಸ್ಯೆಯಾಗಿದೆ ಮತ್ತು ಯಾವಾಗಲೂ ದಾಸ್ತಾನನ್ನು ಕಡಿಮೆ ಮಾಡುವ ಸಾಧ್ಯತೆಗಳಿವೆ. ಅವು ಕಾಳ ಸಂತೆ ಸೃಷ್ಟಿಸುತ್ತವೆ. ನಿಯಂತ್ರಣಗಳು ಹೊಸ ನಿಯಂತ್ರಣಗಳನ್ನು ತರುತ್ತವೆ. ನಿಯಂತ್ರಣಗಳು ಕೊರತೆಯನ್ನು ಉಂಟುಮಾಡುತ್ತವೆ. ಅವು ಮುಕ್ತ ಮಾರುಕಟ್ಟೆಯನ್ನು ಹಾಳು ಮಾಡುತ್ತವೆ ಮತ್ತು ಮುಕ್ತ ಮಾರುಕಟ್ಟೆ ಇಲ್ಲದಿದ್ದರೆ ಕಾಳ ಸಂತೆಗೆ ಅವಕಾಶವಾಗುತ್ತದೆ. ಆದ್ದರಿಂದ ಈ ನಿಯಂತ್ರಣ ತೆಗೆದುಹಾಕಲು ಒಳ್ಳೆಯ ಸಮಯವೆಂದು ನಾನು ಭಾವಿಸುತ್ತೇನೆ. ಇದನ್ನು ಯಾವುದೇ ಹಿಂಜರಿಕೆಯಿಲ್ಲದೆ ಧೈರ್ಯವಾಗಿ ದಯವಿಟ್ಟು ಮಾಡಿ. ಇದು ಕೆಲವರಿಗೆ ಸ್ವಲ್ಪ ತೊಂದರೆ ಮಾಡಬಹುದು. ಅದನ್ನು ಪರಿಗಣಿಸಬೇಡಿ. ಆದರೆ, ಕೊನೆಯಲ್ಲಿ ನಿಯಂತ್ರಣದ ರದ್ದತಿ ಜನರಿಗೆ ಒಳ್ಳೆಯದನ್ನೇ ಮಾಡುತ್ತದೆ ಮತ್ತು ನೀವು ಸಾಕಷ್ಟು ಹಣವನ್ನು ಉಳಿತಾಯ ಮಾಡಬಹುದು. ನಾನು ಈ ಸಭೆಯ ಸಹನೆಯನ್ನು ಅತಿಕ್ರಮಿಸಲು ಇಚ್ಚಿಸುವುದಿಲ್ಲ. ನಾನು ಹಲವಾರು ಸಲಹೆಗಳನ್ನು ಹೊಂದಿದ್ದೇನೆ.

ಮಾನ್ಯ ಸಭಾಪತಿಗಳು - ಕೆಲವು ಮಂಡನೆಗಳು (**Cut Motion**) ಇವೆ.

ಜನಾಬ್ ಜೆ.ಮೊಹಮ್ಮದ್ ಇಮಾಂ - ನಾನು ಇನ್ನೊಂದು ಅಂಶ ಹೇಳಲು ಇಚ್ಚಿಸುತ್ತೇನೆ ಮತ್ತು ಅದು ಖರ್ಚು ಕಡಿಮೆ ಮಾಡುವುದರ ಬಗ್ಗೆಯಾಗಿದೆ. ಕೆಳಸ್ತರದಿಂದ ಮಿತವ್ಯಯವನ್ನು ಜಾರಿಗೆ ತರುವ ಬದಲಾಗಿ ಅದನ್ನು ಮೇಲ್‌ಸ್ತರದಿಂದ ಮಾಡಬೇಕು. ಮಂತ್ರಿಗಳು ಸ್ವತಃ ಉದಾಹರಣೆ ಆಗಬೇಕು.

ಶ್ರೀ ಕೆ. ಹನುಮಂತಯ್ಯ - (ಮುಖ್ಯ ಮಂತ್ರಿಗಳು) ನಾನು ಮಂತ್ರಿಗಳನ್ನು 10 ರಿಂದ 6ಕ್ಕೆ ಕಡಿಮೆ ಮಾಡುವುದರ ಮೂಲಕ ಅದನ್ನು ಈಗಾಗಲೇ ಮಾಡಿದ್ದೇನೆ.

ಜನಾಬ್ ಜೆ. ಮೊಹಮ್ಮದ್ ಇಮಾಂ - ಅಷ್ಟೇ ಅಲ್ಲ, ಅದರ ಸೆಕ್ರೆಟೇರಿಯಟ್ ಕೂಡ ಒಂದು ಉದಾಹರಣೆಯಾಗಬೇಕು. ನೀವು ಸ್ವಲ್ಪ ತ್ಯಾಗ ಮಾಡಬೇಕು. ಉಳಿದ ವಿಭಾಗವೂ ಇದನ್ನು ಪಾಲಿಸುತ್ತದೆಂದು ನಾನು ಭಾವಿಸುತ್ತೇನೆ. ಗೌರವಾನ್ವಿತ ಮುಖ್ಯ ಮಂತ್ರಿಗಳು ಅವರು ಮಂತ್ರಿಗಳ ಸಂಖ್ಯೆಯನ್ನು 10 ರಿಂದ 6 ಕ್ಕೆ ಇಳಿಸಲಾಗಿದೆಯೆಂದು ಹೇಳಿದ್ದಾರೆ. ಮೈಸೂರು ಸರ್ಕಾರ ಕೇಂದ್ರಕ್ಕೆ ವರ್ಗಾಯಿಸಲ್ಪಟ್ಟ ಎಲ್ಲಾ ವಿಭಾಗದ ಪ್ರೋತ್ಸಾಹವನ್ನು ಹೊಂದಿತ್ತು. ಯಾವುದೇ ತೊಂದರೆ ಇಲ್ಲದೆ ಒಬ್ಬ ದಿವಾನ್ ಮತ್ತು ನಾಲ್ಕು ಮಂತ್ರಿಗಳಿಂದ ಅವರು ಚೆನ್ನಾಗಿ ಎಲ್ಲವನ್ನೂ ಸಮರ್ಥವಾಗಿ ನಿರ್ವಹಿಸುತ್ತಿದ್ದರು.

ಶ್ರೀ ಕೆ. ಪುಟ್ಟಸ್ವಾಮಿ (ಶ್ರೀರಂಗಪಟ್ಟಣ) - ಒಬ್ಬ ದಿವಾನ 6000 ರೂಪಾಯಿ ಒಂದು ತಿಂಗಳಿಗೆ ಸಂಬಳವಿತ್ತು !

ಜನಾಬ್ ಜೆ. ಮೊಹಮ್ಮದ್ ಇಮಾಂ - ಸಂಬಳ ಹೆಚ್ಚಿನ ಮಹತ್ವದ ವಿಷಯವಲ್ಲ. ನನ್ನ ಕಾಲದಲ್ಲಿದ್ದಂತೆ, 1/2 ಭಾಗದಷ್ಟು ಇಲಾಖೆಗಳು ಹೋಗಿ, ಎಲ್ಲಾ 6 ಮಂತ್ರಿಗಳಿಗೆ ಸಾಕಷ್ಟು ಕೆಲಸಗಳಿಲ್ಲ. ಪ್ರಸ್ತುತದಲ್ಲಿರುವ ಕೆಲಸಕ್ಕೆ ಒಬ್ಬ ಮುಖ್ಯಮಂತ್ರಿ ಮತ್ತು 3 ಜನ ಮಂತ್ರಿಗಳು ಸಾಕಾಗಿದೆ. ನಾವು ಡೆಪ್ಯೂಟಿ ಮಂತ್ರಿಗಳು ನೇಮಕದ ಬಗ್ಗೆ ಶಾಂತಿ ಭಂಗ ಮಾಡುವ ವಿಚಾರಗಳನ್ನು ಕೇಳುತ್ತಿದ್ದೇವೆ ಮತ್ತು ಮಂತ್ರಿಗಳ ಸಂಖ್ಯೆಯನ್ನು 5 ರಿಂದ 9ಕ್ಕೆ ಹೆಚ್ಚಿಸಲಾಗುವುದೆಂದು ನಾನು ಕೇಳುತ್ತಿದ್ದೇನೆ. ಮುಖ್ಯಮಂತ್ರಿಗಳು ಡೆಪ್ಯೂಟಿ ಮಂತ್ರಿಗಳನ್ನು ನೇಮಕ ಮಾಡುತ್ತಿದ್ದಾರೆಯೆ ಎಂಬ ಪ್ರಶ್ನೆ ಕೇಳಿದ್ದಕ್ಕೆ, ಅವರು ಅದನ್ನು ಅಲ್ಲಗೆಳೆಯಲಿಲ್ಲ. ಮತ್ತೆ ಕೆಲವು ಮಂತ್ರಿಗಳನ್ನು ಇಬ್ಬರು ಅಥವಾ ಹೆಚ್ಚು ಜನರನ್ನು, ಸೇರಿಸಲಾಗುತ್ತದೆಂದು ನಾನು ಕೇಳುತ್ತಿದ್ದೇನೆ. ಇಬ್ಬರು ಅಥವಾ ಹೆಚ್ಚು ಮಂತ್ರಿಗಳನ್ನು ಸೇರಿಸಲಾಗುತ್ತದೆ. ಅವರಿಗೆ ಸಾಕಷ್ಟು ಕೆಲಸವಿದೆ ಎಂದಲ್ಲ, ಆದರೆ ಕೆಲವು ಜನರನ್ನು ಕಾಣಿಸಬೇಕಾಗಿದೆ. ನಾನು ತುಂಬಾ ಸತ್ಯ ಹೇಳುತ್ತಿದ್ದೇನೆ. ದಯವಿಟ್ಟು ಸಂತೈಸುವಿಕೆಯ ನೀತಿಯನ್ನು ತೆಗೆದುಹಾಕಿ, ಇದೇ ಕಾರಣಕ್ಕಾಗಿ ಹಿಂದಿನ ಮಂತ್ರಿ ಮಂಡಲ ಸ್ಥಾನಮಾನದಲ್ಲಿ ತೊಂದರೆ ಅನುಭವಿಸಿತು. ಅದೊಂದು ತಪ್ಪು ನೀತಿಯಾಗಿದೆ. ವೈಯಕ್ತಿಕವಾಗಿ ಉದಾಹರಣೆ ನೀಡಿ. ನಾವು ಕೆಳಸ್ತರದ ವಿಭಾಗಗಳಲ್ಲಿ ಜನರನ್ನು ಮಿತಗೊಳಿಸಿದರೆ ಮತ್ತು ಒಂದು ವೇಳೆ ನೀವು ಮಂತ್ರಿಗಳ ಸಂಖ್ಯೆ ಹೆಚ್ಚಿಸಿದರೆ ಮತ್ತು ಒಬ್ಬ ಡೆಪ್ಯೂಟಿ ಮಂತ್ರಿಗಳನ್ನು ನೇಮಿಸಿದರೆ ಮತ್ತು ನಿಮ್ಮ ಸಂಬಳವನ್ನು ಹಿಂದೆ ಇದ್ದುದಕ್ಕಿಂತ ಹೆಚ್ಚು ಮಟ್ಟಕ್ಕೆ ಹೆಚ್ಚಿಸಿದರೆ, ನೀವು ಆಗ ಒಂದು ಕೆಟ್ಟ ಉದಾಹರಣೆ ನೀಡುತ್ತಿದ್ದೀರಿ. ನೀವು ವೈಯಕ್ತಿಕ ಉದಾಹರಣೆಗಳನ್ನು ತ್ಯಾಗ ಮಾಡುವ ಮೂಲಕ ಮತ್ತು ಮಿತವ್ಯಯ ಸಾಧಿಸಿ ಮುಂದೆ ಇಡಿ ಎಂದು ನಾನು ಕೇಳುತ್ತಿದ್ದೇನೆ.

ಒಬ್ಬರು ಸದಸ್ಯರು - ಹಿಂದೆ ತಾವು ಎಷ್ಟು ತೆಗೆದುಕೊಳ್ಳುತ್ತಾ ಇದ್ದಿರಿ ?

ಜನಾಬ್ ಜೆ. ಮೊಹಮ್ಮದ್ ಇಮಾಂ - 2000 ರೂಪಾಯಿ ತೆಗೆದುಕೊಳ್ಳುತ್ತಾ ಇದ್ದೆ. ನನ್ನ ಮನೆ, ನನ್ನ ಕಾರು, ನನ್ನ ಡ್ರೈವರ್, ನನ್ನ ಇನ್ಕಂ ಟ್ಯಾಕ್ಸ್ ಇದಕ್ಕೆಲ್ಲಾ ನನ್ನ ಸ್ವಂತ ಹಣ ಹೋಗುತ್ತಾ ಇತ್ತು ಈಗಿನದು ಲೆಕ್ಕ ಹಾಕಿದರೆ 3000 ರೂಪಾಯಿ ಮೇಲೆ ಆಗುತ್ತದೆ. ನಾನು ತಕ್ಷಣದ ಪರಿಣಾಮಗಳನ್ನು ತಿಳಿದಿದ್ದೇನೆ. ಅನೇಕ ಜನರನ್ನು ಉದ್ಯೋಗದಿಂದ ತೆಗೆದುಹಾಕಲಾಗಿದೆ ಮತ್ತು ನಂತರದಲ್ಲಿ ನೀವು ಅದರ ಬಗ್ಗೆ ಯೋಚನೆ ಮಾಡಿ. ನಾನು 100 ಜನರನ್ನು ತೆಗೆದುಕೊಳ್ಳಬಲ್ಲೆ

ಮತ್ತು ನನ್ನ ಭೂಮಿಯಲ್ಲಿ ಅವರನ್ನು ನೇಮಕ ಮಾಡಬಲ್ಲೆ. ಆದರೆ ಅದು ಬೇರೆ ವಿಷಯ. ಹಣಕಾಸು ಪರಿಸ್ಥಿತಿ ಬಹಳ ನಿರಾಶಾದಾಯಕವಾಗಿದೆ ಮತ್ತು ನಮ್ಮ ಭವಿಷ್ಯ ಕರಾಳವಾಗಿದೆ. ನಮ್ಮ ಪ್ರಖ್ಯಾತಿ ತೊಂದರೆಯಲ್ಲಿದೆ. ತಕ್ಷಣ ನೀವು ಕಠಿಣ ಕ್ರಮ ಕೈಗೊಳ್ಳದಿದ್ದರೆ, ನಮ್ಮ ರಾಜ್ಯ ಹಣಕಾಸಿನ ತೊಂದರೆ ಅನುಭವಿಸುತ್ತದೆ ಮತ್ತು ಪ್ರತಿ ವಿಷಯದಲ್ಲೂ ತೊಂದರೆ ಅನುಭವಿಸುತ್ತದೆ. ನೀವು ಕೆಲವು ಲಕ್ಷಗಳನ್ನು ರಾಷ್ಟ್ರ ಕಟ್ಟುವ ವಿಭಾಗಗಳಲ್ಲಿ ಸೇರಿಸಿದ್ದೀರಿ. ವರ್ಷದಿಂದ ವರ್ಷಕ್ಕೆ ಅದನ್ನು ಸುಧಾರಿಸಲು ಬಲಿಷ್ಠ ಪರಿಸ್ಥಿತಿಯಲ್ಲಿ ನೀವು ಇರದಿದ್ದರೆ, ನಾವು ಏನೇ ವೆಚ್ಚ ಮಾಡಿದ್ದರೂ ಅದು ಅಪವ್ಯಯವಾಗುತ್ತದೆ. ಮಾನ್ಯರೇ, ನಾನು ಸಾಕಷ್ಟು ಕಾಲಾವಕಾಶ ತೆಗೆದುಕೊಂಡಿದ್ದೇನೆ.

ಮಾನ್ಯ ಸಭಾಪತಿ - ಕೇವಲ 50 ನಿಮಿಷಗಳು (ನಗು)

ಜನಾಬ್ ಜೆ. ಮೊಹಮ್ಮದ್ ಇಮಾಂ - ಅದು ನನಗೆ ಕೊಟ್ಟ ಸದಾವಕಾಶವಾಗಿದೆ. ನನಗೆ ಒಂದು ಗಂಟೆ ಕೊಡಲಾಗಿತ್ತು.

ಕೇವಲ ಒಂದೇ ಒಂದು ವಿಷಯ. ನಾನು ಮಂತ್ರಿಮಂಡಲಕ್ಕೆ ಪ್ರಜಾಪ್ರಭುತ್ವ ವಾದಿಯಾಗಿರಲು ಕೇಳಿಕೊಳ್ಳುತ್ತಿದ್ದೇನೆ. 3 ತಿಂಗಳಿಂದ ನೋಡುತ್ತಿದ್ದೇನೆ, ಈ ಸಭೆಯು ಯಾರನ್ನು ಕೇಳದೆ, ಅವರು ತಮ್ಮ ಕೆಲಸಗಳನ್ನು ಮಾಡುತ್ತಿದ್ದಾರೆ, ಕ್ರಮಗಳನ್ನು ಅಳವಡಿಸಿಕೊಳ್ಳುತ್ತಿದ್ದಾರೆ, ಆದೇಶ ಹೊರಡಿಸುತ್ತಿದ್ದಾರೆ. ಅವರು ತೋರಿದ ಮೊದಲ ಉದಾಹರಣೆ, ಅಧಿಕಾರವಹಿಸಿಕೊಂಡು 3 ಅಥವಾ 4 ದಿನಗಳಲ್ಲೇ ಸಾರ್ವಜನಿಕ ಅಭಿಪ್ರಾಯವನ್ನು ಕೇಳದೆ, ಈ ಸಭೆಯ ಸದಸ್ಯರನ್ನೂ ಕೇಳದೆ ಅಕ್ಕಿಯ ಮಾರಾಟದ ಬೆಲೆಯನ್ನು ಹೆಚ್ಚಿಸಿ ಸರ್ಕಾರಿ ಆದೇಶವನ್ನೂ ಹೊರಡಿಸಿದ್ದಾರೆ. ಅವರು ಒಂದು ವಿಶೇಷ ಅಧಿವೇಶನವನ್ನು ಕರೆಯಬಹುದಾಗಿತ್ತು. ಜನರ ಮೇಲೆ ಅದು ಯಾವ ಪರಿಣಾಮ ಬೀರುತ್ತದೆ ಎಂದು ಪರಿಗಣಿಸದೆಯೇ ಅವರು ಅದನ್ನು ಮಾಡಿದರು. ಸರಿ, ಇದಕ್ಕೆ ಒಂದು ವಿಶೇಷ ಅಧಿವೇಶನವನ್ನು ಕರೆಯುವುದನ್ನು ಬಿಟ್ಟು ಮುಖ್ಯಮಂತ್ರಿಗಳು ತಮ್ಮ ಪಕ್ಷದ ವಿಶೇಷ ಅಧಿವೇಶನವನ್ನು ಕರೆದರು. ಅಂತಹ ವಿಷಯಗಳನ್ನು ಪಕ್ಷದ ಮಟ್ಟದಲ್ಲಿ ಪರಿಹರಿಸಬಾರದೆಂದು ನಾನು ಭಾವಿಸುತ್ತೇನೆ. ಇಡೀ ರಾಜ್ಯದ ಮೇಲೆ ಪರಿಣಾಮ ಬೀರುವ ಅಂತಹ ವಿಷಯಗಳಲ್ಲಿ, ಅಂತಹ ಕ್ರಮಗಳಲ್ಲಿ, ಕೇವಲ ಪಕ್ಷವನ್ನು ಮಾತ್ರ ಸಂಪರ್ಕಿಸಬಾರದು. ಪಕ್ಷದ ಸಭೆಯನ್ನು ಕರೆಯುವ ಬದಲು, ಅವರು ಅಸಂಬ್ಲಿ ಅಧಿವೇಶನ ಕರೆಯಬಹುದಿತ್ತು.

ಶ್ರೀ ಎ. ಭೀಮಪ್ಪ ನಾಯ್ಕ - ಇನ್ನೂ ಪ್ರತಿಜ್ಞೆ ತೆಗೆದುಕೊಳ್ಳದೆ ಸಭೆ.

ಜನಾಬ್ ಜೆ. ಮೊಹಮ್ಮದ್ ಇಮಾಂ - ಅದು ಕಷ್ಟದ ಕೆಲಸ ಆಗಿರಲಿಲ್ಲ. ನಾವು ಟೌನ್ ಹಾಲ್‌ನಲ್ಲಿ ಸಭೆ ಸೇರಿ ಪ್ರತಿಜ್ಞೆ ತೆಗೆದುಕೊಳ್ಳಬಹುದಿತ್ತು.

ಶ್ರೀ ಹೆಚ್. ಸಿದ್ಧವೀರಪ್ಪ (ಗೃಹ ಮತ್ತು ಕೃಷಿ ಸಚಿವರು) - ನೀವು ಸಲಹೆ ಮಾಡಿದ ರೀತಿಯಲ್ಲಿ ಎಲ್ಲಾ ನಿರ್ಧಾರಗಳನ್ನು ತೆಗೆದುಕೊಳ್ಳಲಾಗಿದೆಯೆಂದು ಒಂದು ಉದಾಹರಣೆ ನೀವು ಕೊಡುವಿರಾ ?

ಜನಾಬ್ ಜೆ. ಮೊಹಮ್ಮದ್ ಇಮಾಂ - ನಾನು ಸಾಮಾನ್ಯ ಸಭೆಯಲ್ಲಿ ವೀಕ್ಷಿಸಿದ್ದೇನೆ. ನಾನು ಬೇಕಾದಷ್ಟು ಉದಾಹರಣೆ ಕೊಡಬಹುದು. ಸಭೆಯ ಅಧಿವೇಶನ ನಡೆಯುತ್ತಿರುವಾಗ, ಯಾವುದೇ ಮುಖ್ಯ ನಿರ್ಧಾರ ಕೈಗೊಂಡರೆ, ಅದನ್ನು ಪಾರ್ಲಿಮೆಂಟಿಗೆ ಒಂದು ಹೇಳಿಕೆಯ ರೂಪದಲ್ಲಿ ಕೊಡಲಾಗುತ್ತದೆ; ಮಾರನೇ ದಿನವೇ ಅದನ್ನು ಪಾರ್ಲಿಮೇಂಟಿನ ಮುಂದೆ ತರಲಾಗುತ್ತದೆ. ಈಗ ಇಲ್ಲಿ ಮಾಡಿದ ಕೆಲಸವನ್ನು ಇಂಗ್ಲೆಂಡಿನಲ್ಲಿ ಮಾಡಿದ್ದರೆ, ಮಂತ್ರಿಮಂಡಲವನ್ನೇ ವಜಾ ಮಾಡಲಾಗುತ್ತಿತ್ತು.

ಎರಡನೆಯದಾಗಿ, ಉದಾಹರಣೆಗೆ, ಒಂದು ವೇಳೆ ಮಂತ್ರಿಮಂಡಲ ಘೋಷಿಸಿದರೆ ..............

ಮಾನ್ಯ ಸಭಾಪತಿಗಳು - ಮಾನ್ಯ ಸದಸ್ಯರು ಸಾಕಷ್ಟು ಕಾಲಾವಕಾಶ ಈಗಾಗಲೇ ತೆಗೆದುಕೊಂಡಿದ್ದಾರೆ.

ಜನಾಬ್ ಜೆ. ಮೊಹಮ್ಮದ್ ಇಮಾಂ - ಕೇವಲ ಐದು ನಿಮಿಷ ಮಾತ್ರ, ಮಾನ್ಯರೇ ಸ್ವಲ್ಪ ಕಾಲದ ಹಿಂದೆ, ಆಹಾರ ಮಂತ್ರಿಗಳು ಭೂ ಕಂದಾಯ ವಸೂಲಿಗೆ ಸಂಬಂಧಿಸಿದಂತೆ ಮಾತನಾಡುತ್ತಾ, ಅದನ್ನು ಹಣರೂಪದಲ್ಲಿ ಮಾಡದೆ ವಸ್ತು ರೂಪದಲ್ಲಿ ಅವರು ಸಂಗ್ರಹಿಸುವುದಾಗಿ ಹೇಳಿದರು. ಇವೆಲ್ಲವೂ ಮುಖ್ಯವಾದ ನೀತಿಗಳು ಮತ್ತು ಕ್ರಮಗಳು ಅವುಗಳ ಬಗ್ಗೆ ಸಭೆಯನ್ನು ಕೇಳಬೇಕು. ಇದಕ್ಕೆ ಬದಲಾಗಿ, ಮುಖ್ಯಮಂತ್ರಿಗಳು ಅವರು ಹಳೇ ಕಾಲದಲ್ಲಿರುವಂತೆ ಇಂತಹ ಸೂಚನೆಗಳನ್ನು ಮಾಡುತ್ತಿದ್ದಾರೆ. ಅವರು ಪ್ರಜಾಪ್ರಭುತ್ವಕ್ಕೆ ವಿರುದ್ಧವಾಗಿದ್ದಾರೆಂದು ನಾನು ಭಾವಿಸುತ್ತೇನೆ. ಇನ್ನು ಮುಂದೆ ಅವರು ಯಾವುದೇ ನಿರ್ಧಾರಗಳನ್ನು ಕೈಗೊಂಡರೆ ಅಥವಾ ಅಂತಹ ವಿಷಯಗಳ ಬಗ್ಗೆ ಸರ್ಕಾರಿ ಆದೇಶ ಹೊರಡಿಸಿದರೆ ಅವರು ಈ ಸಭೆಯ ಸದಸ್ಯರನ್ನು ಕೇಳಬೇಕು ಮತ್ತು ಅವರ ಅಭಿಪ್ರಾಯ ಪಡೆಯಬೇಕೆಂದು ನಾನು ಅವರನ್ನು ಕೇಳಿಕೊಳ್ಳುತ್ತೇನೆ.

ಮಾನ್ಯರೇ, ಇತ್ತೀಚಿಗೆ ಒಂದು ಸಂಗತಿ ಜರುಗಿತು. ಈ ಸಭೆಯ ಒಬ್ಬ ಮಾನ್ಯ ಸದಸ್ಯರು ಈ ಸಭೆಯ ಸದಸ್ಯರನ್ನು ಕೇಳದೆಯೇ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಅದೇ ದಿನ ಮುಖ್ಯಮಂತ್ರಿಗಳು ಆದೇಶ ಹೊರಡಿಸಿದರು ಮತ್ತು ಕಾಯೋ ಶ್ರೀ ಗೌರಿ ಹಾಡುವುದನ್ನು ಮತ್ತು ರಾಜ್ಯದ ಬಾವುಟ ಹಾರಿಸುವುದನ್ನು ರದ್ದುಗೊಳಿಸಿದರು. ಸಭೆಯ ಅಧಿವೇಶನ ನಡೆಯುತ್ತಿದ್ದರೂ, ಅವರು ಅದರ ಅಸ್ತಿತ್ವವನ್ನು ನಿರ್ಲಕ್ಷಿಸಿದರು. ಅದು ನ್ಯಾಯ ಸಮ್ಮತವೋ ಅಥವಾ ನ್ಯಾಯ ಬಾಹಿರವೋ ನನಗೆ ಗೊತ್ತಿಲ್ಲ; ಆದರೆ ಸಂಪ್ರದಾಯಕ್ಕೆ ವಿರುದ್ಧವಾಗಿ ಮತ್ತು ನಿರಂಕುಶ ರೀತಿಯಲ್ಲಿ ಅವರು ಸರ್ಕಾರಿ ಆದೇಶವನ್ನು ಹೊರಡಿಸಿದರು. ಇದು ಪ್ರಜಾಪ್ರಭುತ್ವದ ಪದ್ಧತಿಗೆ ಬದ್ಧವಾಗಿಲ್ಲ. ಆಡಳಿತವನ್ನು ಕೇವಲ ಮಂತ್ರಿಗಳೇ ನಡೆಸುವುದಿಲ್ಲ, ಆದರೆ ಮಂತ್ರಿಮಂಡಲದಿಂದ ಮತ್ತು ಸಭೆಯ ಸದಸ್ಯರಿಂದ ನಡೆಸಲಾಗುತ್ತದೆ. ಇದು ಒಂದು ಜಂಟಿ ಜವಾಬ್ದಾರಿಯಾಗಿದೆ. ನಮ್ಮಷ್ಟೇ ನೀವು ಕೂಡ ಆಡಳಿತಕ್ಕೆ ಹೊಣೆಗಾರರಾಗಿದ್ದೀರಿ. ರಾಜ್ಯಕ್ಕೆ ಏನೇ ಕೆಟ್ಟದ್ದು ಸಂಭವಿಸಿದರೂ, ರಾಜ್ಯಕ್ಕೆ ಯಾವುದೇ ಕೆಟ್ಟ ಹೆಸರು ಬಂದರೂ, ನಾವೂ ಕೂಡ ಹೊಣೆಗಾರರಾಗುತ್ತೇವೆ ಮತ್ತು ಆದ್ದರಿಂದ ಎಲ್ಲಾ ಪ್ರಮುಖ ವಿಷಯಗಳಲ್ಲಿ ನಮ್ಮ ಅಭಿಮತ ಕೇಳುವುದು ನಿಮ್ಮ ಕರ್ತವ್ಯವಾಗಿದೆ.

ಮಾನ್ಯರೇ, ನಾನು ನಿಮಗೆ ಧನ್ಯವಾದ ತಿಳಿಸುತ್ತೇನೆ ಮತ್ತು ಈ ಸಭೆಯ ಸದಸ್ಯರಿಗೆ ಅವರ ತಾಳ್ಮೆಗೆ ಧನ್ಯವಾದಗಳನ್ನು ಹೇಳುತ್ತೇನೆ. ನಾನು ಯಾರ ಮನಸ್ಸು ನೋಯಿಸಬೇಕೆಂದು ಏನನ್ನೂ ಹೇಳಿಲ್ಲ. ನಾನು ಏನೇ ಹೇಳಿದ್ದರೂ ಅದನ್ನು ಒಬ್ಬ ಕ್ರೀಡಾಪಟುವಿನಂತೆ ಹೇಳಿದ್ದೇನೆ ಮತ್ತು ನನಗೆ ಏನು ಹೇಳಬೇಕೆಂದು ಅನ್ನಿಸಿತೋ ಅದನ್ನು ಹೇಳಿದ್ದೇನೆ. ಅದು ಸರಿಯೋ ಅಥವಾ ತಪ್ಪೋ ಎಂಬುದನ್ನು ನೀವೇ ತೀರ್ಮಾನಿಸಬೇಕು.

(ಸಂಗ್ರಹ: ವಿಧಾನ ಸಭೆ ನಡವಳಿಕೆ ದಿನಾಂಕ 27ನೇ ಜೂನ್ 1952)

## ಸ್ಪೀಕರ್ ಚುನಾವಣೆ ಬಗ್ಗೆ ಚರ್ಚೆ:

ಶ್ರೀ ಸ್ಪೀಕರ್: ಚುನಾವಣೆ ನಡೆಸುವುದಕ್ಕೆ ಯಾವುದೇ ಅಭ್ಯಂತರವಿಲ್ಲ ಹಾಗಾಗಿ ಚುನಾವಣೆ ನಡೆಸಬಹುದೆಂದು ನಾನು ಭಾವಿಸುತ್ತೇನೆ.

ಗೌರವಾನ್ವಿತ ಸದಸ್ಯರು: ಹೌದು

ಜನಾಬ್ ಜೆ. ಮಹಮದ್ ಇಮಾಂ: ನಾನು ಪ್ರತಿಯೊಬ್ಬ ಸ್ಪೀಕರ್‌ರವರ ಆತ್ಮಸ್ಥೈರ್ಯದ ತತ್ವದ ಬಗ್ಗೆ ಮಾತನಾಡುತ್ತಿದ್ದೇನೆ. ಸ್ಪೀಕರ್‌ರವರನ್ನು ಬಹುಮತ ಪಡೆದ ಪಕ್ಷ ಆಯ್ಕೆ ಮಾಡಿದರೆ ಸದನದ ಇತರ ಸದಸ್ಯರಿಗೆ ಸಭಾಧ್ಯಕ್ಷರ ನಿಷ್ಪಕ್ಷಪಾತತೆ ಬಗ್ಗೆ ಸಂಶಯ ಉದ್ಭವವಾಗುತ್ತದೆ. ಆದ್ದರಿಂದ ಸ್ಪೀಕರ್ ಸ್ಥಾನ ಪಕ್ಷದ ಆಧಾರದ ಮೇಲೆ ಆಯ್ಕೆ ಮಾಡದೆ ನಿಷ್ಪಕ್ಷಪಾತವಾಗಿರುವುದು ಅಗತ್ಯವಾಗಿದೆ.

ಶ್ರೀ ಆರ್. ಚೆನ್ನಿಗರಾಮಯ್ಯ: ಅದು ನಮ್ಮ ಮುಂದಿರುವ ವಿಷಯವಲ್ಲ, ನಮ್ಮ ಮುಂದಿರುವುದು ಸ್ಪೀಕರ್ ಆಯ್ಕೆಯ ಬಗ್ಗೆ ವಿಶೇಷ ಸಮಿತಿಯ ವರದಿಯ ಪ್ರಸ್ತಾಪ.

ಶ್ರೀ ಜೆ. ಮಹಮದ್ ಇಮಾಂ: ನನ್ನ ವಿಚಾರವು ಅದೇ, ಏನೆಂದರೆ ಈ ಪ್ರಸ್ತುತ ಪದ್ಧತಿಯನ್ನು ಪರಿಗಣನೆಗೆ ತೆಗೆದುಕೊಳ್ಳಬಾರದೆಂದು.

ಶ್ರೀ ಸ್ಪೀಕರ್: ಅವರ ಹೇಳಿಕೆಯೆಂದರೆ, ಸ್ಪೀಕರ್‌ರವರ ಚುನಾವಣೆ ಮತಪತ್ರದ ಮೂಲಕವಾಗಲಿ ಆದರೆ ಸದನವನ್ನು ಇಬ್ಭಾಗವಾಗಿ ಅಲ್ಲ ಎಂದು.

ಶ್ರೀ ಜೆ. ಮಹಮದ್ ಇಮಾಂ: ಬ್ರಿಟಿಷ್ ಸಂಸತ್ತಿನ ಸಾಮಾನ್ಯ ಸಭೆಯ ಸ್ಪೀಕರ್ ನಿಷ್ಪಕ್ಷಪಾತ ವ್ಯಕ್ತಿ ಆದರೆ ನಮ್ಮ ಸ್ಪೀಕರ್ ನಿಷ್ಪಕ್ಷಪಾತ ವ್ಯಕ್ತಿಯಲ್ಲ. ಇವರು ಪಕ್ಷದ ಸದಸ್ಯರು, ಚುನಾವಣೆ ನಂತರವೂ ಅವರು ಕಾಂಗ್ರೆಸ್ ಪಕ್ಷದ ಸದಸ್ಯರಾಗೆ ಮುಂದುವರೆಯುತ್ತಾರೆ ಮತ್ತು ಪಕ್ಷದ ಎಲ್ಲಾ ಕ್ರಿಯೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ.

ಶ್ರೀ ಸ್ಪೀಕರ್: ದೆಹಲಿಯಲ್ಲಿ ಯಾವ ಪದ್ಧತಿ ಅಸ್ತಿತ್ವದಲ್ಲಿದೆ.

ಶ್ರೀ ಜೆ. ಮಹಮದ್ ಇಮಾಂ: ಆ ಪದ್ಧತಿಯನ್ನೂ ಬದಲಾಯಿಸಲೇ ಬೇಕು.

ಎರಡನೆಯದಾಗಿ, ಸರ್, ಅಲ್ಲಿ ಇನ್ನೊಂದು ಅಪಾಯವಿದೆ. ಚುನಾವಣೆ ಸಂದರ್ಭದಲ್ಲಿ ಪರಸ್ಪರ ವಿರುದ್ಧವಾದ ಪಕ್ಷಗಳು ತಮ್ಮ ಅಭ್ಯರ್ಥಿಗಳನ್ನು ನಿಲ್ಲಿಸುವುದರಿಂದ, ಇಬ್ಬರೂ ಅಭ್ಯರ್ಥಿಗಳು ಚರ್ಚೆಯ ವಿಷಯವಾಗುತ್ತಾರೆ. ಕಾಂಗ್ರೆಸ್ ಪಕ್ಷನಿಲ್ಲಿಸಿದ ಅಭ್ಯರ್ಥಿಯ ಪರವಾಗಿ ಮತ್ತು ಆ ಅಭ್ಯರ್ಥಿ ಸಾಧನೆಗಳ ಬಗ್ಗೆ ಪ್ರಸ್ತಾಪಿಸುತ್ತದೆ. ಆದರೆ ವಿರೋಧ ಪಕ್ಷದವರು ಅವರನ್ನು ವಿರೋಧಿಸುತ್ತಾರೆ, ಟೀಕಿಸುತ್ತಾರೆ ಮತ್ತು ಹಾಗೂ ಹಿಂದಕ್ಕೆ ಎಳೆಯಲು ಪ್ರಯತ್ನಿಸುತ್ತಾರೆ.

ಶ್ರೀ ಎ. ಭೀಮಪ್ಪ ನಾಯ್ಕ: ಟೀಕಿಸುವುದು ಮತ್ತು ಪರ ಹಾಗೂ ವಿರುದ್ಧವಾಗಿ ಮಾತನಾಡುವುದು ಅಭ್ಯರ್ಥಿಯನ್ನು ಸೂಚಿಸಿದಾಗ, ಅಲ್ಲಿ ಎಲ್ಲಿ ಅದಕ್ಕೆ ಅವಕಾಶವಿದೆ ?

ಶ್ರೀ ಜೆ. ಮಹಮದ್ ಇಮಾಂ: ಅದು ಇದೇ

ಶ್ರೀ ಸ್ಪೀಕರ್: ಅಧಿವೇಶನವಿದ್ದಾಗ, ಅವರು ಅಭ್ಯರ್ಥಿಯ ಬಗ್ಗೆ ಮಾತನಾಡಬಹುದು.

ಶ್ರೀ ಜೆ. ಮಹಮದ್ ಇಮಾಂ: ಅಭ್ಯರ್ಥಿ ಚುನಾವಣೆ ಎಂದಾಗ ಅದು ಪ್ರತಿಯೊಬ್ಬ ಸದಸ್ಯರ ಚರ್ಚೆಯ ವಿಷಯವಾಗುತ್ತದೆ ಆಗ ಪರ ಮತ್ತು ವಿರುದ್ಧವಾಗಿ ಮಾತನಾಡಬಹುದು ಇದು ಒಂದು ಅಪಾಯದ ಪದ್ಧತಿ, ಇದರಿಂದ ಹಲವಾರು ಅನಾಹುತಗಳಿಗೆ ದಾರಿಯಾಗುತ್ತದೆ. ಸರ್, ನಮ್ಮ ರಾಷ್ಟ್ರದಲ್ಲಿ ಇನ್ನೂ ಚುನಾವಣೆಗಳನ್ನು ಸ್ವಂತಿಕೆಯಿಂದ ನೋಡುವ ದೃಷ್ಟಿ ಬಂದಿಲ್ಲ. ಚುನಾವಣೆಗಳು ಹಲವಾರು ಗುಂಪಿಗಳನ್ನು, ತೊಂದರೆಗಳನ್ನು ತಂದೊಡ್ಡುತ್ತದೆ. ಆದ್ದರಿಂದ ಒಬ್ಬರು ಗೌರವಾನ್ವಿತ ಸದಸ್ಯರು ಚುನಾವಣೆಗೆ ಈ ಸದನದ ಮುಂದೆ ನಿಂತರೆ ಆ ಎರಡೂ ಅಭ್ಯರ್ಥಿಗಳ ಪಕ್ಷಗಳು ತಮ್ಮ ತಮ್ಮ ಅಭ್ಯರ್ಥಿಯನ್ನು ಗೆಲ್ಲಿಸಲು ಪ್ರಯತ್ನಿಸುವುದರಿಂದ, ಈ ಅಭ್ಯರ್ಥಿಗಳ ರಕ್ಷಣೆಗೆ ತೊಂದರೆಯಾಗುತ್ತದೆ. ಆದ್ದರಿಂದ ಇಂಗ್ಲೆಂಡ್‌ನಲ್ಲಿ ಇರತಕ್ಕಂತ ಅವಿರೋಧ ಆಯ್ಕೆ ಪದ್ಧತಿ ಸೂಕ್ತ.

(ಸಂಗ್ರಹ: ವಿಧಾನ ಸಭೆ ನಡವಳಿಕೆ ದಿನಾಂಕ ಅಕ್ಟೋಬರ್ 20, 1952)

# ಮಲೆನಾಡಿಗೆ ವಿಶೇಷ ಪ್ರಾಶಸ್ತ್ಯದ ಬಗ್ಗೆ ಚರ್ಚೆ

ಜನಾಬ್ ಜೆ. ಮಹಮ್ಮದ್ ಇಮಾಂ - ನನ್ನ ಸ್ನೇಹಿತರು ಈಗ ಹೇಳಿದ ವಿಷಯವನ್ನು ಸದನದ ಸೂಕ್ಷ್ಮ ಪರಿಶೀಲನೆಗೆ ತರಲು ಬಯಸುತ್ತೇನೆ. ಈಗ ತಾನೆ ಶ್ರೀಮತಿ ಸುಬ್ಬಮ್ಮನವರು ಮಲೆನಾಡಿನ ಪರವಾಗಿ ದಿಟ್ಟ ನಿಲುವುಗಳನ್ನು ವ್ಯಕ್ತಪಡಿಸಿದರು. ಅವರು ಹೇಳಿದರು ಮಲೆನಾಡು ರೋಗಗ್ರಸ್ತ ಪ್ರದೇಶವಾಗಿರುವುದಿರಂದ ವಿಶೇಷ ಆಸಕ್ತಿಯನ್ನು ತೋರಿಸಬೇಕೆಂದು. ಮಾನ್ಯ ಮಂತ್ರಿಗಳು ಆ ವಿಚಾರಕ್ಕೆ ಮಾನ್ಯತೆ ಕೊಟ್ಟಿರಬಹುದು. ಆದರೆ ನಾನು ಅದಕ್ಕೆ ವಿರುದ್ಧ, ಸರ್ಕಾರಕ್ಕೆ ಎರಡು ಮಕ್ಕಳಿದ್ದಾರೆ ಒಂದು ಮಲೆನಾಡು ಮತ್ತೊಂದು ಬೆಂಗಾಡು. ಆದರೆ ಮಲೆನಾಡಿನಿಂದ ಬಂದ ಸದಸ್ಯರು ಮಲೆನಾಡಿನ ಪರವಾಗಿರುವ ಘರ್ಜನೆ ಅಥವಾ ಕೂಗು ನನಗೆ ಅರ್ಥವಾಗಿರುವುದಿಲ್ಲ. ನಾನು ಮಲೆನಾಡಿಗೆ ವಿಶೇಷ ಸ್ಥಾನಮಾನ ಕೊಡುವುದಕ್ಕೆ ವಿರೋಧಿಸುತ್ತಿಲ್ಲ. ಆದರೆ ಅದು ಬೆಂಗಾಡನ್ನು ಕಡೆಗಣಿಸಿ ಮಲೆನಾಡಿಗೆ ಪ್ರಾಶಸ್ತ್ಯವನ್ನು ಕೊಡುವಂತದ್ದಾಗಬಾರದು. ಏಕೆಂದರೆ ಮಲೆನಾಡಿನಲ್ಲಿ ಎಲ್ಲಾ ನೈಸರ್ಗಿಕ ಸಂಪನ್ಮೂಲಗಳಿರುವುದರಿಂದ ಇತರ ಎಲ್ಲಾ ಜಿಲ್ಲೆಗಳಿಗಿಂತ ಶ್ರೀಮಂತವಾಗಿದೆ. ಎಲ್ಲಾ ಮುಖ್ಯ ಕೈಗಾರಿಕೆಗಳನ್ನು ಸ್ಥಾಪಿಸಲಾಗಿದೆ ಹಾಗೂ ಎಲ್ಲಾ ವಾಣಿಜ್ಯ ಬೆಳೆಗಳು ಮಲೆನಾಡಿನಲ್ಲಿ ಬೆಳೆಯಲಾಗುತ್ತಿದೆ.

ಶ್ರೀ ಕೆ. ಹನುಮಂತಯ್ಯ - ಎಲ್ಲಾ ಪ್ರಖ್ಯಾತ ವ್ಯಕ್ತಿಗಳು ಬಂದಿರುವುದು ಮಲೆನಾಡಿನಿಂದಲೆ. (ನಗು)

ಜನಾಬ್ ಜೆ. ಮಹಮ್ಮದ್ ಇಮಾಂ - ಹೌದು, ಎಲ್ಲಾ ಪ್ರಖ್ಯಾತ ವ್ಯಕ್ತಿಗಳು ಬಂದಿರುವುದು ಮಲೆನಾಡಿನಿಂದಲೇ. ಸರ್ಕಾರ ಸಾಕಷ್ಟು ಹಣವನ್ನು ಮಲೆನಾಡಿಗಾಗಿ ಬಳಸಿದೆ. ಕಾಫಿ, ಏಲಕ್ಕಿ, ಅಡಿಕೆ, ಸೌದೆ, ಟಿಂಬರ್ ಮತ್ತೆ ಏನೇನೋ ? ನನಗೆ ಗೊತ್ತಿಲ್ಲ.

ಶ್ರೀ ಕಡಿದಾಳ್ ಮಂಜಪ್ಪ - (ಕಂದಾಯ ಮತ್ತು ಲೋಕೋಪಯೋಗಿ ಸಚಿವರು): ನಿಮ್ಮ ಈ ಎಲ್ಲಾ ಅಗತ್ಯಗಳನ್ನು ನಾವು ಪೂರೈಸುತ್ತಿದ್ದೇವೆ.

ಜನಾಬ್ ಜೆ. ಮಹಮ್ಮದ್ ಇಮಾಂ - ನಮಗೆ ಸಹಾಯ ಮಾಡುವುದು ನಿಮ್ಮ ಕರ್ತವ್ಯ. ಬೆಂಗಾಡಿನ ಕಡೆ ನೋಡಿ ಅವರು ಸಂಪೂರ್ಣವಾಗಿ ಪ್ರಕೃತಿಯನ್ನು ಅವಲಂಭಿಸಿದ್ದಾರೆ. ಮಳೆ ಬಂದರೆ ಬೆಳೆ ಬೆಳೆಯುತ್ತಾರೆ.

ಶ್ರೀ ಹೆಚ್.ಎಸ್.ರುದ್ರಪ್ಪ (ಹೊನ್ನಾಳಿ) - ಮಳೆಯಿಲ್ಲದೆ ನಾವೂ ಯಾವುದೇ ಬೆಳೆ ಬೆಳೆಯಲು ಸಾಧ್ಯವಿಲ್ಲ.

ಜನಾಬ್ ಜೆ. ಮಹಮ್ಮದ್ ಇಮಾಂ - ಮಲೆನಾಡಿನಲ್ಲಿ ಯಥೇಚ್ಛವಾದ ಮಳೆಯಾಗುತ್ತದೆ. ಆದರೆ ಬೆಂಗಾಡಿನಲ್ಲಿ, ನಾವು ಅಸಹಾಯಕರು, ಈ ವರ್ಷ ಸಂಪೂರ್ಣ ಮೈದಾನ ಪ್ರದೇಶಗಳಲ್ಲಿ ಮಳೆಯಾಗದೆ ಬರಗಾಲದ ಸ್ಥಿತಿಯನ್ನು ಎದುರಿಸುತ್ತಿದ್ದಾರೆ. ನಾನು ಹೇಳಿದ ಹಾಗೆ, ನಾನು ಮಲೆನಾಡಿಗೆ ಕೊಡುವ ವಿಶೇಷ ಸವಲತ್ತುಗಳಿಗೆ ವಿರೋಧವಾಗಿಲ್ಲ. ಆರೋಗ್ಯದ ದೃಷ್ಟಿಯಿಂದ ಅದು ಹಿಂದುಳಿದಿತ್ತು ಆದರೂ ಅದು ಅದರಿಂದ ಹೊರಗೆ ಬಂದಿದೆ.

ಶ್ರೀ ಕಡಿದಾಳ್ ಮಂಜಪ್ಪ - ಯಾವ ಕಾರಣಕ್ಕಾಗಿ ಬೆಂಗಾಡಿನಿಂದ ಜನರು ಮಲೆನಾಡಿಗೆ ಹೋಗುವುದಿಲ್ಲ.

ಜನಾಬ್ ಜೆ. ಮಹಮ್ಮದ್ ಇಮಾಂ - ಸರಿ, ನೋಡಿ ನಮ್ಮನ್ನು, ಮೈದಾನ ಪ್ರದೇಶದಲ್ಲಿರುವ ನಾವು ಸದಾ ಹಸಿವಿನಿಂದ ಮತ್ತು ಬರಗಾಲದಿಂದ ನರಳುತ್ತಿದ್ದೇವೆ. ಅದರಲ್ಲೂ ವಿಶೇಷವಾಗಿ ಈ ವರ್ಷ ಸ್ಥಿತಿ ಬಾರಿ ಚಿಂತಾಜನಕವಾಗಿದೆ. ಆದ್ದರಿಂದ ಸರ್ಕಾರ ವಿಶೇಷ ಸವಲತ್ತುಗಳೊಂದಿಗೆ ಅವರ ಸಹಾಯಕ್ಕೆ ಬರಬೇಕು.

# ಮೈಸೂರು ರೆವಿನ್ಯೂ ಬೋರ್ಡಿನ ಮಸೂದೆ, 1954

ಮಾನ್ಯ ಸಭಾಪತಿ - ಮೈಸೂರು ರೆವಿನ್ಯೂ ಬೋರ್ಡಿನ ಮಸೂದೆ ಮುಂದುವರೆಯುತ್ತದೆ.

ಶ್ರೀ ಜೆ. ಮಹಮ್ಮದ್ ಇಮಾಂ (ಜಗಳೂರು) - ಮಾನ್ಯರೇ, ರೆವಿನ್ಯೂ ಬೋರ್ಡಿನ ಮಸೂದೆಯ ಬಗ್ಗೆ ನಾನು ಕೆಲವು ಅನಿಸಿಕೆಗಳನ್ನು ನೀಡಲು ಬಯಸುತ್ತೇನೆ. ರೆವಿನ್ಯೂ ಮಂತ್ರಿಗಳನ್ನು ಚೆನ್ನಾಗಿ ಬಲ್ಲವರು ಅವರ ಬಗ್ಗೆ, ಅಕಾಲಿಕ, ಅನಾವಶ್ಯಕ, ಶಾಸನದ ತುಣುಕುಗಳನ್ನು ಪರಿಚಯಿಸುವುದರ ಮೂಲಕ ಉಂಟುಮಾಡುವ ತೊಂದರೆಗಾಗಿ ಅನುಕಂಪ ತೋರುತ್ತಾರೆ.

ಶ್ರೀ ಕಡಿದಾಳ್ ಮಂಜಪ್ಪ (ಸಾರ್ವಜನಿಕ ಕಾಮಗಾರಿ ಹಾಗೂ ರೆವಿನ್ಯೂ ಮಂತ್ರಿ) - ಮಾನ್ಯರೇ, ನಾನು ಮಾನ್ಯ ಮಂತ್ರಿಗಳನ್ನು ಅರ್ಥಮಾಡಿಕೊಳ್ಳಲಾರೆ. (ನಗು)

ಶ್ರೀ ಜೆ. ಮಹಮ್ಮದ್ ಇಮಾಂ - ಪ್ರಜಾಪ್ರಭುತ್ವ ಪದ್ಧತಿಯ ಶೋಧನೆಗೆ ನಂತರ, ಪ್ರತಿಯೊಂದು ಅಧಿವೇಶನದಲ್ಲೂ ವಕೀಲರನ್ನು ಸಂದೇಹಕ್ಕೆ ತಳ್ಳುವ ಮತ್ತು ಕಾನೂನು ಪುಸ್ತಕಗಳನ್ನು ಭಾರವಾಗಿಸುವ ಶಾಸನದ ಹಲವಾರು ಕ್ರಮಗಳನ್ನು ಈ ಸಭೆಯ ಮುಂದೆ ತರುವುದು ಶೋಭಾಚಾರವಲ್ಲದಿದ್ದರೂ ಒಂದು ಆಚಾರವಾಗಿದೆ. ಇಂದಿನ ಶಾಸನದ ಕ್ರಮಗಳನ್ನು ಹಿಂದಿನ ಕ್ರಮಗಳಿಗೆ ಹೋಲಿಸಿದರೆ - ನಾನು ಕೂಡ ಆಡಳಿತದೊಂದಿಗೆ ಸಂಬಂಧ ಹೊಂದಿದ್ದೆ ಎಂದು ಹೇಳಬೇಕು - ಒಂದು ವೇಳೆ ನೀವು ಶಾಸನದ ಕ್ರಮಗಳನ್ನು ಹೋಲಿಸಿದರೆ ....

ಶ್ರೀ ಕಡಿದಾಳ್ ಮಂಜಪ್ಪ - ನಾನು ಕೂಡ ಆಗ ಸದಸ್ಯನಾಗಿದ್ದೆ.

ಶ್ರೀ ಜೆ. ಮಹಮ್ಮದ್ ಇಮಾಂ - ಒಂದು ವೇಳೆ ಇಂದು ಜಾರಿಗೊಳಿಸಲ್ಪಟ್ಟ ಹಲವು ಶಾಸನದ ಕ್ರಮಗಳನ್ನು ಹಿಂದಿನ ಕ್ರಮಗಳಿಗೆ ಹೋಲಿಸಿದರೆ, ಸಂಖ್ಯೆ ಬಹಳಷ್ಟು ಹೆಚ್ಚಾಗಿರುವುದನ್ನು ನೀವೇ ಕಾಣಬಹುದಾಗಿದೆ. (ಒಂದು ಧ್ವನಿ: ಅಭಿವೃದ್ಧಿ) ಅಭಿವೃದ್ಧಿ? ಹೌದು, ಅಭಿವೃದ್ಧಿ; ನನಗೆ ಗೊತ್ತು ನಾವು ಎಷ್ಟರ ಮಟ್ಟಿಗೆ ಅಭಿವೃದ್ಧಿ ಹೊಂದಿದ್ದೇವೆ ಎಂದು. ಈ ಕ್ರಮಗಳು ಅವಶ್ಯಕ ಮತ್ತು ಅನಿವಾರ್ಯವಾಗಿದೆಯೇ ? ಅನುಭವದಿಂದ ನಾನು ಬಲ್ಲೆ, ಹಾಗೆಯೇ ನನ್ನ ಸಹೋದ್ಯೋಗಿ ಮಿತ್ರರಲ್ಲಿ ಹಲವರು ಇದುವರೆಗಿನ ಅನೇಕ ಶಾಸನದ ಕ್ರಮಗಳು ಅಸಮರ್ಥವಾಗಿದ್ದು ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲವೆಂಬುದನ್ನು ವಾದಿಸುತ್ತಾರೆ. ಈಗ ನನ್ನ ಸ್ನೇಹಿತರಾದ ಶ್ರೀ ಟಿ. ಮರಿಯಪ್ಪ ಪ್ರತಿಪಾದಿಸಿದ ಒಂದು ನಿರ್ದಿಷ್ಟ ಶಾಸನದ ಕ್ರಮಗಳನ್ನು ನೆನಪಿಸಿಕೊಳ್ಳಬಹುದು. ಅವರು ಈ ಸಭೆಯ ಎದುರು ಎತ್ತುಗಳನ್ನು ನಿರ್ವೀರ್ಯಗೊಳಿಸುವ ಒಂದು ಶಾಸನದ ಅಂಶವನ್ನು ಪ್ರತಿಪಾದಿಸಿದ್ದರು.

ಶ್ರೀ ಟಿ. ಮರಿಯಪ್ಪ (ಮೈಸೂರು ನಗರ - ಉತ್ತರ) - ನನ್ನ ಮಾನ್ಯ ಸ್ನೇಹಿತರ ಮಾಹಿತಿಗಾಗಿ, ಆ ಪರಿಹಾರ ಕ್ರಮ ಈಗಾಗಲೇ ಆಚರಣೆಯಲ್ಲಿದೆಯೆಂದು ಹೇಳಲು ಇಚ್ಛಿಸುತ್ತೇನೆ. 40,000 ಎತ್ತುಗಳನ್ನು ಈಗಾಗಲೇ ನಿರ್ವೀರ್ಯಗೊಳಿಸಲಾಗಿದೆ. (ನಗು).

ಶ್ರೀ ಜೆ. ಮಹಮ್ಮದ್ ಇಮಾಂ - ನಾನು ಅನೇಕ ಅನಾವಶ್ಯಕ ಕ್ರಮಗಳ ಬಗ್ಗೆ ಹೇಳಬಲ್ಲೆ ಮತ್ತು ಇವು ಅನಾವಶ್ಯಕವಾಗಿ ಅಮೂಲ್ಯ ಸಮಯವನ್ನು ತೆಗೆದುಕೊಳ್ಳುತ್ತವೆ.

ಒಬ್ಬ ಸದಸ್ಯರು - ಬೀಳು ಭೂಮಿಯ ಸಾಗುವಳಿ ಕಾಯ್ದೆ ಒಂದಿದೆ.

ಶ್ರೀ ಜೆ. ಮಹಮ್ಮದ್ ಇಮಾಂ - ಹೌದು.

ಮಾನ್ಯ ಸಭಾಪತಿಗಳು - ಮಾನ್ಯ ಸದಸ್ಯರು ಮುಂದುವರೆಸಬಹುದು.

ಶ್ರೀ ಜೆ. ಮಹಮ್ಮದ್ ಇಮಾಂ - ಕೆಲವು ಹಿತಕರವಾದ ಅಡಚಣೆಗಳು ಅವಶ್ಯಕವಾಗಿದೆ. ಶಾಸನವನ್ನು ಮಂಡಿಸುವ ಮೊದಲು ಸಂಬಂಧಪಟ್ಟ ಸರ್ಕಾರದ ಮಂತ್ರಿಗಳು ಎಲ್ಲಾ ಅಂಶಗಳನ್ನು ಅಧ್ಯಯನ ಮಾಡಬೇಕು. ಅವರಿಗೆ ಶಾಸನದ ಕ್ರಮಗಳು ಬೇಕೆನಿಸಿದಾಗ ಮತ್ತು ಅವುಗಳು ಅನಿವಾರ್ಯವೆನಿಸಿದಾಗ, ಅವುಗಳನ್ನು ಜಾರಿಗೊಳಿಸದ ಹೊರತು ಜನರ ಹಿತಕ್ಕೆ ಧಕ್ಕೆ ಉಂಟಾಗುತ್ತದೆಂದು ಮನವರಿಕೆಯಾದರೆ ಶಾಸನದ ಕ್ರಮಗಳನ್ನು ಸಭೆಯ ಗಮನಕ್ಕೆ ತರಬೇಕು. ಅದು ಪ್ರಜಾಪ್ರಭುತ್ವಕ್ಕೆ ಆಸಕ್ತಿಗೆ ಹೊಂದಿಕೊಂಡಿರಬೇಕು ಅಥವಾ ಈಗಾಗಲೇ ಇರುವ ಆಚರಣೆಗಿಂತ ಸುಧಾರಿತ ಕ್ರಮವಾಗಿರಬೇಕು ಇಲ್ಲವೇ ಸಾರ್ವಜನಿಕರ ಬೇಡಿಕೆಯ ಮೇರೆಗೆ ಇರಬೇಕು ಇಲ್ಲವೆ ಪ್ರಯೋಜನಕಾರಿ ಕ್ರಮವಾಗಿರಬೇಕು ಇಲ್ಲವೆ ಜನರಿಗೆ ಪರಿಹಾರ ಒದಗಿಸುವಂತಿರಬೇಕು. ರಾಷ್ಟ್ರದ ಹಿತದೃಷ್ಟಿಯಿಂದ ಅಂತಹ ಶಾಸನದ ಕ್ರಮ ಅನಿವಾರ್ಯವೆಂದು ಸರ್ಕಾರ ಭಾವಿಸಿದರೆ, ಈಗ ಮಾತ್ರ ಆ ಶಾಸನವನ್ನು ಸಭೆಯ ಮುಂದೆ ಮಂಡಿಸಬೇಕು. ಪ್ರತಿಯೊಂದು ಶಾಸನದ ಕ್ರಮ ಹಣಕಾಸಿನ ಹೊಣೆಗಾರಿಕೆಯನ್ನು ಒಳಗೊಂಡಿರುತ್ತದೆಂದು ನೀವು ತಿಳಿದುಕೊಳ್ಳಬೇಕು. ಅದು ಸಭೆಯ ಅಮೂಲ್ಯ ಸಮಯವನ್ನು ತೆಗೆದುಕೊಳ್ಳುತ್ತದೆ. ಈ ಹಿನ್ನೆಲೆಯೊಂದಿಗೆ ನಾನು ಪ್ರಸ್ತುತ ಮಸೂದೆಯನ್ನು ಪರಿಶೀಲಿಸಬಯಸುತ್ತೇನೆ.

ಮಾನ್ಯರೇ, ಸಾಕಷ್ಟು ಪರಿಶೀಲನೆಯ ನಂತರ ರೆವಿನ್ಯೂ ಮಂತ್ರಿಗಳು ಈ ಮಸೂದೆಯನ್ನು ಒಂದು ರೆವಿನ್ಯೂ ಮಂಡಳಿ ಸ್ಥಾಪಿಸುವ ಉದ್ದೇಶದಿಂದ ತಂದಿದ್ದಾರೆ ಮತ್ತು ಅವರು ಕೊಟ್ಟಿರುವ ಕಾರಣ, ಮತ್ತು ಒಂದು ಪ್ರಮುಖ ಕಾರಣ ಎಂದರೆ, ಈ ಮಂತ್ರಿಗಳು ತಮ್ಮ ಹೊರೆಯನ್ನು ಕಡಿಮೆ ಮಾಡಿಕೊಳ್ಳಲು ಬಯಸುತ್ತಾರೆ; ಸರ್ಕಾರವೂ ಈ ಹೊರೆಯಿಂದ ಪಾರಾಗಬೇಕೆಂದು ಅವರು ಬಯಸುತ್ತಾರೆ ಏಕೆಂದರೆ ಅವರೊಬ್ಬರೇ ಈ ಕಾರ್ಯವನ್ನು ನಿರ್ವಹಿಸಲಾರರು. ಅವರ ಪ್ರಕಾರ ಈ ಕಾರ್ಯ ಬಹಳಷ್ಟು ವಿಸ್ತಾರವಾಗಿದೆ.

ಶ್ರೀ ಕಡಿದಾಳ್ ಮಂಜಪ್ಪ - ನಾನು ಈ ಕಾರ್ಯ ನಿರ್ವಹಿಸಲು ಅಸಮರ್ಥನೆಂದು ನಾನು ಯಾವಾಗಲೂ ಹೇಳಿಲ್ಲ. ನಾನು ಈಗಾಗಲೇ 1500 ಪ್ರಸಂಗಗಳನ್ನು (cases) ನಿವಾರಿಸಿದ್ದೇನೆ ಮತ್ತು 475 ಬಾಕಿ ಇವೆ. ಅದೇನೂ ಹೆಚ್ಚಲ್ಲ. ಈ ಎಲ್ಲಾ ಪ್ರಸಂಗಗಳನ್ನು ನಿಭಾಹಿಸುವುದು ಹೆಚ್ಚಿನ ವಿಷಯವೇನಲ್ಲ.

ಶ್ರೀ ಜೆ. ಮೊಹಮ್ಮದ್ ಇಮಾಂ - ಮಂತ್ರಿಗಳು ಈ ಎಲ್ಲಾ ಪ್ರಸಂಗಗಳನ್ನು ನಿಭಾಯಿಸಲು ಸಮರ್ಥರಿದ್ದಾರೆ ಹಾಗೂ ನಾನು ಅವರನ್ನು ಅಭಿನಂದಿಸುತ್ತೇನೆ. ಆದರೆ ಅವರು ಕೊಟ್ಟ ಕಾರಣವೆಂದರೆ, ಅವರು ಈ ಹೊರೆಯಿಂದ ಮುಕ್ತರಾಗಬಯಸುತ್ತಾರೆ ಅಥವಾ ಈ ಹೊರೆಯನ್ನಾದರೂ ಕಡಿಮೆ ಮಾಡಬೇಕಾಗಿದೆ.

ಮಾನ್ಯ ಸಭಾಪತಿಗಳು - ಈ ಕಾರಣವನ್ನು ಕಾರಣ ಮತ್ತು ಉದ್ದೇಶಗಳ ಪಟ್ಟಿಯಲ್ಲಿ ನೀಡಿಲ್ಲ.

ಶ್ರೀ ಕಡಿದಾಳ್ ಮಂಜಪ್ಪ - ಹಾಗಾದರೆ ನಾನು ಇತರ ಪ್ರಮುಖ ವಿಷಯಗಳನ್ನು ಪರಿಗಣಿಸಬಹುದು.

ಶ್ರೀ ಜೆ. ಮಹಮ್ಮದ್ ಇಮಾಂ - ಅವರು ಮಸೂದೆಯನ್ನು ಮಂಡಿಸಿದಾಗ ಈ ಕಾರಣಗಳ ಪಟ್ಟಿಯಲ್ಲಿ ಅದನ್ನು ಸೂಚಿಸಿರಬೇಕಾದ ಅವಶ್ಯಕತೆಯೇ ಇಲ್ಲ. ಅಲ್ಲಿ ಅವರು ಈ ಸಭೆ ಈ ಕ್ರಮಗಳನ್ನು ಏಕೆ ಸಮ್ಮತಿಸಬೇಕು ಎಂಬುದರ ಬಗ್ಗೆ ಇತರ ಯಾವುದೇ ಕಾರಣವನ್ನು ಸೂಚಿಸಿಲ್ಲ. ಈ ಕಾರಣವನ್ನು ನಾನು ಒಪ್ಪಲು ಸಾಧ್ಯವಿಲ್ಲ. ಒಂದು ವೇಳೆ, ಮಂತ್ರಿಗಳು ಪ್ರಜಾಪ್ರಭುತ್ವ ತತ್ವಗಳ ಆಧಾರದ ಮೇಲೆ ಪ್ರಸಿದ್ಧ ಹಾಗೂ ಜಾವಾಬ್ದಾರಿಯುತ ಮಂತ್ರಿಗಳು ಅವರ ಕಾರ್ಯಾಂಗದ ಅಧಿಕಾರಗಳಿಂದ ಮುಕ್ತರಾಗಬೇಕು ಮತ್ತು ಈ ಉದ್ದೇಶದಿಂದಲೇ ಈ ಮಸೂದೆಯನ್ನು ಮಂಡಿಸಿರುವುದಾಗಿ ಹೇಳಿದ್ದರೆ, ಒಂದು ವೇಳೆ ಈ ಕಾರಣವನ್ನು ಅವರು ನೀಡಿದ್ದರೆ, ಈಗ ಅವರನ್ನು ಅಭಿನಂದಿಸುವವರಲ್ಲಿ ಮೊದಲಿಗನಾಗಿರುತ್ತಿದ್ದೆ.

ಶ್ರೀ ಕಡಿದಾಳ್ ಮಂಜಪ್ಪ - ನಾನು ಮುಂದುವರೆಸಿದೆ, ಆದರೆ ಸದಸ್ಯರು ಆಸಕ್ತರಾಗಿರಲಿಲ್ಲ.

ಶ್ರೀ ಜೆ.ಮೊಹಮ್ಮದ್ ಇಮಾಂ - ನಾನು ತತ್ವವನ್ನು ಒಪ್ಪಿಕೊಳ್ಳುವಲ್ಲಿ ನಾನೇ ಮೊದಲಿಗನಾಗುತ್ತಿದ್ದೆ. ಆದರೆ ಇದ್ದದ್ದನ್ನು ಇದ್ದ ಹಾಗೆ, ಒಂದು ಮಂಡಳಿಯನ್ನು ನಿರ್ಮಿಸುವುದನ್ನು ಹೊರತು ಪಡಿಸಿ, ಸರ್ಕಾರವು ತನ್ನ ಅಸ್ತಿತ್ವದಲ್ಲಿರುವ ಅಧಿಕಾರಗಳಿಂದ ಮುಕ್ತವಾಗಿಸಲು ಯಾವುದೇ ಪ್ರಯತ್ನ ಮಾಡಿಲ್ಲ. ಇದು ಪ್ರಜಾಪ್ರಭುತ್ವ ತತ್ವಕ್ಕೆ ವಿರುದ್ಧವಾಗಿದೆ.

ಮಾನ್ಯ ಸಭಾಪತಿಗಳು - ಅಧಿಕಾರಗಳಿಂದ ಬಿಡುಗಡೆ ಮಾಡಲು ಇರುವ ಮನವಿಗೆ ಇದೊಂದು ಉದಾಹರಣೆಯಾಗಿದೆ.

ಶ್ರೀ ಜೆ. ಮಹಮ್ಮದ್ ಇಮಾಂ - ಈ ಕ್ರಮದ ಪ್ರಕಾರ, ಅವರು ಈ ಅಧಿಕಾರದಿಂದ ಮುಕ್ತರಾಗಿಲ್ಲವೆಂದು ಹೇಳಲು ನಾನು ಕೇಳಿಕೊಳ್ಳುತ್ತಿದ್ದೇನೆ, ಏಕೆಂದರೆ ಈಗಲೂ ಅಂತಿಮ ಅಧಿಕಾರ ಸರ್ಕಾರವೇ ಆಗಿದೆ. ಅದು ಕೇಂದ್ರಿಕರಣವಾಗಿದೆ. ನಾನು ಅದಕ್ಕೆ ಬರುತ್ತಿದ್ದೇನೆ. ಎಲ್ಲಾ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಎಲ್ಲಾ ಶಾಸಕಾಂಗದ ಅಧಿಕಾರಗಳಿಂದ ಮುಕ್ತರಾಗಲು ಸಂಬಂಧ, ಪಟ್ಟ ಮಂತ್ರಿಗಳು ಅಥವಾ ಪ್ರಸಿದ್ಧ ಮಂತ್ರಿಗಳು ಪ್ರಯತ್ನಿಸುವುದು ಮತ್ತು ನ್ಯಾಯಾಂಗದ ಅಥವಾ ಅರೆ ನ್ಯಾಯಾಂಗದ ಅಧಿಕಾರಗಳಿಂದ ಮುಕ್ತರಾಗಲು ಪ್ರಯತ್ನಿಸುವುದು ಒಂದು ರೂಢಿಯಾಗಿದೆ. ಆದರೆ ಇಲ್ಲಿ ಪ್ರಸಿದ್ಧ ಮಂತ್ರಿಗಳು, ಮಂತ್ರಿಗಳಾಗಿ ಕಾರ್ಯ ನಿರ್ವಹಿಸುವುದೇ ಅಲ್ಲದೆ ನ್ಯಾಯಾಂಗದ ಅಧಿಕಾರಿಗಳಾಗಿ, ನಾಗರೀಕ ಸೇವಾ ಸಿಬ್ಬಂದಿಯಾಗಿ, IAS ಅಧಿಕಾರಿಗಳಾಗಿ, ಕಾರ್ಯ ನಿರ್ವಹಿಸುತ್ತಾರೆ ಹಾಗೆಯೇ ಅಧಿಕಾರ ಅವರಲ್ಲೇ ಕೇಂದ್ರಿಕೃತವಾಗಿರುತ್ತದೆ. ಇದು ಪರೋಕ್ಷವಾಗಿ ಪ್ರಜಾಪ್ರಭುತ್ವದ ಭಾವನೆಗೆ ವಿರುದ್ಧವಾಗಿದೆ. ಮಂತ್ರಿಗಳು ಕೇವಲ ನಿಯಮಗಳ ರಚನೆಯ ಜವಾಬ್ದಾರಿ ಹೊಂದಿದ್ದಾರೆ ಮತ್ತು ವಾಸ್ತವಿಕ

ಆಡಳಿತದ ಕಾರ್ಯಚರಣೆ, ಕೆಳಸ್ತರದ ಅಧಿಕಾರಿಗಳಿಗೆ ಅಂದರೆ, IAS ಅಧಿಕಾರಿಗಳಿಗೆ ಮೀಸಲಿಡಬೇಕೆಂದು ಪದೇ ಪದೇ ಕೋರಿಕೆಗಳನ್ನು ಮುಂದಿಟ್ಟಿದ್ದರೂ ಈ ಪ್ರಯತ್ನವನ್ನು ರದ್ದುಗೊಳಿಸಲಾಗಲಿಲ್ಲ. ಈ ದಿಕ್ಕಿನಲ್ಲಿ ಯಾವ ಪ್ರಯತ್ನವನ್ನೂ ಮಾಡಿಲ್ಲ ಮತ್ತು ಸರ್ಕಾರದ ಆದಾಯದ ಮನವಿಗಳ ಮತ್ತು ಬಿನ್ನಹಗಳ ಪರಿಶೀಲನೆಯ ಬಗ್ಗೆ ಸಾಕಷ್ಟು ಪ್ರಯತ್ನ ಮಾಡಿಲ್ಲ. ಇದು ಹಾನಿಕಾರಕವಾಗಿದೆ, 1935ರ ಭಾರತ ಸರ್ಕಾರ ಕಾಯ್ದೆಯಲ್ಲಿ ಒಂದು ಉಪವಾಕ್ಯ (clause) ವನ್ನು ಹೇಳುತ್ತಿದ್ದೇನೆ ಆದರಲ್ಲಿ ತತ್ವವನ್ನು ಸ್ಪಷ್ಟವಾಗಿ ನಮೂದಿಸಲಾಗಿದೆ.

ಶ್ರೀ ಕಡಿದಾಳ್ ಮಂಜಪ್ಪ - ಅದು ಈಗ ಜಾರಿಯಲ್ಲಿಲ್ಲ.

ಶ್ರೀ ಜೆ. ಮಹಮ್ಮದ್ ಇಮಾಂ - ಅಭ್ಯಂತರವಿಲ್ಲ. ಆದರೆ ಶಾಸಕಾಂಗದ ಸದಸ್ಯರನ್ನೊಳಗೊಂಡ ನ್ಯಾಯಪೀಠ ಆದಾಯದ ಕೋರಿಕೆಗಳನ್ನು ಪರಿಹರಿಸಬಾರದೆಂಬ ತತ್ವವನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಹೇಗೋ ನಾನು ಅದನ್ನು ಪಡೆದುಕೊಂಡೆ ಮತ್ತು ನಾನು ಅದನ್ನು ಓದಲಿದ್ದೇನೆ.

"ವಿಭಾಗ 296 - ಯಾವುದೇ ಫೆಡರಲ್ ಅಥವಾ ಪ್ರಾದೇಶಿಕ ಶಾಸಕಾಂಗದ ಸದಸ್ಯರು ಬ್ರಿಟಿಷ್ ಇಂಡಿಯಾದ ಯಾವುದೇ ನ್ಯಾಯ ಪೀಠದ ಸದಸ್ಯರಾಗಬಾರದು" ....... ಆ ಅವಧಿಯಲ್ಲಿ ಮೈಸೂರು ತನ್ನದೆ ಆದ ಕಾನೂನು ಹೊಂದಿತ್ತು.

"ಆದಾಯ ವಿಷಯಗಳಲ್ಲಿ ನಿರ್ಧಾರಗಳನ್ನು ಪರಿಷ್ಕರಿಸಲು ಅಥವಾ ಕೋರಿಕೆಗಳನ್ನು ಪಡೆಯುವ ವ್ಯಾಪ್ತಿಯನ್ನು ಹೊಂದಿದೆ"

ಇದು ಭಾರತೀಯ ಸರ್ಕಾರ ಕಾಯ್ದೆ 1935ರಲ್ಲಿ ಹೇಳಲ್ಪಟ್ಟಿದೆ. 1935ರ ಕಾಯ್ದೆಯಲ್ಲಿ, ಶಾಸಕಾಂಗದ ಸದಸ್ಯರು ಆದಾಯದ ಕೋರಿಕೆಗಳ ಬಗ್ಗೆ ಕಾರ್ಯಚರಣೆ ಮಾಡಬಾರದೆಂದು (ನಿಸ್ಸಂಶಯವಾಗಿ ಸ್ಪಷ್ಟವಾಗಿ ನಮೂದಿಸಲಾಗಿದೆ unequicoval) ಅದೇ ನಮೂದಿಸಲ್ಪಟ್ಟ ತತ್ವವಾಗಿದೆ:

"ಫೆಡರಲ್ ಅಥವಾ ಪ್ರಾದೇಶಿಕ ಶಾಸಕಾಂಗದ ಯಾವುದೇ ಸದಸ್ಯರು ಆದಾಯದ ವಿಷಯಗಳಲ್ಲಿ ಕೋರಿಕೆ ಸ್ವೀಕರಿಸಲು ಅಥವಾ ನಿರ್ಧಾರಗಳನ್ನು ಪರಿಷ್ಕರಿಸುವ ಅಧಿಕಾರದ ವ್ಯಾಪ್ತಿ ಹೊಂದಿರುವ ಬ್ರಿಟಿಷ್ ಇಂಡಿಯಾದ ನ್ಯಾಯಪೀಠದ ಸದಸ್ಯರಾಗಬಾರದು" ಆದ್ದರಿಂದಲೇ ಆದಾಯ ಮಂಡಳಿಗಳನ್ನು ಸ್ಥಾಪಿಸಲಾಗಿತ್ತು. ಈಗ ಭಾರತ ಸರ್ಕಾರದ ಕಾಯ್ದೆ 1935 ಅನ್ವಯಿಸುವುದಿಲ್ಲ. ಆದರೆ, ಈ ತತ್ವವನ್ನು ಒಪ್ಪಿಕೊಳ್ಳಲೇಬೇಕು. ಕೇಂದ್ರ ಶಾಸಕಾಂಗದ ಅಥವಾ ಪ್ರಾದೇಶಿಕ ಶಾಸಕಾಂಗದ ಸದಸ್ಯರಾದವರು ಆದಾಯದ ಕೋರಿಕೆಗಳನ್ನು ಸ್ವೀಕರಿಸುವುದಾಗಲೀ, ಪರಿಷ್ಕರಿಸುವುದಾಗಲೀ ಬುದ್ಧಿವಂತಿಕೆಯಲ್ಲವೆಂದು ಅವರು ಭಾವಿಸಿದ್ದರು. ಈಗ ನಾವು ಪೂರ್ಣ ಪ್ರಜಾಪ್ರಭುತ್ವ ವಾತಾವರಣದಲ್ಲಿದ್ದೇವೆ. ರಾಜ್ಯದ ಹಿತಾಸಕ್ತಿ ಹಾಗೂ ಜನರ ಹಿತಾಸಕ್ತಿ ಗಮನಿಸಿ ಈ ತತ್ವವನ್ನು ಅಳವಡಿಸಬೇಕು. ಮಾನವ ಸ್ವಭಾವವನ್ನು ಇದ್ದ ಹಾಗೇ ಪರಿಗಣಿಸಿದರೆ - ಮಂತ್ರಿಗಳು ಮಾನವ ಜೀವಿಗಳೇ, ಅವರು ಮಾನವ ಸಹಜ ದೌರ್ಬಲ್ಯಗಳಿಗೆ ಒಳಪಡುತ್ತಾರೆ (ಒಳಪಟ್ಟಿದ್ದಾರೆ). ಅವರು ತಮ್ಮ ಸ್ಥಾನ ಹಾಗೂ ಇಲ್ಲಿ ಅದರ ಅಸ್ತಿತ್ವಕ್ಕೆ ಜನರು ಹಾಗೂ

ಮತದಾರರಿಗೆ ಉಪಕಾರ ಬದ್ದರಾಗಿದ್ದಾರೆ. ಅವರು ಅನೇಕ ಜನರನ್ನು ತೃಪ್ತಿ ಪಡಿಸಬೇಕು. ಅನೇಕ ಪ್ರತಿಕೂಲ ಸಂದರ್ಭಗಳಿಂದ ಸುತ್ತುವರಿಯಲ್ಪಟ್ಟಿದ್ದು, ಆದರೆ ಅದು ಸರಿಯಾಗಿದೆ ಮತ್ತು ನ್ಯಾಯಕ್ಕಾಗಿ ಅವರು ಈ ಅಧಿಕಾರದಿಂದ ಮುಕ್ತರಾಗಬೇಕು ಮತ್ತು ಇನ್ನು ಮುಂದೆ, ಅವರು ಆದಾಯದ ಕೋರಿಕೆಗಳು ಹಾಗೂ ಇತರ ಕೋರಿಕೆಗಳ ಬಗ್ಗೆ ಏನೂ ಮಾಡಬೇಕಿಲ್ಲ. ಇದು ಸರ್ಕಾರ ಒಂದು ಪಕ್ಷ ತತ್ವದ ಮೇಲೆ ಆಧಾರವಾಗಿದ್ದಾಗ ಹೆಚ್ಚು ಅವಶ್ಯಕ. ನೀವು ಚುನಾವಣೆಗಳನ್ನು ಎದುರಿಸಬೇಕು. ಕೆಲವೊಮ್ಮೆ ಒಳ್ಳೆಯ ಉದ್ದೇಶಗಳನ್ನು ಹೊಂದಿರುವ ವ್ಯಕ್ತಿಯೂ ನ್ಯಾಯ ದೊರಕಿಸಿಕೊಡುವುದು ಕಷ್ಟವೆನಿಸುತ್ತದೆ. ನಾನು ಮತದಾರರ ಋಣದಲ್ಲಿದ್ದೇನೆ. ನಿರ್ದಿಷ್ಟ ಪ್ರದೇಶಗಳಲ್ಲಿ ಅನೇಕ ಪ್ರಸಿದ್ಧ ವ್ಯಕ್ತಿಗಳಿದ್ದಾರೆ ನೀವು ಅವರಿಗೆ ಕೃತಜ್ಞರಾಗಿದ್ದೀರಿ. ಒಂದು ವೇಳೆ ನಾನು ಒಬ್ಬ ಪ್ರಭಾವೀ ವ್ಯಕ್ತಿಯ ಋಣದಲ್ಲಿದ್ದೇನೆ ಮತ್ತು ಅವನು ನನ್ನ ಮುಂದೆ ಬಂದು "ನಾನು ತೊಂದರೆಯಲ್ಲಿದ್ದೀನಿ; ನೀವು ನನಗೆ ಸಹಾಯ ಮಾಡಬಲ್ಲಿರಾ?" ಎಂದು ಕೇಳಿದರೆ, ಅಂತಹ ಸಂದರ್ಭ ಬಂದರೆ, ಅವರು ಯಾವುದೆ ಮಂತ್ರಿಗಳಾಗಿರಲಿ, ನಿಜವಾಗಿಯೂ ಅವರು ವಿಚಲಿತರಾಗುತ್ತಾರೆ (Swayed) ಮತ್ತು ವಿಚಿತ್ರ ಪರಿಸ್ಥಿತಿಯಲ್ಲಿರುತ್ತಾರೆ. ಅವರು ತಮ್ಮ ವಿಶ್ವಾಸವನ್ನು ಕಳೆದುಕೊಳ್ಳಬೇಕು ಮತ್ತು ಮತದಾರರ ವಿಶ್ವಾಸವನ್ನು ಕಳೆದುಕೊಳ್ಳಬೇಕು ಇಲ್ಲವೆ ತಮ್ಮ ಆತ್ಮಸಾಕ್ಷಿಗೆ ವಿರದ್ಧವಾಗಿ ಹೋಗಬೇಕು. ಆದ್ದರಿಂದ ತತ್ವವನ್ನು ಈ ರೀತಿಯಲ್ಲಿ ನಮೂದಿಸಲಾಗಿದೆ.

ಶ್ರೀ ಕಡಿದಾಳ್ ಮಂಜಪ್ಪ - ಅದು ಮಂತ್ರಿಗಳ ಇತರ ಎಲ್ಲಾ ಚಟುವಟಿಕೆಗಳೂ ಅನ್ವಯಿಸುತ್ತದೆ.

ಶ್ರೀ ಜೆ. ಮಹಮ್ಮದ್ ಇಮಾಂ - ಆದ್ದರಿಂದಲೇ ನೀವು ನಿಯಮಗಳನ್ನು ರೂಪಿಸಬೇಕು ಮತ್ತು ಅದನ್ನು ಕಾರ್ಯಂಗದ ಅಧಿಕಾರಿಗಳು ಜಾರಿಗೆ ತರಲು ಬಿಡಬೇಕು. ನಾನು ಈ ವಿಷಯವನ್ನು ಅಷ್ಟಕ್ಕೇ ಬಿಡುತ್ತೇನೆ. ಕೆಲವು ಅತೀ ಕಠಿಣ ಸಂಗತಿಗಳು ಇರುತ್ತವೆ ಮತ್ತು ಸ್ವಲ್ಪ ಅನ್ಯಾಯವೆಸಗಿದರೂ, ಇಡೀ ಭವಿಷ್ಯ ಹಾಳಾಗುತ್ತದೆ. ನಾನು ಮಂತ್ರಿಗಳಿಗೆ ಉದ್ದೇಶಗಳಿಗಾಗಿ ಆರೋಪಿಸುವುದಿಲ್ಲ ಆದರೆ ಅಂತಹ ಆಕಸ್ಮಿಕ ಪ್ರಸಂಗ ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಬಂದೇ ಬರುತ್ತದೆ ಮತ್ತು ಅದಕ್ಕೆ ರಕ್ಷಣೆಯಾಗಿ ಅದು ಅವಶ್ಯಕ ಮತ್ತು ಜನರ ಪ್ರತಿನಿಧಿಗಳಾಗಿ ಆಯ್ಕೆಯಾಗಿ ಬರುವವರು ಅವರ ಕಾರ್ಯಂಗದ ಅಧಿಕಾರದಿಂದ ಮುಕ್ತರಾಗಬೇಕು ಏಕೆಂದರೆ ಮೇಲ್ಕಂಡ ಸಂಶಯದಿಂದ ದೂರವಾಗಿರಲು ಅದು ಅನಿವಾರ್ಯವಾಗಿದೆ ಮತ್ತು ನೇಸರ್‌ನ ಹೆಂಡತಿ ಸಂಶಯಕ್ಕೆ ಮೀರಿರಬೇಕು ! ಮಸೂದೆ ಈ ತತ್ವವನ್ನು ತೃಪ್ತಿಪಡಿಸಿಲ್ಲ (ಪೂರೈಸುವುದಿಲ್ಲ). ಅವರು ಈ ಮಸೂದೆಯಲ್ಲಿ ಏನನ್ನು ನೀಡುತ್ತಿದ್ದಾರೆ ? ಅವರು ಸರ್ಕಾರದಿಂದ ನೇಮಿಸಲ್ಪಟ್ಟ ಹಲವು ವಿಭಾಗಗಳ ಮುಖ್ಯಸ್ಥರಾಗಿರುವ ಸದಸ್ಯರನ್ನು ಒಳಗೊಂಡ ಒಂದು ಮಂಡಳಿಯನ್ನು ಸ್ಥಾಪಿಸಿದ್ದಾರೆ ಮತ್ತು ಅವರು ತಮ್ಮ ತಮ್ಮ ವಿಭಾಗಗಳಲ್ಲಿ ಆಸಕ್ತಿ ಹೊಂದಿದ್ದಾರೆ. ಅವರು ಕೋರಿಕೆಗಳನ್ನು ಕೇಳಬಹುದೆಂದು ಮತ್ತು ಪರಿಷ್ಕರಣದ ಅಧಿಕಾರ ಚಲಾಯಿಸಬಹುದೆಂದು ಹೇಳಲ್ಪಟ್ಟಿದೆ. ಆದರೆ ಉಪವಾಕ್ಯ 6ರಲ್ಲಿ ಯಾವು[illegible]ವರೆಗೆ ಒಳಗಾದ ಪಕ್ಷ (ಗುಂಪು) ಪರಿಷ್ಕರಣೆಗಾಗಿ ಸರ್ಕಾರದ ಬಳಿ ಹೋಗುವ ಅ[illegible]ಪಲಾಗಿದೆ. ನನ್ನಿಂದ ಈ ವಿಷಯ ಪಡೆಯಿರಿ (take it from me) ನಾನು ಹೇಳುತ್ತಿದ್ದೇನೆ, ಈ ಕ್ರಮ ತೊಂದರೆಯನ್ನು ನಿವಾರಿಸುವುದಿಲ್ಲ

ಆಗಲೇ ಮಂತ್ರಿಗಳನ್ನು ಸುತ್ತುವರೆದಿದೆ. ಇದು ಪರಿಷ್ಕರಣದ ಬಿನ್ನಹಗಳನ್ನು ಕಡಿಮೆ ಮಾಡುವುದಿಲ್ಲ. ಪ್ರತಿಯೊಂದು ವಿಷಯವನ್ನು ಮಂತ್ರಿಗಳ ಗಮನಕ್ಕೆ ತರಲಾಗುತ್ತದೆ ಮತ್ತು ಮಂತ್ರಿಗಳು ಮತ್ತೊಮ್ಮೆ ಅಷ್ಟೇ ಪ್ರಮಾಣದ ಕೆಲಸವನ್ನು ಹೊಂದುತ್ತಾರೆ ಹಾಗೇಯೆ ಮತ್ತೊಮ್ಮೆ ಅವರು ತಮ್ಮನ್ನು ವಿಚಿತ್ರ ಪರಿಸ್ಥಿತಿಯಲ್ಲಿರುತ್ತಾರೆ. ಆದ್ದರಿಂದ, ಮಾನ್ಯರೇ, ಅದು ಪ್ರಜಾಪ್ರಭುತ್ವಕ್ಕೆ ಅನುಗುಣವಾಗಿರುತ್ತಿತ್ತು. ಅದು ಸಂಪೂರ್ಣ ಸರಿಯಾಗಿರುತ್ತಿತ್ತು. ಒಂದು ವೇಳೆ ರೆವಿನ್ಯೂ ಮಂಡಳಿಯ ನಿರ್ಧಾರಗಳು ಅದರ ರಚನೆಯ ನಂತರ ಅಂತಿಮವೆಂದು ಪರಿಗಣಿಸಲ್ಪಟ್ಟಿದ್ದವು ಹಾಗೆಯೇ ರೆವಿನ್ಯೂ ಮಂಡಳಿಯ ನಿರ್ಧಾರದ ಬಗ್ಗೆ ಸರ್ಕಾರ ಏನೂ ಮಾಡುವಂತಿಲ್ಲ. ಕೋರಿಕೆಯ ಅಧಿಕಾರ ರೆವಿನ್ಯೂ ಮಂಡಳಿಗೆ ಇರದೆ ಬೇರಾವುದಾದರೂ ಇಲಾಖೆಗೆ ಇರಬೇಕು; ಸರ್ಕಾರ ತನ್ನನ್ನು ಮುಕ್ತಗೊಳಿಸಬೇಕು ಮತ್ತು ಪ್ರಜಾಪ್ರಭುತ್ವಕ್ಕೆ ಸಹಾಯ ಮಾಡಲು ಇದು ನಿಮಗೊಂದು ಸುಸಂದರ್ಭವಾಗಿದೆ.

ನಾನು ಮಂಡಳಿಯ ರಚನೆಯ ಪ್ರಶ್ನೆಯನ್ನು ಕೈಗೆತ್ತಿಕೊಳ್ಳುತ್ತೇನೆ, ಮಾನ್ಯರೆ ಮಂಡಳಿಯು ಆದಾಯ ಕಮೀಷನರ್, ಎಕ್ಸೈಜ್ ಕಮೀಷನರ್ ಮತ್ತು ಸರ್ಕಾರದಿಂದ ನೇಮಿಸಲ್ಪಟ್ಟ ವಿಭಾಗದ ಮುಖ್ಯಸ್ಥರನ್ನು ಒಳಗೊಂಡಿರುತ್ತದೆಂದು ಹೇಳಲಾಗಿದೆ. ಮಾನ್ಯರೇ, ಅವರು ಮಂಡಳಿಯ ಸದಸ್ಯರಾಗಿ ಇರುವುದಿಲ್ಲ, ಏಕೆಂದರೆ ಪ್ರತಿಯೊಬ್ಬರೂ ತಮ್ಮ ಇಲಾಖೆಯ ಮತ್ತು ಇಲಾಖೆ ಚಟುವಟಿಕೆ ಬಗ್ಗೆ ಚಿಂತಿಸುತ್ತಾರೆ ಎಂದು ನಾನು ಹೇಳುತ್ತೇನೆ. ಆದ್ದರಿಂದ ಒಂದು ವೇಳೆ ಸರ್ಕಾರದ ಅಧೀನದಲ್ಲಿರುವ, ತಮ್ಮ ವಿಭಾಗದ ಆಡಳಿತ ಜವಾಬ್ದಾರಿ ಹೊಂದಿರುವ ವ್ಯಕ್ತಿಗಳು ಮಂಡಳಿ ರಚಿಸಬೇಕು ಆದರೆ ಅಂತಹ ಮಂಡಳಿ ಹೆಚ್ಚು ಗೌರವ ಪಡೆಯಲಾಗುವುದಿಲ್ಲವೆಂದು ನಾನು ಭಯಪಡುತ್ತೇನೆ. ನಾನು ತಿಳಿಯಲಿಚ್ಚಿಸುತ್ತೇನೆ, ಮಾನ್ಯರೇ, ಒಂದು ವೇಳೆ ಇನ್ನಾವುದೇ ರಾಜ್ಯದಲ್ಲಿ ಆದಾಯ ಮಂಡಳಿಯ ಅಸ್ತಿತ್ವ ಇದ್ದಲ್ಲಿ ಮಂತ್ರಿಗಳಿಂದ ಆ ಮಾಹಿತಿ ಪಡೆಯಲಿಚ್ಚಿಸುತ್ತೇನೆ.

ಶ್ರೀ ಕಡಿದಾಳ್ ಮಂಜಪ್ಪ - ಅದು ಮದ್ರಾಸ್‌ನಲ್ಲಿದೆ.

ಶ್ರೀ ಜೆ. ಕಡಿದಾಳ್ ಮಂಜಪ್ಪ - ಮದ್ರಾಸಿನಲ್ಲಿ, ರೆವಿನ್ಯೂ ಕಮೀಷನರ್ ಇಲ್ಲವೆಂದು ನಾನು ಭಾವಿಸುತ್ತೇನೆ. ಇದೇ ರೀತಿಯ ಅಧಿಕಾರಿಗಳನ್ನು ರೆವಿನ್ಯೂ ಮಂಡಳಿ ಅಸ್ತಿತ್ವದಲ್ಲಿದೆಯೆ ಎಂದು ತಿಳಿದುಕೊಳ್ಳಲು ನಾನು ಬಯಸುತ್ತೇನೆ. ಮದ್ರಾಸಿನಲ್ಲಿ ಮಂಡಳಿಯ ಉನ್ನತ ಅಧಿಕಾರಿಗಳನ್ನು ಹೊಂದಿದೆ ಮತ್ತು ಅವರು ಅನಿಯಮಿತ ಅಧಿಕಾರಗಳನ್ನು ಹೊಂದಿದ್ದಾರೆ. ಆದರೆ ಇಲ್ಲಿ ಮಂಡಳಿಯು ವಿಭಾಗದ ಮುಖ್ಯಸ್ಥರನ್ನು ಹೊಂದುವಂತೆ ಮಾಡುವುದು ರಾಜ್ಯದ ಹಿತಾಸಕ್ತಿಗೆ ಅನುಗುಣವಾಗಿರುವುದಿಲ್ಲವೆಂದು ನಾನು ಭಾವಿಸುತ್ತೇನೆ. ಅವರು ಸರ್ಕಾರಕ್ಕೆ ಜವಾಬ್ದಾರಿಯುತರಾಗಿದ್ದಾರೆ ಮತ್ತು ಅದು ಒಂದು ಸ್ವತಂತ್ರ ವಿಭಾಗವಾಗುವುದೆಂದು ನಾವು ಒಪ್ಪಿಕೊಳ್ಳಲು ಸಾಧ್ಯವಿಲ್ಲ.

ಈ ಆಕ್ಷೇಪಣೆಯನ್ನು ಹೊರತು ಪಡಿಸಿ, ಮಾನ್ಯರೇ, ಇದು ಪ್ರಸ್ತುತವಿರುವ ಆಚರಣೆಗಿಂತ ಹೇಗೆ ಉತ್ತಮವಾಗಿದೆಯೆಂದು ತಿಳಿಯಲು ನಾನು ಬಯಸುತ್ತೇನೆ, ಮತ್ತು ಈ ಹಂತದಲ್ಲಿ ಬದಲಾವಣೆಯ ಬಗ್ಗೆ ಚಿಂತಿಸುವ ಅವಶ್ಯಕತೆ ಎಲ್ಲಿತ್ತು. ಪ್ರಸ್ತುತ ವ್ಯವಸ್ಥೆ ಸರಿಯಾಗಿ ಕೆಲಸ ಮಾಡುತ್ತಿಲ್ಲವೆಂಬ ಬಗ್ಗೆ ಸರ್ಕಾರಕ್ಕೆ ಯಾವುದಾದರೂ ಮನವಿಗಳನ್ನು ಮಾಡಲಾಗಿತ್ತೆ ? ಪ್ರಸ್ತುತ ಅವಧಿಯಲ್ಲಿ ಯಾವುದೇ ಅನ್ಯಾಯ ಅಥವಾ ವಿಳಂಬದ ಬಗ್ಗೆ ದೂರಿ ಜನರು ಬೇಡಿಕೆ

ಸಲ್ಲಿಸಿದ್ದರೆ ? ನನಗೆ ತಿಳಿದಿರುವ ಹಾಗೆ, ಮಾನ್ಯರೇ, ಯಾವುದೇ ವಿಳಂಬ ಅಥವಾ ಅತೃಪ್ತ, ನ್ಯಾಯಬಾಹಿರ ವಿಚಾರಣೆಯ ಬಗ್ಗೆ ನಾನು ಯಾವುದೇ ದೂರನ್ನು ಕೇಳಿಲ್ಲ. ಮಾನ್ಯರೇ, ಇದು ಮತ್ತೊಂದು ಪ್ರಮುಖ ಅಂಶವಾಗಿದೆ. ಮದ್ರಾಸು ಮತ್ತು ಬಾಂಬೆಗಳು ಇಂತಹ ರೆವಿನ್ಯೂ ಮಂಡಳಿಯನ್ನು ಬಹಳ ಕಾಲದಿಂದಲೂ ಹೊಂದಿದೆ. ಇಲ್ಲಿ ರೆವಿನ್ಯೂ ಮಂಡಳಿ ಹೊಂದುವ ಅವಶ್ಯಕತೆಯನ್ನು ಇಲ್ಲಿಯವರೆಗೆ ಮೈಸೂರು ಆಡಳಿತ ಯೋಚಿಸಿರಲಿಲ್ಲ. ಮೈಸೂರು ರಾಜ್ಯದ ಆಡಳಿತ ಹಿಂದಿನ ಒಂದು ಶತಕದಿಂದಲೂ ನಡೆದುಬಂದಿದೆ ಆ ಅವಧಿಯಲ್ಲಿ ಅದು ಅತ್ಯಂತ ಹೆಚ್ಚಿನ ಪ್ರಸಿದ್ಧಿ ಪಡೆದಿದೆ. ಅದರ ದಕ್ಷತೆಯನ್ನು ಯಾರೂ ಪ್ರಶ್ನಿಸಿಲ್ಲ. ಹಿಂದೆ ರೆವಿನ್ಯೂ ಮಂಡಳಿಯ ಬಗ್ಗೆ ಚಿಂತಿಸದಿರಲು ಕಾರಣವೆಂದರೆ ಮೈಸೂರು ಮಿತವಾದ ಪ್ರದೇಶವನ್ನು ಹೊಂದಿದೆ. ಆ ರಾಜ್ಯಗಳು ಪ್ರದೇಶದಲ್ಲಿ ಬಹಳ ದೊಡ್ಡದಾಗಿದ್ದಿರಬಹುದು. ಬಹುಶಃ 3 ರಷ್ಟು ದೊಡ್ಡದ್ದು ಮತ್ತು ರೆವಿನ್ಯೂ ಮಂಡಳಿ ಹೊಂದುವುದು ಉಪಯೋಗಕಾರಿ ಎಂದು ಅವರು ಭಾವಿಸಿರಬಹುದು. ಆದರೆ ಮೈಸೂರು ಒಂದು ಅಚ್ಚುಕಟ್ಟಾದ ರಾಜ್ಯವಾಗಿದೆ.

ಶ್ರೀ ವಿ. ವೆಂಕಟಪ್ಪ (ಚನ್ನಪಟ್ಟಣ) - ನೀವು ಹಿಂದೆ ಒಂದು ತತ್ವವನ್ನು ಸ್ಪಷ್ಟವಾಗಿ ನಿರೂಪಿಸುತ್ತಿದ್ದಿರಿ; ಅದು ಈಗ ಅನ್ವಯಿಸುವುದಿಲ್ಲವೆ ?

ಶ್ರೀ ಜೆ. ಮಹಮ್ಮದ್ ಇಮಾಂ - ನಾನು ಈಗ ಬೇರೆಯೇ ಆದ ಅಂಶವನ್ನು ಹೇಳುತ್ತಿದ್ದೇನೆ.

ಮೈಸೂರಿನಂತಹ ರಾಜ್ಯದಲ್ಲಿ ರೆವಿನ್ಯೂ ಮಂಡಳಿಯ ಅವಶ್ಯಕತೆ ಇಲ್ಲವೆಂದು ಅವರು ಭಾವಿಸಿದ್ದರು. ಒಂದು ವೇಳೆ ನೀವು ಈ ಹಂತದಲ್ಲಿ ಬೇರೆ ಕಡೆಯಲ್ಲಿರುವ ವ್ಯವಸ್ಥೆಯನ್ನು ಅಳವಡಿಸಲು ಇಚ್ಛಿಸಿದರೆ, ಎಲ್ಲಾ ವರ್ಗದ ಜನರ ವಿಶ್ವಾಸವನ್ನು ಪಡೆಯುವಂತೆ ಮಂಡಳಿಯನ್ನು ನೀವು ರಚಿಸಬಹುದು. ತಮ್ಮ ವಿಭಾಗದ ಕಾರ್ಯದ ಬಗ್ಗೆ ಆಸಕ್ತರಾದ ವಿಭಾಗದ ಮುಖ್ಯಸ್ಥರನ್ನು ಹೊಂದುವುದಕ್ಕೆ ಬದಲಾಗಿ, ನೀವು ಸ್ವತಂತ್ರ ವ್ಯಕ್ತಿಗಳನ್ನು ಅಂದರೆ ಹೈಕೋರ್ಟಿನ ನಿವೃತ್ತ ನ್ಯಾಯಾಧೀಶರು, ನಿವೃತ್ತರಾದ ಉನ್ನತ ಮಟ್ಟದ ಅಧಿಕಾರಿಗಳನ್ನು, ನ್ಯಾಯಪೀಠಗಳನ್ನು, ಕೈಗಾರಿಕಾ ನ್ಯಾಯ ಪೀಠಗಳನ್ನು ಹೊಂದಿದ್ದೀರಿ. ಅದು ಸ್ವತಂತ್ರ ವಿಭಾಗವಾಗಿದೆ ಮತ್ತು ಮಾಲೀಕರು ಹಾಗೂ ಕಾರ್ಮಿಕರು ಅಂತಹ ನ್ಯಾಯಪೀಠಗಳಲ್ಲಿ ವಿಶ್ವಾಸ ಹೊಂದಿದ್ದಾರೆ, ಏಕೆಂದರೆ ಅದು ನ್ಯಾಯ ನೀಡುತ್ತದೆ, ಏಕೆಂದರೆ ಪಕ್ಷಪಾತದಿಂದ ವಿಷಯಗಳನ್ನು ಪರಿಶೀಲಿಸುವುದಿಲ್ಲ. ಹಾಗೆಯೇ, ಇಲ್ಲಿ ರೆವಿನ್ಯೂ ಮಂಡಳಿಯು ಸರ್ಕಾರ ಮತ್ತು ಅದರಲ್ಲಿರುವ ಅಧಿಕಾರಿಗಳ ಪ್ರಭಾವದಿಂದ ಸ್ವತಂತ್ರವಾಗಿರಬೇಕು ಮತ್ತು ಅದು ಉನ್ನತ ಮಟ್ಟದಲ್ಲಿದ್ದು ಸಾಕಷ್ಟು ಅಧಿಕಾರಗಳನ್ನು ಅವರಿಗೆ ಕೊಡಬೇಕು ಹಾಗೆಯೇ ಅವರ ನಿರ್ಧಾರವೇ ಅಂತಿಮವಾಗಿರಬೇಕು. ಆದರೆ ಅವರ ತೀರ್ಮಾನದ ವಿರುದ್ಧ ಕೋರಿಕೆಗಳಿಗೆ ಕೆಲವೊಂದು ಅವಕಾಶ ನೀಡುವುದು ಅವಶ್ಯಕವೆಂದು ಭಾವಿಸಿದರೆ, ಆಗ ಅಂತಹ ಕೋರಿಕೆಗಳು ಹೈಕೋರ್ಟಿಗೆ ಹೋಗಬೇಕು ಆದರೆ ಸರ್ಕಾರಕ್ಕೆ ಹೋಗಬಾರದು. ನಾನು ಈ ವಿಷಯವನ್ನು ಜಾಗರೂಕತೆಯಿಂದ ಪರಿಶೀಲಿಸಿಲ್ಲ. ಆದರೆ ಅದು ಬುದ್ಧಿವಂತ ಮಾರ್ಗವೆಂದು ತೋರುತ್ತದೆ. ರೆವಿನ್ಯೂ ಮಂಡಳಿಯ ಸದಸ್ಯರು ಉನ್ನತಸ್ಥದವರಾಗಿರಬೇಕು. ಅವರು ಸರ್ಕಾರದ ಪ್ರಭಾವಕ್ಕೆ ಒಳಗಾಗಬಾರದು ಮತ್ತು ಅವರ ತೀರ್ಪುಗಳು ಹಾಗೂ ನಿರ್ಧಾರಗಳು ಅಂತಿಮವಾಗಿರಬೇಕು. ಒಂದು ವೇಳೆ ಅವಶ್ಯಕವೆನಿಸಿದರೆ, ಅದನ್ನು ಕೇವಲ

ಒಂದು ನ್ಯಾಯಾಲಯದಲ್ಲಿ ಮಾತ್ರ ಆಕ್ಷೇಪಿಸಬೇಕು ಏಕೆಂದರೆ ಅಲ್ಲಿ ಬರುವ ಎಲ್ಲಾ ವಿಷಯಗಳು ನ್ಯಾಯ ಸಂಬಂಧಿ ವಿಷಯಗಳಾಗಿದ್ದು. ಕಾನೂನಿನ ಉನ್ನತ ಅಂಶ ಒಳಗೊಂಡಿರುತ್ತವೆ ಮತ್ತು ಪರಿಷ್ಕರಣ ಕೋರಿಕೆಯಸ್ನು ಕೇಳಿಕೊಳ್ಳಲು ಹೈಕೋರ್ಟಿನ ನ್ಯಾಯಾಧೀಶಕರ ವಿಭಾಗ ಸ್ಥಾಪಿಸಬೇಕಾದರೆ, ಆಗ ಜನರಿಗೆ ನ್ಯಾಯ ಒದಗಿಸಲು ಒಂದು ಉತ್ತಮ ಕಾರ್ಯಯಂತ್ರವನ್ನು ನೀವು ಕಲ್ಪಿಸುತ್ತಿದ್ದೀರಿ ಎಂದು ನಾನು ಭಾವಿಸುತ್ತೇನೆ.

ಒಂದು ವೇಳೆ ನೀವು ನನ್ನ ಸಲಹೆಗಳನ್ನು ಸ್ವೀಕರಿಸುತ್ತಿದ್ದರೆ, ರೆವಿನ್ಯೂ ಕಮೀಷನರ್ ಅವರ ಪ್ರಸ್ತುತ ಅಧಿಕಾರಗಳನ್ನು ಹಾಗೇ ಉಳಿಸಿಕೊಳ್ಳಬೇಕು, ಮತ್ತು ಅವರ ಆದೇಶದ ವಿರುದ್ಧ ಕೋರಿಕೆಗಳನ್ನು ಮಂಡಳಿಗೆ ನೀಡಬಹುದೆಂದು ನಾನು ಸಲಹೆ ಮಾಡುತ್ತೇನೆ. ಕೋರಿಕೆ ಅಥವಾ ಪರಿಷ್ಕರಣವನ್ನು ಹೈಕೋರ್ಟಿಗೆ ಕೊಡಬೇಕೇ ಹೊರತು ಸರ್ಕಾರಕ್ಕೆ ಕೊಡಬಾರದು.

ಮಾನ್ಯರೇ, ಅನೇಕ ಇತರ ವಿಷಯಗಳಿವೆ ಮತ್ತು ನನ್ನ ಗೌರವಾನ್ವಿತ ಸ್ನೇಹಿತರು ಅವುಗಳ ಬಗ್ಗೆ ಕೂಲಂಕುಶವಾಗಿ ವಿಶ್ಲೇಷಿಸಿದ್ದಾರೆ. ನನ್ನ ಅಭಿಪ್ರಾಯ ಇದು ಒಂದು ವೇಳೆ ಪ್ರಸ್ತುತ ಮಸೂದೆಯನ್ನು ಈಗ ತಯಾರಿಸಿರುವ ರೀತಿಯಲ್ಲೇ ಮಂಡಿಸಿದರೆ, ಅದರಿಂದ ಏನೂ ಪ್ರಯೋಜನವಿಲ್ಲ. ಅದು ಹೆಚ್ಚು ಗೊಂದಲ ಉಂಟುಮಾಡುತ್ತದೆ (ಸೃಷ್ಟಿಸುತ್ತದೆ). ತ್ವರಿತಗತಿಯಲ್ಲಿ ವಿಷಯಗಳನ್ನು ಪರಿಹರಿಸಲಾಗುತ್ತದೆ ಮತ್ತು ನ್ಯಾಯ ದೊರಕಿಸಿಕೊಡಲಾಗುತ್ತದೆಂಬುದರ ಬಗ್ಗೆ ಮತ್ತು ಪ್ರಸ್ತುತ ಆಚರಣೆಗಿಂತ ಅದು ಯಾವುದೇ ರೀತಿಯಲ್ಲಿ ಉತ್ತಮವಾಗಿರುತ್ತದೆಂಬ ಬಗ್ಗೆ ನನಗೆ ತೃಪ್ತಿಯಿಲ್ಲ. ಪ್ರಸ್ತುತ ವ್ಯವಸ್ಥೆ ಇನ್ನು ಸ್ವಲ್ಪ ಕಾಲ ಮುಂದುವರೆಯಬೇಕು ಮತ್ತು ಅದೇ ವೇಳೆಗೆ ಈ ರೀತಿಯ ಮಸೂದೆಯ ಅವಶ್ಯಕತೆಯನ್ನು ದೀರ್ಘವಾಗಿ ಪರಿಗಣಿಸಬೇಕೆಂದು ನಾನು ಆದ್ಯತೆ ನೀಡುತ್ತೇನೆ. ಒಂದು ವೇಳೆ ರೆವಿನ್ಯೂ ಮಂಡಳಿಯ ಮುಂದೆ ಅದೇ ಕೋರಿಕೆಯನ್ನು ಇಡಬೇಕೆಂದರೆ, ಅದಕ್ಕೆ ಸುದೀರ್ಘ ಕಾರ್ಯ ವಿಧಾನ ಮತ್ತು ನಿಯಮ ಪಾಲನೆ ಮಾಡಬೇಕಾಗುತ್ತದೆ. ಇದಕ್ಕೆ ಅಧಿಕ ಸಮಯ ಬೇಕಾಗುತ್ತದೆ. ಇದು ತ್ವರಿತಗತಿಯಲ್ಲಿ ವಿಷಯಗಳ ತೀರ್ಮಾನಕ್ಕೆ ಹೇಗೆ ಸಹಾಯಕವೆಂದು ಮತ್ತು ನ್ಯಾಯವನ್ನು ದೃಢಪಡಿಸುತ್ತದೆಂದು ನನಗೆ ಗೊತ್ತಿಲ್ಲ. ಆದ್ದರಿಂದ, ಪ್ರಸ್ತುತ ಆಚರಣೆ ವಿಭಾಗದ ಮುಖ್ಯಸ್ಥರಿಂದ ಹೋಗಬೇಕು ಮತ್ತು ಅವರ ತೀರ್ಮಾನ, ಪರಿಷ್ಕರಣ ಅಥವಾ ಕೋರಿಕೆಗಳನ್ನು ಕಾನೂನು ನ್ಯಾಯಪೀಠಕ್ಕೆ ಕೊಡಬೇಕೆಂದು ನಾನು ಸಲಹೆಮಾಡಿದ್ದೆ. ಮಾನ್ಯರೇ, ನಾನು ರೆವಿನ್ಯೂ ಮಂತ್ರಿಗಳ ಸದುದ್ದೇಶವನ್ನು ಬಲ್ಲೆ. ಆದರೆ, ಅವರು ಕಾರಣ ಪರಿಣಾಮಗಳನ್ನು ಅಧ್ಯಯನ ಮಾಡಬೇಕು ಮತ್ತು ಮಸೂದೆಯ ಮೂಲಕ ತಳ್ಳುವ ಬದಲು, ಅವಸರ ಮಾಡದೆ, ಸಾರ್ವಜನಿಕ ಅಭಿಪ್ರಾಯ ಸಂಗ್ರಹಿಸಿ ಇತರ ರಾಜ್ಯಗಳಲ್ಲಿರುವ ಕಾರ್ಯವಿಧಾನ ಅಧ್ಯಯನ ಮಾಡಿ ಇದನ್ನು ಜಾರಿಗೆ ತರಬೇಕೆಂದು ಅವರನ್ನು ಕೇಳಿಕೊಳ್ಳುತ್ತೇನೆ. ಅವರು ತ್ವರಿತ ಹಾಗೂ ಸಾಕಷ್ಟು ನ್ಯಾಯ ಜನರಿಗೆ ದೊರಕಿಸುವ ಒಂದು ಹೊಸ ಮಸೂದೆಯನ್ನು ಜಾರಿಗೆ ತರಬೇಕು.

ಮಾನ್ಯ ಸಭಾಪತಿ - ಒಂದು ವೇಳೆ ಮಸೂದೆಯನ್ನು ಆಯ್ಕೆ ಸಮಿತಿಗೆ ಕಳಿಸಿದ್ದರೆ, ಉದ್ದೇಶ ಪೂರೈಸುತ್ತದೆ.

ಶ್ರೀ ಜೆ. ಮಹಮ್ಮದ್ ಇಮಾಂ - ಆಯ್ಕೆ ಸಮಿತಿಗೆ ಕಳಿಸುವುದನ್ನು ಒಪ್ಪಿಕೊಳ್ಳುವುದೆಂದರೆ, ಮಾನ್ಯರೇ, ನಾವು ನಮಗೆ ಹೊಣೆಗಾರರಾದಂತೆ. ಆಯ್ಕೆ ಸಮಿತಿಗೆ ಕಳಿಸುವ ಮೊದಲು, ನೆರೆಹೊರೆಯ (ಪ್ರದೇಶಗಳಲ್ಲಿ) ರಾಜ್ಯಗಳಲ್ಲಿ ಇದು ಹೇಗೆ ಕೆಲಸ ಮಾಡುತ್ತಿದೆ, ನಮ್ಮ ರಾಜ್ಯದಲ್ಲಿರುವ ಪರಿಸ್ಥಿತಿಯನ್ನು ಸರ್ಕಾರ ಅಧ್ಯಯನ ಮಾಡಿ ಮುಂದಿನ ಅಧಿವೇಶನದಲ್ಲಿ ಇದನ್ನು ತರಬೇಕೆಂದು ನಾನು ಸರ್ಕಾರಕ್ಕೆ ಕೇಳಿಕೊಳ್ಳುತ್ತೇನೆ.

(ಸಂಗ್ರಹ: ವಿಧಾನಸಭೆ ನಡವಳಿಕೆ ದಿನಾಂಕ 14ನೇ ಅಕ್ಟೋಬರ್ 1954)

## ಪಾನ ನಿರೋಧ - (Prohibition)

ನಿನ್ನೆ ದಿನ, ಪೂರಕ ತೀರ್ಮಾನಗಳನ್ನು ಕಳಿಸಿರುವ ಸದಸ್ಯರೆಲ್ಲರೂ ಚರ್ಚೆಯಲ್ಲಿ ಭಾಗವಹಿಸಬಹುದೆಂಬ ಸಲಹೆ ನೀಡಲಾಗಿತ್ತು.

Mr. ಸ್ಪೀಕರ್ - ನಾನು ಕೂಡ ಅದನ್ನೇ ಸಲಹೆ ಮಾಡಿದೆ. 25, 35, 37, 38 ಮತ್ತು ಈಗಿನ ತೀರ್ಮಾನ ಎಲ್ಲವನ್ನೂ ಒಟ್ಟಿಗೇ ಚರ್ಚೆಗೆ ತೆಗೆದುಕೊಳ್ಳಬಹುದು.

ಮೊಹಮ್ಮದ್ ಇಮಾಂ - ನಾವೂ ನಮ್ಮ ತೀರ್ಮಾನಗಳನ್ನು ಮಂಡಿಸಬಹುದೆ ?

ಸ್ಪೀಕರ್ - ಈ ವಿಷಯದ ಮೇಲೆ ತೀರ್ಮಾನಗಳನ್ನು ಕಳಿಸದೇ ಇರುವ ಸದಸ್ಯರು ತಮ್ಮ ತೀರ್ಮಾನಗಳನ್ನು ಮಂಡಿಸಬಹುದು. ಇಚ್ಛಿಪಟ್ಟಲ್ಲಿ ಅವರು ಈ ತೀರ್ಮಾನದ ಬಗ್ಗೆ ಮಾತನಾಡಬಹುದು.

ಇಮಾಂ - ನಾನು ನನ್ನ ಸ್ನೇಹಿತ ಸ್ವಾಮಿದೊರೈ ಮಂಡಿಸಿದ ತೀರ್ಮಾನವನ್ನು ಬೆಂಬಲಿಸುತ್ತಿದ್ದೇನೆ. ಇದಕ್ಕೆ ಸಂಬಂಧಪಟ್ಟಂತೆ, ಪ್ರಸ್ತುತ ಪಾನನಿಷೇಧ ನೀತಿಯ ಪುನರ್ ಪರಿಶೀಲನೆಗೆ, ನಾನೂ ಕೂಡ ಒಂದು ತೀರ್ಮಾನವನ್ನು ಮುಂದಿಟ್ಟಿದ್ದೇನೆ.

ಎ. ಭೀಮಪ್ಪ ನಾಯ್ಕ - ನಿನ್ನೆ ನೀವು ಪಾನ ನಿಷೇಧದಲ್ಲಿ ಬೆಂಗಳೂರಿಗೆ ಪ್ರಾಶಸ್ತ್ಯ ನೀಡಲು ಇಚ್ಛಿಸಿದ್ದಿರಿ.

ಜೆ. ಇಮಾಂ - ಅದು ಮತ್ತೊಂದು ಸಂದರ್ಭದಲ್ಲಿ. ನಿಮ್ಮ ಮುಖ್ಯಮಂತ್ರಿಗಳು ಚಿತ್ರದುರ್ಗವನ್ನು ತಂಪು ಮಾಡಲು ಇಚ್ಛಿಸಿದ್ದರು.

ಮಾನ್ಯರೆ, ಅನಾದಿ ಕಾಲದಿಂದಲೂ ಕುಡಿತದ ಅಭ್ಯಾಸವನ್ನು ಕೆಟ್ಟದ್ದೆಂದು ಪರಿಗಣಿಸಲಾಗಿದೆ. ಅದೊಂದು ಸಾಮಾಜಿಕ ಸಮಸ್ಯೆಯಾಗಿದ್ದು, ಅದರ ನಿವಾರಣೆಗೆ, ಗಂಭೀರವಾದ ಮತ್ತು ನಿರಂತರ ಪ್ರಯತ್ನಗಳನ್ನು ಮಾಡಲಾಗಿದೆ ಮತ್ತು ಮಾಡಲಾಗುತ್ತಿದೆ. ಈ ಸಾಮಾಜಿಕ ಸಮಸ್ಯೆ ಸಮಾಜದಿಂದ ಕಣ್ಮರೆಯಾಗಬೇಕೆಂಬುದರ ಬಗ್ಗೆ ಎರಡು ಮಾತಿಲ್ಲ. ಈ ಸಮಸ್ಯೆಯ ನಿವಾರಣೆಗೆ ಭಾರತದಲ್ಲೇ ಅಲ್ಲದೆ ಇತರ ರಾಷ್ಟ್ರಗಳಲ್ಲೂ ಪ್ರಯತ್ನಗಳನ್ನು ಮಾಡಲಾಗಿದೆ.

ಶ್ರೀ ಚೆನ್ನಗರಾಮಯ್ಯ (ಕೊರಟಗೆರೆ, ಮಧುಗಿರಿ - ಹಿಂದುಳಿದ ಜಾತಿ) - ಪಾಕಿಸ್ತಾನ ಪಾನನಿಷೇಧ ಜಾರಿಗೆ ತಂದಿದೆ.

ಜೆ.ಇಮಾಂ - ಮಾನ್ಯರೇ, ನಾನು ಸುಧಾರಿಸಿದ್ದೇನೆ. ಇದುವರೆಗೂ ಯಾವುದೇ ವಿಸ್ತರಣೆ ಆಗಿಲ್ಲ. ಮಾನ್ಯರೇ, ಈಗ ನಾವು, ಇದುವರಗೆ ಕೈಗೊಂಡ ಕ್ರಮಗಳು ಸಫಲವಾಗಿವೆಯೇ ಇಲ್ಲವೆ, ಅಂತಹ ಕ್ರಮಗಳು ಜನರಿಗೆ ಮತ್ತು ಸಮಾಜಕ್ಕೆ ಅನುಕೂಲವಾಗಿವೆಯೇ ಎಂದು ತಾಳ್ಮೆಯಿಂದ ಪರಿಶೀಲಿಸಬೇಕಾಗಿದೆ. ಅಂತಹ ಎಲ್ಲಾ ಪರಿಹಾರ ಕ್ರಮಗಳಲ್ಲಿ, ನೀವು ಕಠಿಣವಾದ ದೃಷ್ಟಿಯಿಂದ ಪರಿಶೀಲಿಸಬೇಕು ಮತ್ತು ಅದನ್ನು ಒಂದು ಪಕ್ಷದ ವಿಷಯವಾಗಿ ಪರಿಗಣಿಸಬಾರದು.

ಒಂದು ವೇಳೆ ಇದುವರೆಗೆ ಕೈಗೊಂಡ ಕ್ರಮಗಳು ಜನರಿಗೆ ಅನುಕೂಲಕಾರಿಯಾಗಿದೆ ಎಂದು ನಾವೆಲ್ಲರೂ ಭಾವಿಸುವುದಾದರೆ, ಜನರ ಏಳಿಗೆಗೆ ಸಹಾಯಕಾರಿಯಾಗಿವೆ, ಆರ್ಥಿಕ ಏಳಿಗೆಗೆ ಸಹಾಯಕಾರಿಯಾಗಿವೆ ಎಂದಾದರೆ, ಪಾನ ನಿಷೇಧ ನೀತಿಯನ್ನು ಎತ್ತಿ ಹಿಡಿಯುವಲ್ಲಿ ನಾನು ಕೂಡ ನಿಮ್ಮಲ್ಲಿ ಒಬ್ಬನಾಗಿದ್ದೇನೆ. ಇದಕ್ಕೆ ಬದಲಾಗಿ, ನೀವು ಪ್ರಸ್ತುತ ಪದ್ಧತಿ ಸಮಾಜಕ್ಕೆ ಅಪಾಯಕಾರಿ ಎಂದು ನಂಬಿದ್ದರೆ, ಆಗ ನೀವು ನೀತಿಯನ್ನು ಪುನರ್ ವಿಮರ್ಶೆಮಾಡಿ ಬೇರೆ ಪರಿಹಾರ ಕ್ರಮಗಳನ್ನು ಕೈಗೊಳ್ಳಬೇಕೆಂದು ನಾನು ಭಾವಿಸುತ್ತೇನೆ. ನಾನು ಅನಿರ್ಬಂಧಿತ ಅನುಮತಿಯನ್ನು ಪ್ರೋತ್ಸಾಹಿಸುವುದಿಲ್ಲ ಮತ್ತು ಅನುಭೋಗಿಗಳಿಗೆ ಸ್ವಾತಂತ್ರ್ಯ ನೀಡಬೇಕೆಂದು ಹೇಳುವುದಿಲ್ಲ. ಆದರೆ ನಾವು ಪರಿಗಣಿಸಬೇಕಾದ ವಿಷಯವೇನೆಂದರೆ ಕುಡಿತ ಕಡಿಮೆ ಮಾಡಲು ನಿಯಂತ್ರಿಸಲು ನಾವು ಅನುಸರಿಸಬೇಕಾದ ಕ್ರಮಗಳು, ಪ್ರಸ್ತುತ ಪದ್ಧತಿಯಲ್ಲಿ, ವಿರೋಧದ ಹೆದರಿಕೆಯಿಲ್ಲದೆ ಸಮಾಜ ಸಾಕಷ್ಟು ಅನುಭವಿಸಿದೆಯೆಂದು ನಾನು ಹೇಳಬಹುದು. ಅತಿ ದೊಡ್ಡ ತೊಂದರೆ ಎಂದರೆ ಕಾನೂನು ಬಾಹಿರವಾಗಿ ಮದ್ಯ ತಯಾರಿಕೆಗೆ ಇದು ಸಾಕಷ್ಟು ಅವಕಾಶ ನೀಡಿದೆ. ಅಧಿಕ ಪ್ರಮಾಣದಲ್ಲಿ ಕಾನೂನು ಬಾಹಿರವಾಗಿ ಮದ್ಯ ತಯಾರಿಕೆ ನಡೆಯುತ್ತಿದೆ ಮತ್ತು ಯಾವುದೇ ನೀತಿ ಅಥವಾ ಸರ್ಕಾರ ಎಷ್ಟು ಪ್ರಯತ್ನಿಸಿದರೂ ಅದನ್ನು ನಿಯಂತ್ರಿಸಲು ಅಥವಾ ನಿರ್ಬಂಧಿಸಲು ಸಾಧ್ಯವಾಗಿಲ್ಲ. ಇದೊಂದು ಸಾಮಾನ್ಯ ಸಂಗತಿಯಾಗಿದೆ ಮತ್ತು ಆ ನಿರ್ದಿಷ್ಟ ವಿಷಯದಲ್ಲಿ ಗ್ರಾಮಸ್ಥರು ಬಹಳಷ್ಟು ನೊಂದಿದ್ದಾರೆ, ಎಂದು ನಾನು ಹೇಳುತ್ತೇನೆ. ಹೆಚ್ಚಿನ ಅಂಶವೆಂದರೆ, ಅವರು ಉತ್ಪಾದಿಸುತ್ತಿರುವ ಸರಕು, ಧನಾತ್ಮಕವಾಗಿ ಆರೋಗ್ಯಕ್ಕೆ ಹಾನಿಕರವೆಂದು ದೃಢೀಕೃತವಾಗಿದೆ ಮತ್ತು ಜನರಿಗೆ ಅಪಾಯಕಾರಿಯಾಗಿದೆ. ಪಾನ ನಿಷೇಧ ಜಾರಿಗೊಳಿಸುವ ಮೊದಲು, ಅನುಭೋಗಿ ಆರೋಗ್ಯಕರ ಮದ್ಯ ಪಡೆಯುತ್ತಿದ್ದು, ಅದು ನಿಯಂತ್ರಿತವಾಗಿತ್ತು. ಆದರೆ ಈಗ, ಅಕ್ರಮ ತಯಾರಿಕೆಯಿಂದಾಗಿ, ಮದ್ಯ ಬಹಳಷ್ಟು ಅಪಾಯಕಾರಿಯಾಗಿದೆ ಮತ್ತು ವೈಯಕ್ತಿಕ ಮಾಹಿತಿ ಪ್ರಕಾರ ಅನೇಕರು ತಮ್ಮ ಆರೋಗ್ಯ ಹಾಳು ಮಾಡಿಕೊಂಡಿದ್ದಾರೆ.

ವಿಪರ್ಯಾಸವೆಂದರೆ, ಅನುಭೋಗಿಗಳ ಸಂಖ್ಯೆ ಹೆಚ್ಚಿದೆಯೆಂದು ನಾನು ಹೇಳಬೇಕಾಗಿದೆ. ಪಾನ ನಿಷೇಧವನ್ನು ಜಾರಿಗೆ ತರುವ ಮೊದಲು, ಒಂದು ಮನೆಯಲ್ಲಿ ಒಬ್ಬನು ಕುಡಿತದ ಚಟಕ್ಕೆ ಬಲಿಯಾಗಿದ್ದು, ಆದರೆ ಈಗ, ಮುಕ್ತವಾಗಿ ಲಭ್ಯವಿರುವುದರಿಂದ ಪ್ರತಿಯೊಂದು ಮನೆಯಲ್ಲೂ ದೊಡ್ಡವರು ಮತ್ತು ಸಣ್ಣವರು ಮದ್ಯ ಸೇವಿಸುತ್ತಾರೆಂಬುದು ಒಂದು ಸಾಮಾನ್ಯ ಸಂಗತಿಯಾಗಿದೆ. ಏಕೆಂದರೆ ಅದು ಸುಲಭವಾಗಿ ಸಿಗುತ್ತದೆ. ಹಿಂದೆ ಒಬ್ಬ ಮದ್ಯದ ಅಂಗಡಿಯವರೆಗೆ ನಡೆದು ಹೋಗಬೇಕಾಗಿತ್ತು ಇಲ್ಲವೇ ಸೇಂದಿ ಅಂಗಡಿಗೆ ಹೋಗಬೇಕಿತ್ತು. ಆದರೆ ಈಗ ಪಕ್ಕದ ಮನೆಯಲ್ಲಿ ಅದು ಲಭ್ಯವಿರುತ್ತದೆ. ಹಿಂದೆ ಈ ಕುಡಿತದ ಸಮಸ್ಯೆ ಕೆಲವು ಪಂಗಡಗಳಿಗೆ ಮಾತ್ರ ಸೀಮಿತವಾಗಿತ್ತು. ನಾನು ನನ್ನ ಅನುಭವದಿಂದ ಹೇಳುವುದಾದರೆ, ಅದು ಈಗ ಪಂಗಡದಿಂದ ಪಂಗಡಕ್ಕೆ ವಿಸ್ತರಿಸುತ್ತಿದೆ.

ಮಾನ್ಯ ಸಭಾಪತಿ:- ಒಂದು ವೇಳೆ ನಿಮ್ಮ ಸಮಿತಿಯ ಶಿಫಾರಸ್ಸುಗಳನ್ನು ಜಾರಿಗೆ ತಂದಿದ್ದ ಆದರೆ ಈ ರೀತಿ ಆಗುತ್ತಿರಲಿಲ್ಲ.

ಮಹಮ್ಮದ್ ಇಮಾಂ:- ಮಾಸ್ತರೇ ನೀವು ನನ್ನ ವೈಯಕ್ತಿಕ ಅಭಿಪ್ರಾಯ ಕೇಳಿದರೆ, ಅದೊಂದು ಸಾಮಾಜಿಕ ಸಮಸ್ಯೆಯಾಗಿದೆ ಮತ್ತು ಶಾಸನಗಳಿಂದ ಒಂದು ಸಾಮಾಜಿಕ ಸಮಸ್ಯೆಯನ್ನು ನಿವಾರಿಸಲು ಸಾಧ್ಯವಿಲ್ಲ ಎಂದು ನನ್ನ ಭಾವನೆ. ನಾವು ಅನೇಕ ಸಾಮಾಜಿಕ ಸಮಸ್ಯೆಗಳನ್ನು ಸಮಾಜದಲ್ಲಿ ಹೊಂದಿದ್ದೇವೆ ಮತ್ತು ಈ ಎಲ್ಲಾ ಸಾಮಾಜಿಕ ಸಮಸ್ಯೆಗಳನ್ನು ಶಿಕ್ಷಣದ ಮೂಲಕ, ಪ್ರಚಾರದ ಮೂಲಕ ನಿವಾರಿಸಬೇಕು ಮತ್ತು ಸ್ವಇಚ್ಛೆಯಿಂದ ದೂರೀಕರಿಸಬೇಕು. ಶಾಸನದ ಮೂಲಕ ಮೂಡಿದ ಯಾವುದೇ ರೀತಿಯ ಒತ್ತಾಯ ನಿರೀಕ್ಷಿತ ಪರಿಣಾಮ ಬೀರಲಾರದು. ನಾವು ಅನೇಕ ಕಾನೂನುಗಳನ್ನು ಹೊಂದಬಹುದು. ಕಾನೂನುಗಳ ಸಂಖ್ಯೆ ಹೆಚ್ಚಾದಂತೆ, ಪರಿಣಾಮ ಕಡಿಮೆಯಾಗುತ್ತದೆ. ಒಂದು ವೇಳೆ ನೀವು ನನ್ನ ವೈಯಕ್ತಿಕ ಅಭಿಪ್ರಾಯ ಕೇಳಿದರೆ, ಈ ಎಲ್ಲಾ ಸಾಮಾಜಿಕ ವಿಷಯಗಳಲ್ಲಿ ಸರ್ಕಾರ ಮಧ್ಯ ಪ್ರವೇಶ ಮಾಡಬಾರದು ಇಲ್ಲವೆ ಸಾಮಾಜಿಕ ಸಮಸ್ಯೆಗಳ ಪರಿಹಾರವನ್ನು ಸಮಾಜದ ಪಾಲಿಗೆ ಬಿಡಬೇಕೆಂದು ನಾನು ಬಯಸುತ್ತೇನೆ. ಒಂದು ಭಾವನಾತ್ಮಕ ಚಳುವಳಿಯಿತ್ತು. ಅವರು ಒಳ್ಳೆಯ ಕಾರ್ಯ ಮಾಡುತ್ತಿದ್ದರು. ಶಿಕ್ಷಣ, ತರಬೇತಿ, ಮೂಲಕ ಮಾತ್ರ ನೀವು ಈ ಎಲ್ಲಾ ಸಮಸ್ಯೆಗಳನ್ನು ನಿವಾರಿಸಬಹುದು.

ಮಾನ್ಯ ಸಭಾಪತಿ:- ಈಗಲೂ ಅವರು ರೂ.2000 ಅದಕ್ಕಾಗಿ ತೆಗೆದಿರಿಸಿದ್ದಾರೆ.

ಇಮಾಂ:- ಪಾನ ನಿಷೇಧ ಭಾವನೆಗಾಗಿ, ಇದೇ ಅದರ ಫಲಿತಾಂಶ.

ಶ್ರೀ ಚೆನ್ನಿಗರಾಮಯ್ಯ:- ನೀವೇಕೆ ನಿಧಾನವಾದ ಪಾನ ನಿಷೇಧವನ್ನು ಸೂಚಿಸಿದ್ದಿರಿ ?

ಇಮಾಂ:- ನಿಮ್ಮನ್ನು ತೃಪ್ತಿ ಪಡಿಸಲು (ನಗು)

ಚೆನ್ನಗರಾಮಯ್ಯ:- ನೀವು ನಿಮ್ಮ ಶಿಫಾರಸ್ಸಿಗೇ ಹಿಂದಕ್ಕೆ ಹೋಗುತ್ತಿದ್ದೀರೇನು ?

ಇಮಾಂ: - ನಾನು ಹಿಂದಕ್ಕೆ ಹೋಗುತ್ತಿಲ್ಲ.

ಇನ್ನೊಂದು ಆಶ್ಚರ್ಯಕರ ಸಂಗತಿ ನಮ್ಮ ರಾಜ್ಯದಲ್ಲಿ ಅಸ್ತಿತ್ವದಲ್ಲಿರುವುದೆಂದರೆ ಒಂದು ವೇಳೆ ಇಡೀ ರಾಜ್ಯದಲ್ಲಿ ಪಾನ ನಿಷೇಧ ಜಾರಿಗೊಂಡಿದ್ದರೆ, ಆಗ ನಾವು ಪರಿಣಾಮ ಗಮನಿಸಬಹುದಿತ್ತು. ಆದರೆ, ಅರ್ಧದಷ್ಟು ರಾಜ್ಯ ಹಸಿಯಾಗಿದ್ದರೆ, ಅರ್ಧ ರಾಜ್ಯಬರಡಾಗಿದೆ ಮತ್ತು ಭವಿಷ್ಯದಲ್ಲಿ ಬರಡು ಪ್ರದೇಶದಲ್ಲಿ ಪಾನ ನಿಷೇಧ ವಿಸ್ತರಿಸುವ ಅವಕಾಶವಲ್ಲ. ಇದು ನಮ್ಮ ನೀತಿಯನ್ನು ಪುನರ್ ವಿಮರ್ಶೆ ಮಾಡುವ ಅವಶ್ಯಕತೆ ಇದೆಯೇ ಎಂಬುದರ ಬಗ್ಗೆ ನಾವು ವಿಚಾರ ಮಾಡುವಂತೆ ಮಾಡಿದೆ. ಇದೊಂದು ಭೇದ ತೋರುವ ವಿಷಯ. ಸಂವಿಧಾನದಲ್ಲಿ ಇಂತಹ ಬೇಧ ನಿಷೇದಿಸಲ್ಪಟ್ಟಿದೆ.

ಪಲನಿಯಪ್ಪನ್: (ಅಲ್‌ಸೂರ್) ಹೈಕೋರ್ಟಿನಲ್ಲಿ ರಿಟ್ ಹಾಕಿ.

ಶ್ರೀ ಜೆ. ಮಹಮ್ಮದ್ ಇಮಾಂ:- ಇದು ಇಂದಿನ ನಿಯಮ ರಾಜ್ಯ ಅರ್ಧ ಭಾಗದಲ್ಲಿ ವಾಸಿಸುವ ಜನ, ಇನ್ನರ್ಧ ರಾಜ್ಯದಲ್ಲಿ ವಾಸಿಸುತ್ತಿರುವ ಜನರಿಂದ ಭೇದಕ್ಕೊಳಪಟ್ಟಿದ್ದಾರೆ ಇದೊಂದು ಸಂವಿಧಾನಕ್ಕೊಳಪಟ್ಟ ವಿಷಯವಾಗಿದ್ದು, ಅಂತಹ ಭೇದ ಮಾಡುವ ವಿಷಯದ

ಬಗ್ಗೆ ಗಮನಹರಿಸುವುದು ಅವಶ್ಯಕ, ಅಂತಹ ಭೇದ ಸೂಕ್ತವೇ ಅಥವಾ ಅದನ್ನು ಜಾರಿಗೆ ತರಬಹುದೆ ಎಂದು ಗಮನಿಸಬೇಕು. ನೀವು ಅರ್ಧಭಾಗದಲ್ಲಿ ಕುಡಿತವನ್ನು ಪ್ರೋತ್ಸಾಹಿಸಿದ್ದೀರಿ, ಇನ್ನೊಂದು ಭಾಗದಲ್ಲಿ ಕುಡಿತಕ್ಕೆ (ಅದೇ ರಾಜ್ಯಕ್ಕೆ) ನೀವು ದಂಡ ವಿಧಿಸಿ, ಸೆರೆಮನೆಗೆ ಜನರನ್ನು ಕಳುಹಿಸಿದ್ದೀರಿ. ಇದು ಸ್ಪಷ್ಟವಾಗಿ ಭೇದವಾಗಿದೆ ಮತ್ತು ಅದು ಮುಕ್ತವಾದ ಪರಿಗಣನೆಗೆ ಬಂದಿದೆ ಮತ್ತು ಸರ್ಕಾರ ಅಂತಹ ವಿಷಯವನ್ನು ಪರಿಚಯಿಸಬಹುದೆ, ಅದು ಸಂವಿಧಾನಕ್ಕೆ ವಿರುದ್ಧವಾಗಿಲ್ಲವೆ ಎಂದು ಯೋಚಿಸಬೇಕು. 6 ವರ್ಷಗಳು ಕಳೆದಿವೆ ಹಾಗೂ ಇದು ಅದರ ಪರಿಣಾಮ. ಜನತೆ ತೃಪ್ತರಾಗಿಲ್ಲ ಮತ್ತು ನಾವು ತೃಪ್ತರಾಗಿಲ್ಲ. ನಾವು ಭಾವನೆಗಳಿಂದ ಸಲಹೆ ಪಡೆಯಬಾರದು. ಆದ್ದರಿಂದ ಸರ್ಕಾರ ತನ್ನ ಭವಿಷ್ಯದ ನೀತಿ ಹೇಗಿರಬೇಕೆಂದು ನಿರ್ಧರಿಸಲು ಸೂಕ್ತ ಸಮಯ ಬಂದಿದೆ ಎಂದು ಮತ್ತು ಭವಿಷ್ಯದಲ್ಲಿ ಯಾವ ಕ್ರಮ ಅನುಸರಿಸಬೇಕೆಂದು ತಿಳಿಯಲು ಸೂಕ್ತ ಕಾಲ ಎಂದು ಭಾವಿಸುತ್ತೇನೆ. ನೀವು ನನ್ನ ಅಭಿಪ್ರಾಯ ಕೇಳಿದರೆ...

ಚೆನ್ನಿಗರಾಮಯ್ಯ:- ಅದು ನಿಮ್ಮ ಅಭಿಪ್ರಾಯವೋ ಅಥವಾ ಪ್ರಜಾ ಸೋಷಲಿಸ್ಟ್ ಪಕ್ಷದ್ದೋ ?

ಇಮಾಂ:- ನಾನು ನಾಯಕ ಎಂಬುದನ್ನು ನೀವು ಮರೆತಿದ್ದೀರಿ. (ನಗು) ಹಿಂದಿನ ಸರ್ಕಾರದ ಸಫಲತೆಯ ಆಧಾರದ ಮೇಲೆ ಈ ಹೇಳಿಕೆ ನೀಡಲು ನಾನು ಪ್ರೇರಣೆ ಪಡೆದಿದ್ದೇನೆ. ನಾನು ಈಗ ತಾನೆ ಆಧಾರ ಮತ್ತು ಅಂಕಿ ಅಂಶಗಳ ಮೇಲೆ ನಿಮಗೆ ತೋರಿಸಿದ್ದೇನೆ. ಹಿಂದಿನ ಸರ್ಕಾರ ಅಳವಡಿಸಿದ ನೀತಿಯಿಂದಾಗಿ ಅನುಭೋಗ ಇಳಿಮುಖವಾಗಿದೆಯೆಂದು. ಅದನ್ನು ಅಲ್ಲಗೆಳೆಯುವಂತಿಲ್ಲ. ನಾನು ಅಂತಹ ಅಂಕಿ ಅಂಶಗಳನ್ನು ಸಂಗ್ರಹಿಸಿದ್ದೇನೆ ಮತ್ತು ಹಿಂದಿನ ನೀತಿಯ ತರಹ ನೀತಿಯನ್ನೋ ಇನ್ನು ಮುಂದೆ ಅನುಸರಿಸಿದರೆ ಈ ಸಾಮಾಜಿಕ ಸಮಸ್ಯೆ ನಿವಾರಿಸುವಲ್ಲಿ ಸ್ವಲ್ಪ ಯಶಸ್ಸು ಸಾಧಿಸಬಹುದೆಂದು ನಾನು ಭಾವಿಸುತ್ತೇನೆ. ಮಾಡಬೇಕಾದುದು ಇಷ್ಟೆ. ನಾವು ರಾಜ್ಯ ಸರ್ಕಾರಕ್ಕೆ ಸಾಕಷ್ಟು ಆದಾಯ ತರಬೇಕು ಮತ್ತು ಸಾಮಾನ್ಯ ವ್ಯಕ್ತಿ ಅಥವಾ ಜನರು ಯಾರು ಕುಡಿತದ ಚಟಕ್ಕೆ ಬಲಿಯಾಗಿದ್ದಾರೋ ಅವರಿಗೆ ಮದ್ಯ ಅಥವಾ ಮಾದಕ ಪಾನೀಯಗಳು ಸುಲಭವಾಗಿ ಸಿಗದಂತೆ ನೋಡಿಕೊಳ್ಳಬೇಕು. ಇತರ ರಾಷ್ಟ್ರಗಳಲ್ಲಿ ತೆರಿಗೆಯ ಪದ್ಧತಿ ಬಳಸಲಾಗಿದೆ ಮತ್ತು ಅದು ಫಲಕಾರಿಯಾಗಿದೆ. ಉದಾಹರಣೆಗೆ ನಾನು ಇಂಗ್ಲೆಂಡಿನಲ್ಲಿದ್ದೆ. ಅಲ್ಲಿ ಸಿಗರೇಟು, ಮದ್ಯ ಹಾಗೂ ವಿಲಾಸಿ ಸರಕುಗಳ ಮೇಲೆ ವಿಧಿಸಿದ ತೆರಿಗೆಗಳು ಅತ್ಯಧಿಕ, ಸುಮಾರು 200% ಅವುಗಳು ಸಾಮಾನ್ಯ ವ್ಯಕ್ತಿಗೆ ಎಟಕುವುದಿಲ್ಲ. ಕೆಲವೇ ಜನರು ಮಾತ್ರ ಅಧಿಕ ಕುಡಿತಕ್ಕೆ ತೊಡಗುತ್ತಾರೆ ಮತ್ತೆ ನಾವು ಮದ್ಯದಂಗಡಿಗಳ ಸಂಖ್ಯೆಯನ್ನು ನಿಯಂತ್ರಿಸಬಹುದು. ನೀವು ಅಂಗಡಿಗಳ ಸಂಖ್ಯೆಯನ್ನು ಹೆಚ್ಚಿಸುತ್ತಾ ಇಲ್ಲವೆ ಕಡಿಮೆ ಮಾಡುತ್ತಾ ಹೋಗಬಹುದು ಮತ್ತು ಭೋಗಿ ಸರಕುಗಳ ಬೆಲೆಯನ್ನು ಹೆಚ್ಚಿಸಬಹುದು. ಇಂತಹ ವಿಧಾನಗಳು, ಮದ್ಯವನ್ನು ಎಲ್ಲೆಂದರಲ್ಲಿ ಪಡೆಯುವುದನ್ನು ಕಠಿಣವಾಗಿಸುತ್ತವೆ. ಅದು ನಿರೀಕ್ಷಿತ ಪರಿಣಾಮ ಹೊಂದಿರುತ್ತದೆ ಮತ್ತು ಈ ಅನಿಷ್ಟವನ್ನು ಸ್ವಲ್ಪ ಮಟ್ಟಿಗೆ ನಿವಾರಿಸಬಹುದು. ಮದ್ಯದ ಮೇಲೆ ತೆರಿಗೆ ವಿಧಿಸುವಿಕೆ ಮತ್ತು ಹೆಚ್ಚಿಸುವಿಕೆ ಸಂಬಂಧಿಸಿದಂತೆ, ನಾವು ವಿರೋಧಿಗಳಲ್ಲವೆಂದು ನಾನು ಹೇಳುತ್ತೇನೆ. ಈ ಅನಿಷ್ಟ ನಿವಾರಿಸುವಲ್ಲಿ ಅದೊಂದು ಅವಶ್ಯಕ ಪರಿಹಾರವಾಗಿದೆ. ಅಂತಹ ಎಲ್ಲಾ ಪರಿಹಾರಗಳಲ್ಲಿ ಸರ್ಕಾರ ನಮ್ಮ ಸಹಕಾರ ನಿರೀಕ್ಷಿಸಬಹುದು. ಆದ್ದರಿಂದ, ಇದರ ಆಳಕ್ಕೆ ಹೋಗುವ ಬದಲು,

ಪ್ರಸ್ತುತ ಪಾನ ನಿಷೇಧ ನೀತಿ ಹೇಗೆ ಕರ್ತವ್ಯ ನಿರ್ವಹಿಸುತ್ತಿದೆ ಅದು ಫಲಕಾರಿಯಾಗಿದೆಯೇ ಅಥವಾ ಇಲ್ಲವೆ ಎಂಬುದನ್ನು ಕಂಡು ಹಿಡಿಯಲು ಸರ್ಕಾರಕ್ಕೆ ಸಕಾಲ ಒದಗಿ ಬಂದಿದೆಯೆಂದು ನಾನು ಹೇಳುತ್ತೇನೆ ಮತ್ತು ಒಂದು ವೇಳೆ ಅವಶ್ಯಕವಿದ್ದರೆ ಒಂದು ಸಮಿತಿಯನ್ನು ರಚಿಸುವುದು ಅವರ ಕರ್ತವ್ಯವಾಗಿದೆ ಮತ್ತು ವಿಚಾರಣೆ ಮಾಡುವುದು, ಎಲ್ಲಾ ಅಂಶಗಳನ್ನು ಅವರು ಪರಿಗಣಿಸಲಿ ಮತ್ತು ಅವಶ್ಯಕವಿದ್ದರೆ ರಾಷ್ಟ್ರದ ಹಿತದೃಷ್ಟಿಯಿಂದ ಅವರು ತಮ್ಮ ನೀತಿಯನ್ನು ಪುನರ್ ವಿಮರ್ಷಿಸಬಹುದು.

ಈ ಎಲ್ಲಾ ಅಭಿಪ್ರಾಯಗಳೊಂದಿಗೆ, ನಾನು ಸ್ವಾಮಿ ದೊರೈ ಪ್ರತಿಪಾದಿಸಿದ ವಾದವನ್ನು ಬೆಂಬಲಿಸುತ್ತಿದ್ದೇನೆ.

(ಸಂಗ್ರಹ: ವಿಧಾನ ಸಭಾ ಕಲಾಪ ದಿನಾಂಕ 8.4.1953)

## ರಾಜ್ಯದಲ್ಲಿ ಶೈಕ್ಷಣಿಕ ಸುಧಾರಣೆಗಳ ಮೇಲಿನ ಚರ್ಚೆ

ಮಾನ್ಯ ಸಭಾಧ್ಯಕ್ಷರು - ರಾಜ್ಯದಲ್ಲಿ ಶೈಕ್ಷಣಿಕ ಪದ್ಧತಿಯನ್ನು ಪರಿಗಣಿಸಬಹುದಾಗಿದೆ.

ಮಾನ್ಯ ಜೆ. ಮಹಮ್ಮದ್ ಇಮಾಂ (ಜಗಳೂರು) - ಮಾನ್ಯರೆ, ನಾನು ಈ ಹಿಂದೆ ಒಂದು ಸಂದರ್ಭದಲ್ಲಿ ಅಂತಹ ಹೇಳಿಕೆಗಳನ್ನು ಮುದ್ರಿಸಿ, ಸದಸ್ಯರಲ್ಲಿ ಹಂಚಿಕೆ ಮಾಡಬೇಕೆಂದು ವಿನಿಂತಿಸಿಕೊಂಡಿದ್ದೆ. ಏಕೆಂದರೆ, ಹಾಗೆ ಮಾಡಿದರೆ ಸದಸ್ಯರು ಓದಲು ಸಾಧ್ಯವಾಗುತ್ತದೆ ಮತ್ತು ನ್ಯಾಯ ದೊರಕಿಸಿಕೊಡಲು ಸಾಧ್ಯವಾಗುತ್ತದೆ. ಈ ಸಭೆಯಲ್ಲಿ ನೀಡಲ್ಪಟ್ಟ ಎಲ್ಲಾ ವಿಚಾರಗಳನ್ನು ಅರ್ಥಮಾಡಿಕೊಳ್ಳಲು ಅವರಿಗೆ ಸಾಧ್ಯವಾಗುತ್ತದೆ. ನಮಗೆ ಈಗ ಭವಿಷ್ಯದ ಶೈಕ್ಷಣಿಕ ನೀತಿಯ ಬಗ್ಗೆ ನಮ್ಮ ಅಭಿಪ್ರಾಯ ಹೇಳಬೇಕೆಂದು ಕೇಳಲಾಗಿದೆ. ರಾಜ್ಯದಲ್ಲಿ ಶಿಕ್ಷಣ ಮುಂದುವರೆಸಲು ಸರ್ಕಾರ ಏನು ಮಾಡಬೇಕೆಂದು ಕೇಳಲಾಗಿದೆ, ಕನಿಷ್ಟ ಅದನ್ನು ಹೇಗೆ ಹೆಚ್ಚು ಉಪಯುಕ್ತವಾಗಿಸಬಹುದು.

ಮಾನ್ಯರೆ, ನಮ್ಮ ಶೈಕ್ಷಣಿಕ ಸೌಲಭ್ಯಗಳು ಸಮರ್ಪಕವಾಗಿಲ್ಲವೆಂದು ಮತ್ತು ತುಂಬಾ ಕಡಿಮೆ ಇದೆಯೆಂದು ಪ್ರತಿಯೊಬ್ಬರೂ ಅರಿತುಕೊಂಡಿದ್ದಾರೆ. ಮಂತ್ರಿಗಳು ಹೇಳಿದಂತೆ, ಪ್ರಸ್ತುತ ಶಿಕ್ಷಣ ಪದ್ಧತಿ ದೋಷಪೂರಿತವಾಗಿದೆಯೆಂದೂ ಅರಿತುಕೊಳ್ಳಲಾಗಿದೆ ಮತ್ತು ಅದು ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತಿಲ್ಲ ಅಥವಾ ಶಿಕ್ಷಕರಿಗೆ ರಾಜ್ಯದ ಸಬಲ ಪ್ರಜೆಗಳಾಗಲೂ ಸಹಾಯಮಾಡುತ್ತಿಲ್ಲ ಮಂತ್ರಿಗಳು ಹೇಳಿದಂತೆ, ಉನ್ನತ ಶಿಕ್ಷಣ ಪಡೆಯುವ ಒಂದೇ ಉದ್ದೇಶವೆಂದರೆ ಸರ್ಕಾರಿ ಸೇವೆಯನ್ನು ಸೇರುವುದೇ ಹೊರತು ಬೇರೇನೂ ಅಲ್ಲ. ಪ್ರಸ್ತುತ ಶಿಕ್ಷಣ ಪದ್ಧತಿಯನ್ನು ಪರಿಷ್ಕರಿಸಬೇಕೆಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ ಮತ್ತು ಯಾವ ಬದಲಾವಣೆ ತರಬೇಕು ಎಂದು ಪರಿಶೀಲಿಸಬೇಕು ಮತ್ತು ಅದನ್ನು ಹೇಗೆ ಹೆಚ್ಚು ಉಪಯುಕ್ತವನ್ನಾಗಿ ಮಾಡಬೇಕು. ನಾವು ಹಲವು ಸಮಸ್ಯೆಗಳಿಗೆ ಸಿಲುಕಿಕೊಂಡಿದ್ದೇವೆ.

ನಂತರ ನಡೆದ ಚರ್ಚೆಯಲ್ಲಿ ಮಾನ್ಯ ಶ್ರೀ ಜೆ. ಮಹಮ್ಮದ್ ಇಮಾಂ ಮಾನ್ಯ ಎ.ಜಿ. ರಾಮಚಂದ್ರರಾವ್ ಹೇಳಿದ ಅಭಿಪ್ರಾಯವನ್ನು ಬೆಂಬಲಿಸಿ ಹೀಗೆ ಹೇಳಿದರು. ನಾನು ಕೂಡ ಅದೇ ಹೇಳಿಕೆ ನೀಡಬೇಕೆಂದುಕೊಂಡಿದ್ದೆ. ಒಂದು ವೇಳೆ ಸರ್ಕಾರ ನಿರ್ದಿಷ್ಟ ಸೂಚನೆ ಸಿದ್ಧಪಡಿಸಿಟ್ಟುಕೊಂಡಿದ್ದರೆ, ಒಂದು ವೇಳೆ ಅವರು ಅದನ್ನು ಈ ಸಭೆಯ ಮುಂದೆ ಹಾಜರು ಪಡಿಸಿದ್ದರೆ, ಆಗ ನಾವು ನಮ್ಮ ಗಮನವನ್ನು ಆ ಸೂಚನೆಗಳ ಮೇಲೆ ಕೇಂದ್ರಿಕರಿಸುತ್ತಿದ್ದೇವು ಹಾಗೂ ನಮ್ಮ ಅಭಿಪ್ರಾಯ ನೀಡುತ್ತಿದ್ದೆವು. ಆದರೆ ಈಗ ನಾವು ಮನಬಂದಂತೆ ಸಲಹೆ ನೀಡಬೇಕಾಗುತ್ತದೆ ಅವುಗಳು ಸರ್ಕಾರಕ್ಕೆ ಒಪ್ಪಿಗೆಯಾಗಬಹುದು, ಆಗದೇ ಇರಬಹುದು.

1936 ರಿಂದಲೂ, ಶಿಕ್ಷಣ ಪದ್ಧತಿಯಲ್ಲಿ ಜಾರಿಗೆ ತರಬಹುದಾದ ಬದಲಾವಣೆಗಳನ್ನು ಅನೇಕ ಸಮಿತಿಗಳು ಸಲಹೆ ಮಾಡಿದೆ. 1939ರಲ್ಲಿ ಶ್ರೀ ಎನ್.ಎಸ್. ಸುಬ್ಬರಾವ್ ಸಾರ್ವಜನಿಕ ಶಿಕ್ಷಣದ ನಿರ್ದೇಶಕರಾಗಿದ್ದರು, ಅವರು ಕೆಲವು ಸೂಚನೆಗಳನ್ನು ಸರ್ಕಾರಕ್ಕೆ ಕಳುಹಿಸಿದ್ದರು. ಆದರೆ ಅವುಗಳನ್ನು ಜಾರಿಗೆ ತರಲಾಗಲಿಲ್ಲವೆಂದು ನಾನು ಭಾವಿಸುತ್ತೇನೆ. ಅದನ್ನೇ ಅನುಸರಿಸಿ, ಮೈಸೂರು ಸರ್ಕಾರ ವಿದ್ಯಾರ್ಥಿಗಳಿಗೆ ನೀಡುವ ತಾಂತ್ರಿಕ ರೀತಿಯ ಶಿಕ್ಷಣ ಅಥವಾ ತರಬೇತಿಯ

ಬಗ್ಗೆ ಕೆಲವು ಕ್ರಮಗಳನ್ನು ಅನುಸರಿಸಿದೆ. ಬಹುಶಃ ಮಂತ್ರಿಗಳ ಅಭಿಪ್ರಾಯವೇನೆಂದರೆ, ವಿದ್ಯಾರ್ಥಿಗಳಿಗೆ ನೀಡುವ ಶಿಕ್ಷಣ ಎಂತಹ ಸ್ವರೂಪ ಹೊಂದಿರಬೇಕೆಂದರೆ, ಅದು ಅವನಿಗೆ ತನ್ನ ಜೀವನ ನಿರ್ವಹಣೆಗೆ ಸಹಾಯ ಮಾಡುವಂತೆ ಇರಬೇಕು. ಮೈಸೂರು ಸರ್ಕಾರ ಈ ವಿಷಯವನ್ನು ಪ್ರಯತ್ನಿಸಿದೆ ಮತ್ತು ಅವರು ಅನೇಕ ತಾಂತ್ರಿಕ ಶಾಲೆಗಳನ್ನು ಜಾರಿಗೆ ತಂದಿದ್ದಾರೆ ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ನೇಯ್ಗೆ ಮತ್ತು ಮರಗೆಲಸ ಪರಿಚಯ ಮಾಡಿಸಿದೆ. ಅವರು ಹಲವಾರು ಮೂಲಭೂತ ಶಾಲೆಗಳನ್ನು ಪ್ರಾರಂಭಿಸಿದೆ. ಅಲ್ಲಿ ಉಚಿತ ಬೋಧನೆಯೊಂದಿಗೆ ವಿದ್ಯಾರ್ಥಿ ವೇತನವನ್ನೂ ನೀಡಲಾಗುತ್ತದೆ. ಆದರೂ ತಾಂತ್ರಿಕ ಶಿಕ್ಷಣ ವಿದ್ಯಾರ್ಥಿಗಳಲ್ಲಿ ಅಷ್ಟೊಂದು ಪ್ರಸಿದ್ಧ ಪಡೆಯುತ್ತಿಲ್ಲವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಇತ್ತೀಚೆಗೆ ಜಾರಿಗೊಳಿಸಲ್ಪಟ್ಟ ಮೂಲ ಭೂತ ಶಿಕ್ಷಣವೂ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಿಲ್ಲ. ಮೂಲಭೂತ ಶಿಕ್ಷಣವನ್ನು ಕಾರ್ಯಗತಗೊಳಿಸುವಲ್ಲಿ ಕೈಗೊಂಡ ಪ್ರಯೋಗ ಯಶಸ್ವಿಯಾಗಿಲ್ಲವೆಂದು ನಾನು ಹೇಳಿದರೆ ತಪ್ಪೇನು ಆಗಲಾರದು. ನಾವು ವಿದ್ಯಾರ್ಥಿಗಳಿಗೆ ಒಪ್ಪುವಂತಹ ಶಿಕ್ಷಣ ಪದ್ಧತಿಯುನ್ನು ಅನುಸರಿಸಬೇಕು. ಅದು ಎಲ್ಲರಿಗೂ ನಿಸ್ಸಂಶಯವಾಗಿಯೂ ಸಹಾಯ ಮಾಡುವಂತಿರಬೇಕು. ಅದು ಒಂದು ಪ್ರಾಯೋಗಿಕ ಪದ್ಧತಿಯೂ ಆಗಿರಬೇಕು.

ಪ್ರಸ್ತುತದಲ್ಲಿ ನಾವು 3 ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ. ಮೊದಲನೆಯದು, ಶಾಲೆಗೆ ಹೋಗುವ ವಯಸ್ಸಿನ ಎಲ್ಲಾ ಮಕ್ಕಳಿಗೂ ಸಾಕಷ್ಟು ಅವಕಾಶ ಮಾಡಿಕೊಡಬೇಕು. ಆದರಿಂದ ಅವರು ತಮ್ಮ ಪಾಲಿನ ಶಿಕ್ಷಣ ಪಡೆಯಬಹುದು. ಪರಿಹರಿಸಬೇಕಾದ ಮೊದಲ ಸಮಸ್ಯೆಯೆಂದರೆ ಸಂವಿಧಾನದಲ್ಲಿರುವಂತೆ ಕಡ್ಡಾಯ ಶಿಕ್ಷಣವನ್ನು ಹೇಗೆ ಜಾರಿಗೆ ತರಬೇಕು. ಎರಡನೇಯ ಸಮಸ್ಯೆ ಎಂದರೆ ಪ್ರಸ್ತುತ ಶಿಕ್ಷಣ ಪದ್ಧತಿ ಹೆಚ್ಚು ಪ್ರತಿಫಲದಾಯಕವಾಗುವಂತೆ ಹೇಗೆ ಮಾಡಬೇಕು, ಯಾವ ರೀತಿಯ ಬದಲಾವಣೆ ತರಬೇಕು ಹಾಗೂ ಪ್ರಸ್ತುತ ಶಿಕ್ಷಣ ಪದ್ಧತಿಯಲ್ಲಿ ಯಾವ ರೀತಿಯ ಸುಧಾರಣೆ ತರಬೇಕು. ಮೂರನೆಯ ಸಮಸ್ಯೆ - ಬಹುಶಃ ತುಂಬಾ ಮುಖ್ಯವಾದುದು, ಅದೇನೆಂದರೆ, ಆವಶ್ಯಕ ಹಣಕಾಸಿನ ಸಂಪನ್ಮೂಲಗಳು, ಏಕೆಂದರೇ ಹಣವಿಲ್ಲದೆ ಏನನ್ನೂ ಮಾಡಲು ಸಾಧ್ಯವಿಲ್ಲ. ನಾವು ಅವಶ್ಯವಿರುವ ಹಣಕಾಸನ್ನು ಒದಗಿಸಿಕೊಳ್ಳಬೇಕು. ನಾವು ಸಂಪನ್ಮೂಲಗಳನ್ನು ಪಡೆಯಲು ಸಾಧ್ಯವಾದರೆ ಮಾತ್ರ ಈ ಸಮಸ್ಯೆಗಳನ್ನು ಪರಿಹರಿಸುವುದು ಸೂಕ್ತವಾಗಿರುತ್ತದೆ. ಇಲ್ಲವಾದರೆ, ಸರ್ಕಾರವು ನಿಸ್ಸಹಾಯಕವಾಗಿರುತ್ತದೆ. ಈಗತಾನೆ ಮಂತ್ರಿಗಳು ಅವಶ್ಯಕ ಹಣಕಾಸು ಇಲ್ಲದೆಯೇ ಕೆಲವು ಯೋಜನೆಗಳನ್ನು ಜಾರಿಗೆ ತರಬಹುದಾಗಿದೆ ಎಂದು ಹೇಳಿದರು. ಆದರೆ ಆ ಯೋಜನೆಗಳು ಯಾವುವು ಎಂದು ನನಗೆ ಗೊತ್ತಿಲ್ಲ. ಆದರೆ, ಅವಶ್ಯವಿರುವ ಹಣಕಾಸಿನ ಸಂಪನ್ಮೂಲ ಹೊಂದದ ಹೊರತು, ಈ ರೀತಿಯ ಸಲಹೆಗಳ ಬಗ್ಗೆ ಚಿಂತಿಸದಿರುವುದೇ ಒಳ್ಳೆಯದು ಎಂದು ನಾನು ಭಾವಿಸುತ್ತೇನೆ.

ಮಾನ್ಯರೆ, ಒಂದು ರಾಷ್ಟ್ರದ ಪ್ರಗತಿಯಲ್ಲಿ ಶಿಕ್ಷಣ ಬಹಳ ಮುಖ್ಯ ಪಾತ್ರವನ್ನು ವಹಿಸುತ್ತದೆ. ಭಾರತದಲ್ಲಿ ಅದು ಪ್ರಧಾನ ಸ್ಥಾನ ಪಡೆದಿದೆ. ಅನಕ್ಷರತೆ ತೀವ್ರವಾಗಿದೆ. ನಮ್ಮ ಸಾಕ್ಷರರ ಸಂಖ್ಯೆ ಶೇಕಡ 14ಕ್ಕಿಂತಲೂ ಹೆಚ್ಚಾಗಿಲ್ಲ. ನಮ್ಮ ಪ್ರಜಾಪ್ರಭುತ್ವದ ಬೆಳವಣಿಗೆ ...

ಮಾನ್ಯ ಸಭಾಪತಿಗಳು:- ಅದು ಶೇಕಡಾ 13 ಅಲ್ಲ. ಅದು ಶೇಕಡಾ 20.6 ಆಗಿದೆ.

ಮಾನ್ಯ ಶ್ರೀ ಜೆ.ಎಂ. ಇಮಾಂ:- ನಮ್ಮ ಸಾಕ್ಷರರ ಸಂಖ್ಯೆ ಶೇಕಡಾ 20 ದಾಟಿಲ್ಲ. ಹಾಗಿದ್ದರೂ ಅದು ನಮಗಾಗಲೀ ನಮ್ಮ ರಾಷ್ಟ್ರಕ್ಕಾಗಲೀ ಪೂರಕವಾಗಿಲ್ಲ. ಹೋದ ಬಾರಿ ಅದು ಶೇಕಡಾ 14 ಆಗಿತ್ತು. ಈಗ ಅದು ಶೇಕಡಾ 20 ಆಗಿದೆ.

ಸಭಾಪತಿ:- ಈ ದಿನ ವಿರೋಧ ಪಕ್ಷದ ನಾಯಕರಿಗೆ ಕಾಲದ ಮಿತಿ ಇಲ್ಲ. ಅವರು ತಮ್ಮದೇ ಆದ ಸಮಯವನ್ನು ತೆಗೆದುಕೊಳ್ಳಬಹುದಾಗಿದೆ.

ಮಾನ್ಯ ಜೆ.ಎಂ. ಇಮಾಂ:- ಮಾನ್ಯರೆ, ಧನ್ಯವಾದಗಳು. ಪ್ರತಿ 100 ಜನರಲ್ಲಿ 80 ಜನರು ಅನಕ್ಷರಸ್ಥರಾಗಿದ್ದಾರೆ. ಇತರ ರಾಷ್ಟ್ರಗಳಲ್ಲಿರುವ ಶೈಕ್ಷಣಿಕ ಪರಿಸ್ಥಿತಿಯನ್ನು ನಮ್ಮ ರಾಷ್ಟ್ರದೊಂದಿಗೆ ಹೋಲಿಸಿದರೆ ನಾವು ತಲೆ ತಗ್ಗಿಸುವಂತಾಗಿದೆ. ಆದ್ದರಿಂದ ಈ ಸರ್ಕಾರ ಹಾಗೂ ಕೇಂದ್ರ ಸರ್ಕಾರಗಳು ಅನಕ್ಷರತೆ ನಿವಾರಿಸಲು ಸಂವಿಧಾನದಲ್ಲಿರುವಂತೆ 10 ವರ್ಷಗಳ ಸಾಧ್ಯವಾಗುವ ಎಲ್ಲಾ ಕ್ರಮಗಳನ್ನು ಅನುಸರಿಸಲೇ ಬೇಕಾಗಿದೆ. ಅದನ್ನು ಮಾಡಲೇಬೇಕಾಗಿದೆ. ಇಲ್ಲವಾದರೆ, ನಮ್ಮ ಪ್ರಜಾಪ್ರಭುತ್ವ ಭ್ರಮೆಯಾಗುತ್ತದೆ. ಅಲ್ಲಿ ಯಾವುದೇ ಆರ್ಥಿಕ ಪ್ರಗತಿ ಆಗುವುದಿಲ್ಲ. ನಮ್ಮ ಜನರು ಇದುವರೆಗೆ ಇದ್ದ ಪರಿಸ್ಥಿತಿಯಲ್ಲೇ ಇರುತ್ತಾರೆ. ಆದ್ದರಿಂದ ರಾಷ್ಟ್ರದಲ್ಲಿನ ಜನರಿಗೆ ಎಲ್ಲಾ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸುವಲ್ಲಿ ನಾವು ಸಾಧ್ಯವಾದ ಎಲ್ಲಾ ಪ್ರಯತ್ನ ಮಾಡುವುದು ಅತೀ ಅವಶ್ಯಕವಾಗಿದೆ. ಇಲ್ಲವಾದರೆ, ನಾವು ಜನರೊಡನೆ ನಂಬಿಕೆಯಿಡಲು ಸಾಧ್ಯವಿಲ್ಲ. ನನಗೆ ಗೊತ್ತು ಹಾಗೆಯೇ 14 ವರ್ಷದವರೆಗೂ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರುವುದು ಉತ್ತಮ ಸಂಗತಿ ಎಂದು ನಾನು ತಿಳಿದಿದ್ದೇನೆ. ಆದಕ್ಕೆ ಸಾಕಷ್ಟು ಹಣಬೇಕಾಗುತ್ತದೆ ಎಂದು ನಾನು ತಿಳಿಸಿದ್ದೇನೆ. ನಾನು ಅದನ್ನು ನನ್ನದೇ ರೀತಿಯಲ್ಲಿ ಕಾರ್ಯಗತ ಮಾಡಿದ್ದೇನೆ.

ಪ್ರಸ್ತುತ, ಮೈಸೂರಿನಲ್ಲಿ, ಸುಮಾರು 10 ಲಕ್ಷ ಶಾಲೆಗೆ ಹೋಗುವ ವಯಸ್ಸಿನ ಹುಡುಗ ಮತ್ತು ಹುಡುಗಿಯರು ಇದ್ದಾರೆ. ಅದರಲ್ಲಿ ಅರ್ಧದಷ್ಟು ಭಾಗಕ್ಕೆ ಮಾತ್ರ ನಾವು ಈಗ ಸೌಲಭ್ಯಗಳನ್ನು ನೀಡಿದ್ದೇವೆ. ಸೌಲಭ್ಯವಂಚಿತರಾಗಿ, ಶಾಲೆಗೆ ಹೋಗುವ ವಯಸ್ಸಿನ ಅರ್ಧದಷ್ಟು ಭಾಗ ಮಕ್ಕಳು ರಸ್ತೆಯಲ್ಲಿ ಅಲೆದಾಡುವಂತಾಗಿದೆ. 11,000 ಪ್ರಾಥಮಿಕ ಶಾಲೆಗಳು ಇರುವುದು ನಿಜವಷ್ಟೆ. ಆದರೆ ಅವುಗಳಲ್ಲಿ ಬಹಳಷ್ಟು ಸಮರ್ಪಕವಾಗಿಲ್ಲ ಮತ್ತು ಅವುಗಳು ತಮ್ಮ ಕಟ್ಟಡ ಹೊಂದಿಲ್ಲ ಹಾಗೂ ಸಾಕಷ್ಟು ಶಿಕ್ಷಕರನ್ನು ಹೊಂದಿಲ್ಲ. 11,000 ಶಾಲೆಗಳಲ್ಲಿ, 5000 ಶಾಲೆಗಳು ಒಬ್ಬ - ಶಿಕ್ಷಕ ಶಾಲೆಗಳಾಗಿವೆ. ಇದು ಪ್ರಾಥಮಿಕ ಶಾಲೆಗಳ ಪರಿಸ್ಥಿತಿಯಾಗಿದೆ. ಮಾಧ್ಯಮಿಕ ಶಿಕ್ಷಣಕ್ಕೆ ಬಂದರೆ, ಡಾ: ರೆಡ್ಡಿಯವರ ವರದಿಯ ಪ್ರಕಾರ, ಇಡೀ ರಾಜ್ಯದಲ್ಲಿ ಆ ವಯಸ್ಸಿನ ವಿದ್ಯಾರ್ಥಿಗಳು (ಮಕ್ಕಳು) 7 ಲಕ್ಷದಷ್ಟಿದ್ದಾರೆ. 7 ಲಕ್ಷದಲ್ಲಿ 1,21,000 ಮಕ್ಕಳಿಗೆ ಮಾತ್ರ ಮಾಧ್ಯಮಿಕ ಶಾಲೆಯ ಸೌಲಭ್ಯವನ್ನು ಕಲ್ಪಿಸಲಾಗಿದೆ. ಆ ಸಂಖ್ಯೆಗಿಂತ 5ರಷ್ಟು ಸಂಖ್ಯೆಯ ಮಕ್ಕಳು ಮಾಧ್ಯಮಿಕ ಶಾಲಾ ಸೌಲಭ್ಯ ಹೊಂದಿಲ್ಲ ಮತ್ತು ಅವರು ರಸ್ತೆಗಳಲ್ಲಿ ಅಲೆದಾಡುತ್ತಿದ್ದಾರೆ. ಆದ್ದರಿಂದ ನಮ್ಮ ಜವಾಬ್ದಾರಿ ಬಹಳಷ್ಟಿದೆ. ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತರಲು ಮಾನ್ಯ ಮಂತ್ರಿಗಳು ಹೇಳಿದಂತೆ, ಪ್ರತಿವರ್ಷ 4 ಕೋಟಿ ರೂಪಾಯಿ ಪ್ರಾರಂಭಿಕ ವೆಚ್ಚ ಮತ್ತು ಪ್ರತಿವರ್ಷ 1 ½ ಕೋಟಿ ರೂಪಾಯಿಗಳಿಗಿಂತ ಹೆಚ್ಚು ಹಣವನ್ನು ವೆಚ್ಚ ಮಾಡಬೇಕಾಗುತ್ತದೆ. ಪೂರ್ಣ ಯೋಜನೆ ಕಾರ್ಯಚರಣೆಗೆ ಬರುವಷ್ಟರಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ, ಪುನರಾವರ್ತನೆಗೊಳ್ಳದ ವೆಚ್ಚವನ್ನು

ಹೊರತುಪಡಿಸಿ 5 ಅಥವಾ 6 ಕೋಟಿ ರೂಪಾಯಿಗಳಷ್ಟು ಒಟ್ಟು ವೆಚ್ಚ ತಗಲುತ್ತದೆ. ಹಾಗೆಯೇ, ಮಾಧ್ಯಮಿಕ ಶಿಕ್ಷಣಕ್ಕೆ. ಆ ವಯಸ್ಸಿನ ಎಲ್ಲಾ ವಿದ್ಯಾರ್ಥಿಗಳಿಗೂ ಸೌಲಭ್ಯ ಒದಗಿಸಲು ನಾವು ಈಗಾಗಲೇ ಮಾಡುತ್ತಿರುವ ವೆಚ್ಚಕ್ಕಿಂತ 6 ಪಟ್ಟು ಹೆಚ್ಚು ಮೊತ್ತವನ್ನು ವೆಚ್ಚ ಮಾಡಬೇಕಾಗುತ್ತದೆ. ಪ್ರತಿ ವರ್ಷ ಅದು ಸಾಧಾರಣವಾಗಿ 2 1/2 ಅಥವಾ 3 ಕೋಟಿಯಷ್ಟು ಬರುತ್ತದೆ. ನಾವು ಪ್ರಾರಂಭದಲ್ಲಿ ಕಟ್ಟಡಕ್ಕೂ ವೆಚ್ಚ ಮಾಡಬೇಕಾಗುತ್ತದೆ. ಕಡ್ಡಾಯ ಮಾಧ್ಯಮಿಕ ಶಿಕ್ಷಣದ ಯೋಜನೆಯನ್ನು ಪೂರ್ಣವಾಗಿ ಜಾರಿಗೆ ತರಲು, ವಾರ್ಷಿಕವಾಗಿ ಪುನರಾರ್ವತನೆಗೊಳ್ಳುವ ವೆಚ್ಚಕ್ಕಾಗಿ 10 ಕೋಟಿ ರೂಪಾಯಿಗಳಷ್ಟು ಹಣವನ್ನು ಕಂಡುಕೊಳ್ಳಬೇಕಾಗುತ್ತದೆ ಮತ್ತು ಸುಮಾರು 10 ಕೋಟಿ ರೂಪಾಯಿಗಳಷ್ಟು ಪ್ರಾರಂಭಿಕ ವೆಚ್ಚಕ್ಕೆ ಕಂಡು ಹಿಡಿಯಬೇಕಾಗುತ್ತದೆ. ಈ ಸಂಪನ್ಮೂಲಗಳನ್ನು ಹೇಗೆ ದೊರಕಿಸಿಕೊಳ್ಳವುದು ? ಇದು ಯಾರ ಜವಾಬ್ದಾರಿಯಾಗಿದೆ ? ಅದು ಮೈಸೂರು ಸರ್ಕಾರದ ಜವಾಬ್ದಾರಿ ಮಾತ್ರವೊ ಅಥವಾ ಭಾರತ ಸರ್ಕಾರದ ಜವಾಬ್ದಾರಿಯೋ ? ಅಥವಾ ಅದು ಕೇಂದ್ರ ಸರ್ಕಾರ, ರಾಜ್ಯ ಮತ್ತು ಸ್ಥಳೀಯ ಸಂಸ್ಥೆಗಳ ಸಂಯುಕ್ತ ಜವಾಬ್ದಾರಿಯೋ ?ನಾವು ಸಂವಿಧಾನವನ್ನು ನೋಡಿದರೆ, ಅದು 14 ವರ್ಷಗಳವರೆಗೆ ಕಡ್ಡಾಯ ಶಿಕ್ಷಣ ಕೊಡುವ ಜವಾಬ್ದಾರಿಯನ್ನು ನಮ್ಮ ಮೇಲೆ ಹಾಕುತ್ತದೆ. ಅದು ಕೇವಲ ಪ್ರಾಥಮಿಕ ಶಿಕ್ಷಣವನ್ನಲ್ಲದೆ ಮಾಧ್ಯಮಿಕ ಶಿಕ್ಷಣವನ್ನೂ ಒಳಗೊಂಡಿರುತ್ತದೆ.

(ಸಂಗ್ರಹ: ವಿಧಾನಸಭೆ ನಡವಳಿಕೆ ದಿನಾಂಕ)

## 45ನೇ ಒಪ್ಪಂದದ ಕಲುಮಿನ ಪ್ರಕಾರ

"ಈ ಸಂವಿಧಾನವು ಪ್ರಾರಂಭಗೊಳ್ಳುವ 10 ವರ್ಷಗಳಲ್ಲಿ ರಾಜ್ಯ ಎಲ್ಲಾ ಮಕ್ಕಳಿಗೆ 14 ವರ್ಷ ವಯಸ್ಸನ್ನು ತಲುಪುವವರೆಗೂ, ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಕೊಡಲು ಪ್ರಯತ್ನಿಸಬೇಕು."

"ರಾಜ್ಯ" ಎಂದರೆ ಅದು ರಾಜ್ಯ ಅಥವಾ ರಾಜ್ಯ ಸರ್ಕಾರದ ಜವಾಬ್ದಾರಿಯೆಂದು ಮೇಲ್ನೋಟಕ್ಕೆ ಅನ್ನಿಸುತ್ತದೆ. ಆದರೆ ಅದು ಹಾಗಲ್ಲ. ನಾವು "ರಾಜ್ಯ"ದ ವ್ಯಾಖ್ಯೆಯನ್ನು ನೋಡೋಣ ಇದನ್ನು 36ನೇ ಒಪ್ಪಂದದ ಕಲುಮಿನಲ್ಲಿ ಹೇಳಲಾಗಿದೆ.

"ಈ ಭಾಗದಲ್ಲಿ, ಸಂದರ್ಭ ಬೇರೆ ರೀತಿ ಬಯಸದಿದ್ದರೆ, ರಾಜ್ಯ III ರಲ್ಲಿ ಇರುವಂತೆಯೇ ಅರ್ಥ ಹೊಂದಿದೆ ".

II ಭಾಗದಲ್ಲಿ"ರಾಜ್ಯ" ದ ವ್ಯಾಖ್ಯೆ ಹೀಗಿದೆ.:

"ಈ ಭಾಗದಲ್ಲಿ, ಸಂದರ್ಭದಲ್ಲಿ ಬೇರೆ ರೀತಿ ಬಯಸದಿದ್ದರೆ, 'ರಾಜ್ಯ' ಸರಕಾರ ಮತ್ತು ಸಂಸತ್ತನ್ನು (Parliament) ಒಳಗೊಳ್ಳುತ್ತದೆ ಮತ್ತು ಪ್ರತಿಯೊಂದು ರಾಜ್ಯದಶಾಸಕಾಂಗ ಹಾಗೂ ಸರಕಾರ, ಎಲ್ಲಾ ಸ್ಥಳೀಯ ಅಥವಾ ಇತರ ಭಾರತೀಯ ಗಡಿಯಲ್ಲಿ ಬರುವ, ಭಾರತದ ಸರಕಾರದ ಅಧೀನದಲ್ಲಿರುವ (ನಿಯಂತ್ರಣದಲ್ಲಿರುವ)ಅಧಿಕಾರಗಳನ್ನು ಒಳಗೊಳ್ಳುತ್ತದೆ."

ಈ ಸವಲತ್ತನ್ನು ಜಾರಿಗೆ ತರಲು ಹಾಗೂ ಈ ಕಲುಮಿನಲ್ಲಿ ಇರುವ ನಿಯಮಗಳನ್ನು ಪೂರ್ಣಗೊಳಿಸುವುದು ಕೇವಲ ಮೈಸೂರು ಸರಕಾರದ ಜವಾಬ್ದಾರಿಯಷ್ಟೇ ಅಲ್ಲ, ಆದರೆ ಅದು ಪ್ರಮುಖವಾಗಿ ಭಾರತ ಸರಕಾರದ ಜವಾಬ್ದಾರಿಯೆಂದು ಭಾವಿಸುತ್ತೇನೆ ಹಾಗೂ ಅದು ಸಾಕಷ್ಟು ಸ್ಪಷ್ಟವಾಗಿದೆ.

ಶ್ರೀ ಎಲ್. ಸಿದ್ದಪ್ಪ- ವ್ಯಾಪ್ತಿಯನ್ನು ನಿರ್ಧರಿಸಲು ಇದು "ರಾಜ್ಯ"ದ ವ್ಯಾಖ್ಯೆಯಾಗಿದೆಯೇ ಅಥವಾ ಅದು ಕೇಂದ್ರ ಪಟ್ಟಿ ಅಥವಾ ರಾಜ್ಯ ಪಟ್ಟಿಯ ಪ್ರಕಾರ ನೀಡಲ್ಪಟ್ಟ ಅಧಿಕಾರವೋ?

ಜನಾಬ್ ಜೆ. ಮೊಹಮ್ಮದ್ ಇಮಾಂ:- ಇದರ ಬಗ್ಗೆ ಯೋಚಿಸುವುದು ಬೇಡವೆಂದು ನಾನು ಭಾವಿಸುತ್ತೇನೆ.

ಶ್ರೀ ಕೆ. ಹನುಮಂತಯ್ಯ (ಮುಖ್ಯಮಂತ್ರಿಗಳು) ಅದೊಂದು ಕಾನೂನು ಬದ್ಧ ವ್ಯಾಖ್ಯೆ ಕಾನೂನಿನ ಉದ್ದೇಶಗಳಿಗಾಗಿ ಜನಾಬ್ ಜೆ. ಮೊಹಮ್ಮದ್ ಇಮಾಂ ಅದನ್ನು ಇಲ್ಲಿ ಹೇಳಲಾಗಿದೆ. ಶ್ರೀ ಕೆ. ಹನುಮಂತಯ್ಯ ಹೇಗೆ ಇರಲಿ ನೀವು ನನಗೆ ಸಹಾಯ ಮಾಡುತ್ತಾ ಇದ್ದೀರಿ.

ಜನಾಬ್ ಜೆ. ಮೊಹಮ್ಮದ್ ಇಮಾಂ:- ನಮ್ಮನ್ನು ನಾವು ಸಹಾಯ ಮಾಡಿಕೊಳ್ಳಲು ಇಚ್ಛಿಸುತ್ತೇವೆ. 4ನೇ ಅಧ್ಯಾಯದಲ್ಲಿ ಭಾಗ 3ರಲ್ಲಿ ಇರುವಂತೆಯೇ"ರಾಜ್ಯ" ಅರ್ಥ ಹೊಂದಿದೆ ಎಂದು ಹೇಳಲಾಗಿದೆ. ಭಾಗ 3 ರಲ್ಲಿ "ರಾಜ್ಯ" ಎಂದರೆ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರದ ಸಂಯೋಜನೆಯಾಗಿದೆ. ಹಾಗೆಯೇ ರಾಜ್ಯದ ಮೇಲೆ ಜವಾಬ್ದಾರಿ ಇದೆ. ಆದರೆ ಒಂದು ವೇಳೆ ರಾಜ್ಯ ಸರ್ಕಾರ ಕೇಂದ್ರಕ್ಕೂ ಕೇಳುವುದು ಕಡ್ಡಾಯವಿಲ್ಲವೆಂದರೆ ಅವರೇ ಎಲ್ಲವನ್ನೂ

ನಿರ್ವಹಿಸುವುದಾದರೆ ನನ್ನದೇನೂ ಅಭ್ಯಂತರವಿಲ್ಲ ಶ್ರೀ ಕೆ. ಮೊಹಮ್ಮದ್ ಇಮಾಂ ಉತ್ತರಿಸುತ್ತಾ ಈ ಯೋಜನೆಯನ್ನು ಜಾರಿಗೆ ತರುವಲ್ಲಿ ಕೇಂದ್ರ ಸರ್ಕಾರದ ನೆರವು ಕೇಳುವ ಹಕ್ಕು ನಮಗಿದೆ ಎಂದು ಹೇಳಿದರು. ಇದು ಮೈಸೂರು ಸರ್ಕಾರಕ್ಕೆ ಅಷ್ಟೇ ಅಲ್ಲದೆ ಕೇಂದ್ರ ಸರ್ಕಾರಕ್ಕೂ, ಕಡ್ಡಾಯವೆನಿಸಿದೆ.

ಶ್ರೀ ಕೆ. ಹನುಮಂತಯ್ಯ:- ಅದು ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ ಬರುತ್ತದೆ.

ಜನಾಬ್ ಜೆ. ಮಹಮ್ಮದ್ ಇಮಾಂ:- ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದರು. ಅದು ಪಂಚವಾರ್ಷಿಕ ಯೋಜನೆಯಡಿಯಲ್ಲಿ ಬರಲಿ ಅಥವಾ ಬಾರದಿರಲಿ ಸಂವಿಧಾನ ಈ ಯೋಜನೆಯನ್ನು 10 ವರ್ಷಗಳಲ್ಲಿ ಜಾರಿಗೆ ತರಬೇಕೆಂದು ಸ್ಪಷ್ಟವಾಗಿ ಹೇಳಬಲ್ಲೆ. ಎಲ್ಲಿಯವರೆಗೆ ಕೇಂದ್ರ ಅಥವಾ ಇನ್ನಾವುದೇ (Federal) ಸರ್ಕಾರ ನಮ್ಮ ಸಹಾಯಕ್ಕೆ ಬರುವುದಿಲ್ಲವೋ ಅಲ್ಲಿಯವರೆಗೂ ಈ ಕ್ರಮವನ್ನು ಜಾರಿಗೆತರಲು ಸಾಧ್ಯವಿಲ್ಲ.

ಇತರೆ ರಾಷ್ಟ್ರಗಳಲ್ಲಿ ಏನಾಗುತ್ತಿದೆಯೆಂಬುದನ್ನು ನಾವು ಗಮನಿಸೋಣ ಹಾಗೆಯೇಕೇಂದ್ರ ಅಥವಾ (Federal) ಫೆಡರಲ್ ಸರ್ಕಾರ ಹಣಕಾಸು ನೀಡುವುದು ಅದರ ಜವಾಬ್ದಾರಿಯಾಗಿಲ್ಲವೆ ಎಂಬುದನ್ನು ನೋಡೋಣ. ಈಗ ತಾನೆ ನಾನು ಒಂದು ಪತ್ರಿಕೆಯನ್ನು ಪಡೆದುಕೊಂಡೆ ಅದರಲ್ಲಿ ಅಮೇರಿಕಾದಲ್ಲಿ ಹೇಗೆ ಕಾರ್ಯ ನಡೆಯುತ್ತದೆ ಎಂಬುದನ್ನು ನಾವು ನೋಡಬಹುದು. ಪ್ರಾಥಮಿಕ ಶಿಕ್ಷಣ ಯೋಜನೆಯನ್ನು ಜಾರಿಗೆ ತರುವುದು ಕೇಂದ್ರ ಅಥವಾ ರಾಜ್ಯ ಸರ್ಕಾರದ ಸಂಯುಕ್ತ ಜವಾಬ್ದಾರಿಯಾಗಿಲ್ಲವೆ ಎಂದು ಪರಿಶೀಲಿಸಬಹುದು. ನಾನು ಕೆಲವು ಭಾಗಗಳನ್ನು ಓದುತ್ತೇನೆ.

ಸಂಯುಕ್ತ ರಾಜ್ಯ ಶಿಕ್ಷಣ ಸಂಬಂಧದ ಬಗ್ಗೆ ಈಗಾಗಲೇ ಹೇಳಿರುವಂತೆ ಫೆಡರಲ್ ಸರ್ಕಾರ ಶಿಕ್ಷಣದ ವಿಷಯದಲ್ಲಿ ಆಸಕ್ತಿ ಹೊಂದಿಲ್ಲವೆಂದು ತೀರ್ಮಾನಿಸುವುದು ಸರಿಯಲ್ಲ ಹಲವು ರಾಜ್ಯಗಳಲ್ಲಿ ಶಿಕ್ಷಣದ ಆಡಳಿತ ಹಾಗೂ ವ್ಯವಸ್ಥೆಗೆ ಫೆಡರಲ್ ಸರ್ಕಾರ ಹೊಣೆಗಾರ ಆಗಿಲ್ಲದಿದ್ದರೂ ಅದು ಶಿಕ್ಷಣವನ್ನು ಹೆಚ್ಚಿಸುವಲ್ಲಿ ಭೂಮಿಯನ್ನು ಪಡೆಯುವ ಅವಕಾಶ ಮಾಡಿಕೊಡುವ ಮೂಲಕ ಮತ್ತು ರಾಜ್ಯದಲ್ಲಿ ಶಿಕ್ಷಣದ ಪ್ರೋತ್ಸಾಹಕ್ಕಾಗಿ ಹಣಕಾಸು ಸಂಗ್ರಹಿಸುವುದರಲ್ಲಿ ಅವಕಾಶ ಮಾಡಿಕೊಡುವ ಮೂಲಕ ಸಾಕಷ್ಟು ಆಸಕ್ತಿಯನ್ನು ತೋರಿಸಿದೆ. ನಾನು ಅವರ ಕೊಡುಗೆಗಳನ್ನು ನಿಮ್ಮ ಗಮನಕ್ಕೆ ತರಲು ಬಯಸುತ್ತೇನೆ.

"ಈ ಹಿಂದೆ ತೋರಿಸಿರುವಂತೆ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅಮೇರಿಕಾದಲ್ಲಿ 3 ಸ್ತರದ ಸರ್ಕಾರಗಳಿವೆ. ಫೆಡರಲ್ ಸರ್ಕಾರ ರಾಜ್ಯ ಸರ್ಕಾರ ಮತ್ತು ರಾಜ್ಯಗಳಲ್ಲಿರುವ ಸ್ಥಳೀಯ ಆಡಳಿತ ಕೇಂದ್ರಗಳು. ಸಾರ್ವಜನಿಕ ಶಿಕ್ಷಣದಲ್ಲಿ ಪ್ರತಿಯೊಂದು ಹಣಕಾಸಿನ ಬೆಂಬಲವನ್ನು ನೀಡುತ್ತದೆ ಪ್ರಸ್ತುತದಲ್ಲಿ ಒಟ್ಟು ಸಾರ್ವಜನಿಕ ಶಾಲೆ ಹಣಕಾಸಿನಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ಶಿಕ್ಷಣಕ್ಕೂ ಸುಮಾರು ಶೇಕಡಾ 2 ಹಣಕಾಸು ಫೆಡರಲ್ ಮೂಲಗಳಿಂದ ಬರುತ್ತದೆ. ಉನ್ನತ ಸಾರ್ವಜನಿಕ ಶಿಕ್ಷಣಕ್ಕೂ ಸುಮಾರು ಶೇಕಡಾ 11 ಫೆಡರಲ್ ಮೂಲಗಳಿಂದ ಶೇಕಡಾ 44 ರಾಜ್ಯದ ಮೂಲಗಳಿಂದ ಮತ್ತು ಉಳಿದ 49% ಭೋದನಾ ಶುಲ್ಕ ಮತ್ತು ಸಂಸ್ಥೆಗೆ ಲಭ್ಯವಿರುವ ಇತರ ಆದಾಯಗಳಿಂದ ಬರುತ್ತದೆ".

ಹಾಗೆಯೇ ಇಂಗ್ಲೆಂಡಿನಲ್ಲೂ ಕೂಡ. ನಾನು ಮತ್ತೆ ತಮ್ಮ ಗಮನಕ್ಕೆ ತರಬಯಸುತ್ತೇನೆ.

ಶಿಕ್ಷಣವನ್ನು ಹಲವು ರಾಜ್ಯಗಳ ಜವಾಬ್ದಾರಿಯೆಂದು ಪರಿಗಣಿಸಿದ್ದರೆ, ಹಣಕಾಸಿನ ಸಹಾಯವನ್ನು ಶಿಕ್ಷಣಕ್ಕೆ ನೀಡುವ ಮೂಲಕ ಫೆಡರಲ್ ಸರ್ಕಾರ ಶಿಕ್ಷಣಕ್ಕೆ ರಾಷ್ಟ್ರೀಯ ಆಸಕ್ತಿಯನ್ನು ತೋರಿಸಿದೆ. 48 ರಾಜ್ಯಗಳಲ್ಲಿ ಪ್ರತಿಯೊಂದು ರಾಜ್ಯ ಶಿಕ್ಷಣದ ಅಭಿವೃದ್ಧಿಗಾಗಿ ಭೂಮಿಯನ್ನು ಸಹಾಯ ಮತ್ತು ಹಣಕಾಸಿನ ಹಾಗೂ ಇತರ ಸಹಾಯಗಳನ್ನು ಫೆಡರಲ್ ಸರ್ಕಾರದಿಂದ ಪಡೆದುಕೊಂಡಿದೆ. ಪ್ರಸ್ತುತದಲ್ಲಿ ಶಿಕ್ಷಣಕ್ಕೆ ದೊರಕುವ ಫೆಡರಲ್ ಸಹಾಯಕ್ಕೆ ಉದಾಹರಣೆಗಳೆಂದರೆ ಭೂ - ಸಹಾಯ ಕಾಲೇಜುಗಳು, ಕೃಷಿ ಪ್ರಯೋಗ ಶಾಲೆಗಳು, ವೃತ್ತಿ ಶಿಕ್ಷಣ, ವೃತ್ತಿ ಪುನರ್ ವಸತಿ, ಶಾಲಾ ಉಪಹಾರ ಕಾರ್ಯಕ್ರಮ ಇತ್ಯಾದಿ(Vocational Education)

ಮಾನ್ಯರೇ ಅಮೇರಿಕಾ ಮತ್ತು ಇಂಗ್ಲೆಂಡ್‌ಗಳಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೊಳಿಸಲಾಗಿದೆ. ಅದು 16 ವರ್ಷದವರೆಗೆ ಕಡ್ಡಾಯವಾಗಿದ್ದು ತೃಪ್ತಿಕರವಾಗಿ ಕಾರ್ಯನಿರ್ವಹಿಸುತ್ತಿದೆ. ಏಕೆಂದರೆ ಅಧಿಕ ಪ್ರಮಾಣದಲ್ಲಿ ಪೂರ್ಣ ಯೋಜನೆಗೆ ತಗಲುವ ವೆಚ್ಚವನ್ನು ರಾಜ್ಯದ ಆದಾಯದಿಂದ ನೋಡಿಕೊಳ್ಳಲಾಗುತ್ತದೆ. ಇಂಗ್ಲೆಂಡಿನಲ್ಲಿ ನನಗೆ ತಿಳಿದಿದೆ. ನಾನು (County Council) ಸಭೆಗೆ ಭೇಟಿ ನೀಡಿದ್ದೆ. - ಅವರು ಉಚಿತ ಮತ್ತು ಕಡ್ಡಾಯ ಶಿಕ್ಷಣದ ಮೇಲೆ ಮಿಲಿಯನ್‌ಗಳಷ್ಟು ಹಣವನ್ನು ವೆಚ್ಚ ಮಾಡುತ್ತಾರೆ. ಅದು ಅವರ ಸ್ಥಳೀಯ ಸಂಸ್ಥೆಗಳಿಂದ ಅಲ್ಲ. ಆದರೆ ಆದಾಯ ತೆರಿಗೆ ಕಸ್ಟಂ ತೆರಿಗೆ ಮತ್ತು ಇತರ ಆದಾಯಗಳಿಂದ ಅವರು ಉಚಿತ ಹಾಗೂ ಕಡ್ಡಾಯ ಶಿಕ್ಷಣ ಜಾರಿಗೆಗೆ ಅಧಿಕ ಧನ ಸಹಾಯವನ್ನು ನೀಡುತ್ತಾರೆ. ಹಾಗೆಯೇ ಅಮೇರಿಕಾದಲ್ಲಿ ಇಲ್ಲಿ ಪ್ರತಿ ರಾಜ್ಯಕ್ಕೂ ಲಭ್ಯವಿರುವ ಸಂಪನ್ಮೂಲಗಳು ನಮಗೆ ತಿಳಿದಿದೆ. ಸಂವಿಧಾನದಲ್ಲಿರುವ ಆದೇಶವನ್ನು ಜಾರಿಗೆ ತರಲು ನಮ್ಮ ಮಿತವಾದ ಸಂಪನ್ಮೂಲಗಳಿಂದ ಸಾಧ್ಯವಿದೆಯೇ? ಅದಕ್ಕೂ 20 ವರ್ಷ ಅಥವಾ 100 ವರ್ಷಗಳೇ ಬೇಕಾಗುತ್ತವೆ. ಮೈಸೂರು ಸರ್ಕಾರ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರುವ ಪರಿಸ್ಥಿತಿಯಲ್ಲಿ ಇಲ್ಲ, ಏಕೆಂದರೆ ಅದಕ್ಕೆ ಅಧಿಕ ಹಣಬೇಕಾಗುತ್ತದೆ. ಕೇಂದ್ರ ನಮ್ಮ ಸಹಾಯಕ್ಕೆ ಬರಬೇಕಾಗುತ್ತದೆ. ಅವರು ನಮ್ಮ ವೆಚ್ಚದ ಅಧಿಕ ಭಾರವನ್ನು ಹೊರಬೇಕಾದರೆ ನಾನು ಈ ಯೋಜನೆಯನ್ನು ರದ್ದುಗೊಳಿಸಬೇಕೆಂದು ಸರ್ಕಾರವನ್ನು ಕೇಳಿಕೊಳ್ಳುತ್ತೇನೆ.

ಮಾನ್ಯರೇ ಮತ್ತೊಂದು ವಿಷಯದ ಬಗ್ಗೆ ಹೇಳುತ್ತೇನೆ. ಮೈಸೂರು ರಾಜ್ಯ ತುಂಬಾ ಬಡ ರಾಜ್ಯವಾಗಿದೆ. ನಮ್ಮ ಆದಾಯ ಗಳಿಸುವ ಎಲ್ಲಾ ವಿಭಾಗಗಳನ್ನು ಕೇಂದ್ರ ಕಿತ್ತುಕೊಂಡಿದೆ. ನಮ್ಮ ಸಂಪನ್ಮೂಲಗಳು ಕೃಷವಾಗಿದೆ. ಮತ್ತು ನಾವು ಸಂಪನ್ಮೂಲಗಳನ್ನು ಸುಧಾರಿಸಿಕೊಳ್ಳಲು ಸಾಧ್ಯವಿಲ್ಲ. ತೆರಿಗೆಯ ಮಿತಿಯೂ ಬರಿದಾಗಿದೆ. ಆದ್ದರಿಂದ, ಈ ಸನ್ನಿವೇಶದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ರಾಜ್ಯದಾದ್ಯಂತ ಜಾರಿಗೆ ತರಲು ನಮಗೆ ಸಾಧ್ಯವಿಲ್ಲ. ಈ ವಿಷಯ ನಿಮಗೆ ಬಿಟ್ಟಿದ್ದು ಹಾಗೆಯೇ ನೀವು ಕೇಂದ್ರ ಸರ್ಕಾರದೊಂದಿಗೆ ಪರಿಶೀಲಿಸಬೇಕು ಮತ್ತು ಅವರು ಸಾಕಷ್ಟು ಹಣಕಾಸು ನೀಡದ ಹೊರತು, ಈ ಯೋಜನೆ ಕೈಗೊಳ್ಳಲು ಮೈಸೂರು ಸರ್ಕಾರಕ್ಕೆ ಸಾಧ್ಯವಾಗುವುದಿಲ್ಲವೆಂದು ಸರಳವಾಗಿ ಹೇಳಬೇಕು. ಅವರು 5 ವರ್ಷದ ಯೋಜನೆಯನ್ನು ತಯಾರಿಸಿದ್ದು ಮತ್ತು ಈಗಾಗಲೇ 2 ವರ್ಷಗಳಾಗಿವೆ. ಅವರು ಏನು ಮಾಡಿದ್ದಾರೆ? ಶಿಕ್ಷಣದ ಅಡಿಯಲ್ಲಿ ಮಾನ್ಯರೇ, 5 ವರ್ಷದ ಯೋಜನೆಯಲ್ಲಿ (ಕಾರ್ಯಕ್ರಮದಲ್ಲಿ) ಅವರು

ಪೂರ್ಣಜವಾಬ್ದಾರಿಯನ್ನು ಮೈಸೂರು ರಾಜ್ಯದ ಮೇಲೆಯೇ ಹೊರಿಸಿದ್ದಾರೆ. ಕಡಿಮೆ ಸಂಪನ್ಮೂಲಗಳಿಂದ ನಮ್ಮಮೇಲೆ ಇಟ್ಟಿರುವ ವಿಶ್ವಾಸಕ್ಕೆ ನ್ಯಾಯ ದೊರಕಿಸಲು ಸಾಧ್ಯವಿಲ್ಲವೆಂದು ನಾನು ನಿಶ್ಚಿತವಾಗಿ ಹೇಳುತ್ತೇನೆ.

ಈಗ ಪ್ರಸ್ತುತ ಶಿಕ್ಷಣ ಪದ್ಧತಿಯಲ್ಲಿ ಅಳವಡಿಸಬೇಕಾದ ಸುಧಾರಣೆಗಳಿಗೆ ಸಂಬಂಧಿಸಿದಂತೆ ಇದಕ್ಕೂ ಕೂಡ ಅಧಿಕ ಹಣ ಬೇಕಾಗುತ್ತದೆ. ಒಂದು ವೇಳೆ ಶಿಕ್ಷಣ ಮಂತ್ರಿಗಳು ಈ ಹೊಸ ಸುಧಾರಣೆಯನ್ನು ಜಾರಿಗೆ ತರುವಲ್ಲಿ ಉಂಟಾಗುವ ಹಣಕಾಸಿನ ಪರಿಣಾಮವನ್ನು ಹೇಳಿದ್ದವು. ಆಗ ನಾವು ನಮ್ಮ ಅಭಿಪ್ರಾಯವನ್ನು ಕೊಡುತ್ತಿದ್ದವು. ಆದರೆ ಪೂರ್ಣ ವಿಷಯ ಖಾಲಿಯಾಗಿದೆ.

ಶ್ರೀ ಕೆ. ಹನುಮಂತಯ್ಯ - ನೀವು ನಿಮ್ಮ ಸಲಹೆ ನೀಡಬೇಕೆಂದೇ ಅದನ್ನು ಖಾಲಿ ಇಡಲಾಗಿದೆ.

ಜನಾಬ್ ಜೆ. ಮೊಹಮ್ಮದ್ ಇಮಾಂ- ಅದು ಸರಿಯಲ್ಲ . ನೀವು ಜಾರಿಗೆ ತರಬಯಸುವ ಕಾರ್ಯವನ್ನು ಅರ್ಥ ಮಾಡಿಕೊಳ್ಳಲು ನೀವು ಪ್ರತಿಯೊಂದು ವಿಷಯವನ್ನು ನಮ್ಮ ಮುಂದಿಡಬೇಕು. ಆಗ ಮಾತ್ರ ನಾವು ನಮ್ಮ ಸಲಹೆ ನೀಡಬಹುದು. ಆದರೆ ನನ್ನ ಬಗ್ಗೆ ಹೇಳುವುದಾದರೆ ಯಾವುದೇ ಸುಧಾರಣೆ ಕೈಗೊಳ್ಳಲು ಇದು ತಕ್ಕ ಸಮಯವಲ್ಲ (ಯಾವುದೇ ಸುಧಾರಣೆ ನೀವು ಇಷ್ಟು ಬೇಗ ಕೈಗೊಳ್ಳಬಾರದು) ನಿಮಗೆ ಬೇರೆ ಜವಾಬ್ದಾರಿಗಳಿರುವಾಗ (ಕಟ್ಟುಪಾಡುಗಳಿರುವಾಗ) ಜವಾಬ್ದಾರಿಯುತ ಕರ್ತವ್ಯಗಳನ್ನು ನೀವು ಕೈಗೊಳ್ಳಬೇಕಾಗಿರುವಾಗ ತಾಂತ್ರಿಕ ಶಿಕ್ಷಣವನ್ನು ಅಳವಡಿಸುವ ಬಗ್ಗೆ ಯೋಚಿಸುವುದಾಗಲಿ ಅಥವಾ ಶಿಕ್ಷಣ ಪದ್ಧತಿಯಲ್ಲಿ ಹೆಚ್ಚಿನ ಹಣಕಾಸು ತಗಲುವ ಸುಧಾರಣೆಗಳನ್ನು ತರುವ ಬಗ್ಗೆ ಯೋಚಿಸುವುದಾಗಲೀ ಸರಿಯಲ್ಲ. ಹೆಚ್ಚು ಜವಾಬ್ದಾರಿಯುತ ವಿಷಯಗಳ ಬಗ್ಗೆ ಯೋಚನೆ ಮಾಡಿ ಹಾಗೆಯೇ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತರುವಲ್ಲಿ ನಿಮ್ಮ ಗಮನವನ್ನು ಕೇಂದ್ರಿಕರಿಸಿ ಮತ್ತು ಅದರ ಬಗ್ಗೆ ಕಾರ್ಯ ತತ್ಪರವಾಗಿ ನಾನು ಇದನ್ನು ರದ್ದುಗೊಳಿಸಲು ಸಲಹೆ ಮಾಡುತ್ತೇನೆ.

ಶ್ರೀ ಕೆ. ಹನುಮಂತಯ್ಯ- ಮಾನ್ಯರೇ ಚರ್ಚೆಗೆ ಅವಕಾಶ ಕೊಡಲು ನಾನು ವಿಷಯವನ್ನು ಸ್ಪಷ್ಟಪಡಿಸುತ್ತಿದ್ದೇನೆ. ರಾಷ್ಟ್ರಕ್ಕೆ ಅನುಕೂಲವಾಗುವ ನೀತಿಯನ್ನು ರೂಪಿಸುವ ಸಲುವಾಗಿ ಸರ್ಕಾರ ಉದ್ದೇಶ ಪೂರ್ವಕವಾಗಿಯೇ ಈ ಸಭೆಯ ಸಲಹೆಗಳನ್ನು ಆಹ್ವಾನಿಸಿದೆ. ನಾನು ಇದನ್ನು ಪಕ್ಷದ ಪ್ರಶ್ನೆಯಾಗಿ ಭಾವಿಸುತ್ತಿಲ್ಲ. ಒಂದು ವೇಳೆ ಹಾಗೇನಾದರೂ ಇದ್ದಲ್ಲಿ ನಾವು ವಿರೋಧ ಪಕ್ಷ ಅಥವಾ ಇತರ ಸದಸ್ಯರ ಮತದಿಂದ ಬದಲಿಸಲಾಗದ ಒಂದು ಕೆಂಪು ಪಟ್ಟಿಯೊಜನೆಯೊಂದಿಗೆ ಬರಬಹುದಾಗಿತ್ತು. ಮುಕ್ತ ಮನಸ್ಸಿನಿಂದ ನಾನು ಸದಸ್ಯರ ಸಲಹೆಗಳನ್ನು ಸ್ವಾಗತಿಸುತ್ತೇನೆ. ತನ್ಮೂಲಕ ಈ ರಾಷ್ಟ್ರವನ್ನು ಪ್ರಖ್ಯಾತ ರಾಷ್ಟ್ರವನ್ನಾಗಿಸುವ ಯೋಜನೆಯೊಂದನ್ನು ನಾವು ರೂಪಿಸಬಹುದಾಗಿದೆ.

ಜನಾಬ್ ಜೆ. ಮೊಹಮ್ಮದ್ ಇಮಾಂ- ಮಾನ್ಯರೇ ಇದನ್ನು ಪಕ್ಷದ ವಿಷಯವಾಗಿ ನಾನೂ ಕೂಡ ಭಾವಿಸಿಲ್ಲವೆಂದು ಹೇಳಲು ಇಚ್ಛಿಸುತ್ತೇನೆ ಆದರೆ ಇಂತಹ ಪ್ರಮುಖ ಸಮಸ್ಯೆಗೆ ಸಂಬಂಧಿಸಿದಂತೆ ನಮ್ಮ ಉತ್ತಮ ಅಭಿಪ್ರಾಯಗಳನ್ನು ಕೊಡಲು ನಾವು ಬಯಸುತ್ತೇವೆ ನಾವು ಸರ್ಕಾರಕ್ಕೂ ಅದರ ಮಿತಿಗಳನ್ನು ತಿಳಿಸಲು ಇಚ್ಛಿಸುತ್ತೇವೆ ಮತ್ತು ಪ್ರಸ್ತುತದಲ್ಲಿ ಅವರು ತಮ್ಮ ಆಸಕ್ತಿಯನ್ನು ಮಿತಗೊಳಿಸಬೇಕೆಂದು ಹೇಳಬಯಸುತ್ತೇವೆ. ಸರಿ ಹಾಗಾದರೆ, ಪ್ರಸ್ತುತ ಪರಿಸ್ಥಿತಿಯೇನು ? ಮಾನ್ಯರೇ.

ಮಾನ್ಯ ಸಭಾಪತಿಗಳು-ಮಾನ್ಯ ಸದಸ್ಯರು ಈ ವಿಷಯದ ಹಣಕಾಸು ಅಂಶವನ್ನು ಹೇಳುತ್ತಿದ್ದಾರೆ ಹೊರತು ಸುಧಾರಣೆ ಬಗ್ಗೆ ಅಲ್ಲ.

ಜನಾಬ್ ಜಿ. ಮೊಹಮ್ಮದ್ ಇಮಾಂ- ಹೌದು ನೀವು ಅವಶ್ಯವಿರುವ ಹಣಕಾಸನ್ನು ಹೊಂದುವವರೆಗೂ ನಿಮ್ಮ ಎಲ್ಲಾ ಯೋಜನೆಗಳೂ ಪ್ರಯೋಜನಕಾರಿ ಅಲ್ಲ, ಅವೆಲ್ಲವೂ ನಿರರ್ಥಕರ ನಾವು ಪ್ರಸ್ತುತ ಶಾಲೆಗಳನ್ನು ಒಗ್ಗೂಡಿಸಬೇಕಾಗಿದೆ. ಅವಶ್ಯಕ ಸಲಕರಣೆಗಳಿಲ್ಲದ ಹಲವಾರು ಶಾಲೆಗಳಿವೆ. ಅಲ್ಲಿ ಶಿಕ್ಷಕರೂ ಇಲ್ಲ. ಪ್ರಸ್ತುತದಲ್ಲಿ ನೀವು 5000 ಒಬ್ಬ ಶಿಕ್ಷಕ ಪ್ರಾಥಮಿಕ ಶಾಲೆಗಳನ್ನು ಹೊಂದಿದ್ದೀರಾ. ಅವರಿಗೆ ಒಬ್ಬ ಹೆಚ್ಚುವರಿ ಶಿಕ್ಷಕನನ್ನು ಕೊಡುವುದು ಅತೀ ಅವಶ್ಯಕವಾಗಿದೆ. ನಿಮಗೆ ಈಗಾಗಲೇ ಕಟ್ಟುಪಾಡುಗಳಿವೆ ಮತ್ತು ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಮತ್ತು ಪ್ರಯೋಜನಕಾರಿಯಾದ ಶಿಕ್ಷಣವನ್ನು ಕೊಡುವಲ್ಲಿ ನಿಮ್ಮ ಗಮನವನ್ನು ಕೇಂದ್ರಿಕರಿಸಬೇಕಾಗಿದೆ. ನಮಗೆ ಸಾಕಷ್ಟು ಕಟ್ಟುಪಾಡುಗಳಿವೆ, ಮತ್ತೆ ಹಲವು ಹೊಣೆಗಾರಿಕೆಗಳನ್ನು ಕೈಗೊಳ್ಳುವುದು ಅವಶ್ಯಕವೂ ಅಲ್ಲ ಉಪಯುಕ್ತವೂ ಅಲ್ಲವೆಂದು ನಾನು ಭಾವಿಸುತ್ತೇನೆ ಮಾನ್ಯರೇ, ಶಿಕ್ಷಣ ಮಂತ್ರಿಗಳು ಬಹಳ ಆಸಕ್ತಿ ಹೊಂದಿದ್ದಾರೆಂದು ನನಗೆ ಗೊತ್ತು. ಅವರು ಕೆಲವು ಪತ್ರಿಕೆಗಳ ಮೂಲಕ ಕೆಲವು ಸೂಚನೆಗಳನ್ನು ಪ್ರಕಟಿಸಿದ್ದಾರೆ. ಬಹುಷಃ ಅವರ ಯೋಜನೆ ದುಡಿಯುವಾಗ ಕಲಿಯುವುದು ಮತ್ತು ಮಣ್ಣಿನಲ್ಲಿ ಕೆಲಸ ಮಾಡುವುದು ಎಂದು ತೋರುತ್ತದೆ. ಅಂತಹ ಕೆಲವು ವಿಷಯಗಳು ನನಗೆ ಅರ್ಥವಾಗಲಿಲ್ಲ.

ಶ್ರೀ ಕೆ. ಹನುಮಂತಯ್ಯ- ಏಕೆಂದರೆ ನೀವು ಯಾವಾಗಲೂ ಕೆಲಸ ಮಾಡಿಲ್ಲ.

ಜನಾಬ್ ಜೆ. ಮೊಹಮ್ಮದ್ ಇಮಾಂ- ನೀವು ಒಂದು ವೇಳೆ ನಾನು ಮಾಡಿದ ಅರ್ಧದಷ್ಟು ಕೆಲಸ ಮಾಡಿದ್ದರೂ, ನೀವು ಇಲ್ಲಿ ಇರುತ್ತಿರಲಿಲ್ಲ (ನಗು) ಮಾನ್ಯರೇ ಇದುವವರೆಗೂ ನಾವು ತಾಂತ್ರಿಕ ಶಿಕ್ಷಣಕ್ಕೂ ಸಂಬಂಧಿಸಿಂತೆ ನಾವು ಪ್ರಯೋಗಗಳನ್ನು ನಡೆಸಿದ್ದೇವೆ. ನಾವು ಕೆಲವು ಸಂಸ್ಥೆಗಳನ್ನು ಸ್ಥಾಪಿಸಿದ್ದೇವೆ. ಕಾಂಗ್ರೆಸ್ ಪಕ್ಷದ ಇಚ್ಛೆಯಂತೆ ನಾವು ಮೂಲಭೂತ ಶಿಕ್ಷಣದ ಶಾಲೆಗಳನ್ನು ಸ್ಥಾಪಿಸಿದ್ದೇವೆ. ಈ ಶಾಲೆಗಳನ್ನು ಸ್ಥಾಪಿಸಬೇಕೆಂದು ಈ ಪಕ್ಷ ಬಹಳಷ್ಟು ಪ್ರಭಲವಾಗಿ ಹೇಳಿತ್ತು. ಆದರೆ ಇದುವರೆಗೆ ಸಾಧಿಸಿದ ಯಶಸ್ಸಿನ ಬಗ್ಗೆ ಶಿಕ್ಷಣ ಮಂತ್ರಿಗಳಿಂದ ತಿಳಿದುಕೊಳ್ಳಲು ನಾನು ಇಚ್ಛಿಸುತ್ತೇನೆ. ನನ್ನ ಸ್ವಂತ ಅನುಭವದಿಂದ, ವಿದ್ಯಾರ್ಥಿಗಳು ಇಂತಹ ತಾಂತ್ರಿಕ ಶಿಕ್ಷಣ ಪಡೆದುಕೊಳ್ಳಲು ಇಚ್ಛಿಸುತ್ತಿಲ್ಲವೆಂದು ತಿಳಿದಿದ್ದೇನೆ, ಏಕೆಂದರೆ ಅವರ ಉದ್ದೇಶ ಇದರಲ್ಲಿ ತರಬೇತಿ ಪಡೆಯುವುದಲ್ಲ ಆದರೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಸರ್ಕಾರಿ ಸೇವೆಯನ್ನು ಸೇರುವುದೇ ಆಗಿದೆ. ಆದ್ದರಿಂದ ಮುಂದಿನ ಕ್ರಮ ಕೈಗೊಳ್ಳಲು ಮೊದಲು ಇದೊಂದು ಮುಖ್ಯವಾಗಿ, ಗಮನಿಸಬೇಕಾದ ವಿಚಾರ, ವಿದ್ಯಾರ್ಥಿಗಳ ಭಾವನೆ ಏನು ಮಾಧ್ಯಮಿಕ ಶಾಲೆಗಳಲ್ಲಿ ಪಠ್ಯಕ್ರಮದ ಜೊತೆಗೆ ತಾಂತ್ರಿಕ ತರಬೇತಿಯನ್ನು ಸೇರಿಸಬೇಕೇ ಅಥವಾ ಅದನ್ನು ಪ್ರತ್ಯೇಕವಾಗಿಯೇ ಇಡಬೇಕೇ ಮಾನ್ಯರೇ ನಾನು 2 ಅಥವಾ 3 ಸುಧಾರಣೆಗಳನ್ನು ಸಲಹೆ ಮಾಡುತ್ತಿದ್ದೇನೆ.

ಪ್ರಸ್ತುತದಲ್ಲಿ ನಾವು ಶಿಕ್ಷಣದಲ್ಲಿ 3 ಹಂತಗಳನ್ನು ಹೊಂದಿದ್ದೇವೆ- ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಣ, ಮಾನ್ಯರೇ ನನ್ನ ಅಭಿಪ್ರಾಯದಲ್ಲಿ 3 ಹಂತಗಳಿಗೆ ಬದಲಾಗಿ ಕೇವಲ 2 ಹಂತಗಳಿರಬೇಕೆಂದು ಹೇಳುತ್ತೇನೆ, ಏಕೆಂದರೆ ಮಾಧ್ಯಮಿಕ ಶಾಲಾ ಶಿಕ್ಷಣ ಕೇವಲ ಒಂದು (Anomaly) ಅಕ್ರಮತೆಯಾಗಿದೆ. ನಾನು ಅದನ್ನು 2 ವಿಭಾಗಗಳಲ್ಲಿ ವಿಂಗಡಿಸುತ್ತೇನೆ.

ಮೊದಲರ್ಧ ಭಾಗವನ್ನು ಪ್ರಾಥಮಿಕ ಹಂತಕ್ಕೆ ಸೇರಿಸಿ ಮತ್ತು ಇನ್ನರ್ಧ ಭಾಗವನ್ನು ಪ್ರೌಢಶಾಲಾ ಶಿಕ್ಷಣಕ್ಕೂ ಸೇರಿಸಿ. ನೀವು ಪ್ರಾಥಮಿಕ ಹಂತ 6 ವರ್ಷಗಳವರೆಗೆ ಇರುವಂತೆ ನೂಡಬಹುದು ಮತ್ತು ಮಾಧ್ಯಮಿಕ ಶಿಕ್ಷಣವನ್ನು 5 ವರ್ಷಗಳು ಏಕೆ ನೀಡುತ್ತಿದ್ದೇನೆ ಎಂದರೆ:ಯಾವ ಪ್ರಾಥಮಿಕ ಶಿಕ್ಷಣವನ್ನೂ ನಾವು ಈಗ 4 ವರ್ಷಗಳವರೆಗೆ ನೀಡುತ್ತಿದ್ದೇವೋ ಅದು ನಿಜಕ್ಕೂ ವಿಫಲವೆನಿಸುತ್ತಿದೆ. ನಾಲ್ಕು ವರ್ಷಗಳ ನಂತರವೂ ಸ್ವಲ್ಪ ಕಾಲದ ಬಳಿಕ ಯಾರೇ ತರಬೇತಿ ಪಡೆದರೂ ಅವರು ಅನಕ್ಷರಸ್ಥರಾಗುತ್ತಾರೆ ಮತ್ತು ಅನಕ್ಷರತೆಯಲ್ಲಿ ಸೇರಿ ಹೋಗುತ್ತಾರೆ. ಆದ್ದರಿಂದ ಈ ಪರಿಸ್ಥಿತಿಯನ್ನು ವಿರೋಧಿಸಬೇಕು. ಇದನ್ನು ಮತ್ತೆರಡು ವರ್ಷಗಳವರೆಗೆ ಮುಂದುವರೆಸುವುದು ಮತ್ತು ಇದನ್ನು 6 ವರ್ಷಗಳ ಕಡ್ಡಾಯ ಶಿಕ್ಷಣ ಮಾಡುವುದು ಒಳ್ಳೆಯದು. ಮಾಧ್ಯಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸುವುದಕ್ಕೆ ಬದಲಾಗಿ ನಾನು ಮೊದಲ 6 ವರ್ಷಗಳ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಬೇಕೆಂದು ಸೂಚಿಸುತ್ತೇನೆ. 6 ವರ್ಷಗಳ ಪ್ರಾಥಮಿಕ ಶಿಕ್ಷಣದ ನಂತರ ಮತ್ತು 5 ವರ್ಷಗಳ ಪ್ರೌಢಶಿಕ್ಷಣದ ಬಳಿಕ ಒಬ್ಬ ವಿದ್ಯಾರ್ಥಿ ತಾಂತ್ರಿಕ ಶಿಕ್ಷಣ ಇಲ್ಲವೆ ವಿಶ್ವವಿದ್ಯಾನಿಲಯದ ಶಿಕ್ಷಣ ಪಡೆಯಲು ಸ್ವತಂತ್ರನಾಗಿರುತ್ತಾನೆ. ಈ ರೀತಿಯಲ್ಲಿ ನಾವು ಸ್ವಲ್ಪ ಉಳಿತಾಯ ಮಾಡಲು ಸಾಧ್ಯ ಮತ್ತು ಮಾಧ್ಯಮಿಕ ಶಾಲಾ ಹಂತವನ್ನು ರದ್ದುಗೊಳಿಸುವ ಮೂಲಕ, ಪ್ರಾಥಮಿಕ ಶಾಲೆಗಳಿಗೆ ಮತ್ತು ಪ್ರೌಢಶಾಲೆಗಳಿಗೆ ಹೆಚ್ಚು ಕಟ್ಟಡ ನೀಡಲು ನಮಗೆ ಸಾಧ್ಯವಾಗುತ್ತದೆ. ಹಾಗೂ ಇನ್ನು ಮುಂದೆ ನಾವು ಕೇವಲ 2 ರೀತಿಯ ಕಟ್ಟಡಗಳನ್ನು ಕಟ್ಟಬಹದು ಒಂದು ಪ್ರಾಥಮಿಕ ಶಾಲೆ ಹಾಗೂ ಮತ್ತೊಂದು ಮಾಧ್ಯಮಿಕ ಶಾಲೆ.

ಮಾನ್ಯರೇ ಸಮಸ್ಯೆಯೆಂದರೆ, ಪ್ರೌಢಶಾಲೆಯ ಶಿಕ್ಷಣದ ನಂತರ ಏನು ಮಾಡುವುದು ಯಾರೇ ಆಗಲಿ ಉತ್ತೀರ್ಣರಾಗಲೀ ಮತ್ತು ತಮ್ಮ ಶಿಕ್ಷಣವನ್ನು ಪಡೆದಿರುತ್ತಾರೋ, ಅವರ ಮುಖ್ಯ ಉದ್ದೇಶ ಸೇವೆಗೆ ಸೇರುವುದೇ ಆಗಿರುತ್ತದೆಂಬ ಶಿಕ್ಷಣ ಮಂತ್ರಿಗಳ ಮಾತನ್ನು ನಾನು ಒಪ್ಪಿಕೊಳ್ಳುತ್ತೇನೆ. ಅವನು ಇತರ ಯಾವುದೇ ಉದ್ದೇಶಕ್ಕೆ ಸಮರ್ಥನಾಗಿರುವುದಿಲ್ಲ ಯಾರು ಎಸ್.ಎಸ್. ಎಲ್. ಸಿ. ಉತ್ತೀರ್ಣರಾಗಿ ಮಾಧ್ಯಮಿಕ ಶಾಲೆಗಳಿಂದ ಹೊರ ಹೋಗುತ್ತಾರೋ ಅಂತಹವರಿಗೆ ಕಾಲೇಜು ಸೌಲಭ್ಯಗಳನ್ನು ನೀಡಬಾರದು. ಎಸ್.ಎಸ್.ಎಲ್.ಸಿ ಪಾಸಾದ ವಿದ್ಯಾರ್ಥಿಗಳೂ ಕಾಲೇಜು ಪ್ರವೇಶಿಸಬೇಕೆಂಬ ಕಡ್ಡಾಯವೇನಾದರೂ ಇದೆಯೇ ಅಥವಾ ಅವರನ್ನು ಇನ್ನಿತರ ಅಧ್ಯಯನಕ್ಕೆ ತಿರುಗಿಸುವುದು ಉಚಿತವಲ್ಲವೆ? ಇಂಗ್ಲೆಂಡಿನಲ್ಲಿ ಎಸ್.ಎಸ್.ಎಲ್.ಸಿ. ನಂತರ-ಮುಖ್ಯ ಮಂತ್ರಿಗಳು ಹೇಳಿದರು ನನಗೆ ಇಂಗ್ಲೆಂಡ್ ಎಂದರೆ ಇಷ್ಟ ಮತ್ತು ನಾನು ನನ್ನ ಹೃದಯವನ್ನು ಅಲ್ಲೇ ಬಿಟ್ಟಿದ್ದೇನೆಂದು ಅವರೂ ಕೂಡ ತಮ್ಮ ಹೃದಯವನ್ನು ಅಲ್ಲೇ ಬಿಟ್ಟಿದ್ದಾರೆಂದು ನಾನು ಭಾವಿಸುತ್ತೇನೆ......

(ಧ್ವನಿಗಳು) -ಇಲ್ಲಾ, ಇಲ್ಲಾ ಎಸ್.ಎಸ್.ಎಲ್.ಸಿ. ನಂತರ, ಅವರು ಮುಂದಿನ ಶಿಕ್ಷಣಕ್ಕೆ ಎರಡು ಮಾರ್ಗಗಳನ್ನು ಹೊಂದಿದ್ದಾರೆ. ತಾಂತ್ರಿಕ ಶಿಕ್ಷಣ ಇಲ್ಲವೇ ಕಾಲೇಜು ಶಿಕ್ಷಣ ಅಲ್ಲಿ ಎಸ್.ಎಸ್. ಎಲ್. ಸಿ. ಪಾಸಾದ ಪ್ರತಿಯೊಬ್ಬರನ್ನು ಕಾಲೇಜಿಗೆ ಸೇರಿಸಿಕೊಳ್ಳಲಾಗುವುದಿಲ್ಲ. ಕಾಲೇಜು ಪ್ರವೇಶ ಕೇವಲ ಆಯ್ಕೆಯ ಆಧಾರದ ಮೇಲೆ ಮತ್ತು ಎಸ್.ಎಸ್.ಎಲ್.ಸಿ. ಪಾಸಾದವರಲ್ಲಿ 10-15% ವಿಶ್ವವಿದ್ಯಾನಿಲಯ ಸೇರುತ್ತಾರೆ ಉಳಿದ ವಿಧ್ಯಾರ್ಥಿಗಳು ತಾಂತ್ರಿಕ ಶಿಕ್ಷಣಕ್ಕೆ ಹೋಗುತ್ತಾರೆಂದು ನಾನು ಭಾವಿಸುತ್ತೇನೆ ಅಲ್ಲಿಯೂ ಕೂಡ, ಸಾವಿರಗಟ್ಟಲೆ ಸರಕಾರದಿಂದ

ನಡೆಸಲ್ಪಡುವ ಹಾಗೂ ಖಾಸಗಿ ತಾಂತ್ರಿಕ ಸಂಸ್ಥೆಗಳಿವೆ. ಮತ್ತು ಅಲ್ಲಿ ತರಬೇತಿ ಹೊಂದಿದವರು ದೊಡ್ಡ ವ್ಯಾಪಾರಿ ಸಂಸ್ಥೆ ಅಥವಾ ಕಾರ್ಖಾನೆ ಅಥವಾ ಬೇರೆ ಕಡೆಗಳಲ್ಲಿ ಉದ್ಯೋಗವನ್ನು ಪಡೆಯುತ್ತಾರೆ ನಾನು ಅಲ್ಲಿದ್ದಾಗ, ನಾನು ಒಂದು ಸಂಸ್ಥೆಯನ್ನು ನೋಡಿದೆ. - ಕ್ಷೌರಿಕ ತರಬೇತಿ ಸಂಸ್ಥೆ ಅಲ್ಲಿ ಅನೇಕ ಹುಡುಗರು ತರಬೇತಿ ಹೊಂದುವುದನ್ನು ನಾನು ನೋಡಿದೆ (ನಗು) ಅದು ಪಿಕಾಡಿನಲ್ಲಿ ಸರ್ಕಸ್ ಅಥವಾ ಇನ್ನೊಂದು ಕ್ಷೌರಿಕ ಸಂಸ್ಥೆ (Institute of Hair Cutting) ಅವರು ತರಬೇತಿ ನೀಡುತ್ತಿದ್ದಾರೆ........

ಧ್ವನಿಗಳು- ಕ್ಷೌರದಲ್ಲಿ ಡಿಪ್ಲೊಮಾಗಳಿವೆಯೇ? ಶ್ರೀ.ಪಿ.ಆರ್. ರಾಮಯ್ಯ (ಬಸವನಗುಡಿ) -ಅಲ್ಲಿ ಕೆಲವು ಸಂಸ್ಥೆಗಳಿರುವುದನ್ನು ಕೇಳಿದ್ದೇನೆ. ಏನಾದರೂ ಡಿಪ್ಲೊಮಾ ನೀಡುತ್ತಾರೆಯೇ?

ಜನಾಬ್ ಜಿ. ಮೊಹಮ್ಮದ್ ಇಮಾಂ- ಅಲ್ಲಿ ಅಂತಹ ಕೆಲವು ಅವಕಾಶ ಇರಬಹುದು ಡಿಪ್ಲೊಮಾ ನೀಡುತ್ತಿರಬಹುದು.

(Voices) ಧ್ವನಿಗಳು- ಎಷ್ಟು ವರ್ಷದ ಶಿಕ್ಷಣ (Course)

ಮಾನ್ಯ ಸಭಾಪತಿಗಳು-ಬಹಳಷ್ಟು (ವಿವರಣೆ) ವಿಸ್ತರಣೆ (Details) ಮಾನ್ಯ ಸದಸ್ಯರು ಈ ರೀತಿ ಹೇಳಿಕೆಗಳನ್ನು ಪರಿಶೀಲಿಸಬೇಕಾಗಿಲ್ಲ.

ಜನಾಬ್ ಜೆ. ಮೊಹಮ್ಮದ್ ಇಮಾಂ- ಇಲ್ಲಿ ಕೂಡ ನೀವು ಹಲವಾರು ಸಂಸ್ಥೆಗಳನ್ನು ಪ್ರಾರಂಭಿಸಬಹುದು. ಆದರೆ ಅವರನ್ನು ಪೂರ್ಣವಾಗಿ ಹೀರುವ (ಬಳಸಿಕೊಳ್ಳುವ) ನಿಗಮ ಹಾಗೂ ಸಂಘಟನೆಗಳು ಬಹಳ ಕಡಿಮೆ ಇವೆ. ಆದ್ದರಿಂದ ನಾವು ನಿಯಮಿತವಾಗಿ ತಾಂತ್ರಿಕ ಶಾಲೆಗಳನ್ನು ಅಂದರೆ ವೃತ್ತಿ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಬಹುದು. ಪ್ರತಿಯೊಂದು ಜಿಲ್ಲೆಗೆ ಒಂದರಂತೆ ಪ್ರಾರಂಭಿಸಬಹುದು ಮತ್ತು ಈ ರೀತಿಯ ತಾಂತ್ರಿಕ ಶಿಕ್ಷಣಕ್ಕೂ ಎಸ್.ಎಸ್.ಎಲ್.ಸಿ ಹಂತದಲ್ಲಿ ಪಾಸಾದ ಅನೇಕ ವಿದ್ಯಾರ್ಥಿಗಳನ್ನು ಕಳಿಸಬಹುದು. ಆದರೆ ಇದರ ಬಗ್ಗೆ ನಾನು ಬಹಳ ನಿರ್ದಿಷ್ಟವಾಗಿದ್ದೇನೆ. ಕಾಲೇಜುಗಳಿಗೆ ಪ್ರವೇಶ ನೀಡುವಾಗ ಎಸ್.ಎಸ್.ಎಲ್.ಸಿ. ಪಾಸಾದ ಪ್ರತಿಯೊಬ್ಬರನ್ನು ಸೇರಿಸಿಕೊಳ್ಳಬೇಕೆಂಬ ನಿಯಮ ಇರಬಾರದು. ನಾವು ಒಂದು ತಡೆ ಹಿಡಿಯುವ ಪದ್ಧತಿಯನ್ನು ಹೊಂದುವ ಹಂತಕ್ಕೆ ಬಂದಿದ್ದೇವೆ ಪ್ರತಿವರ್ಷ 1500 ಪದವೀಧರರನ್ನು ಉತ್ಪಾದಿಸಲಾಗುತ್ತಿದೆ ಮತ್ತು ಉದ್ಯೋಗವಿಲ್ಲದೆ ಅದರಲ್ಲಿ ಅನೇಕರು ರಸ್ತೆಗಳಲ್ಲಿ ಅಲೆದಾಡುವಂತಾಗಿದೆ. ರಾಜ್ಯದಲ್ಲಿ ಇರುವ ಏಕೈಕ ಧ್ವನಿ ಎಂದರೆ ರಾಜ್ಯವಷ್ಟೇ. ಅದು ಸರಕಾರ, ಪ್ರತಿವರ್ಷ ಅವರಿಗೆ ಎಷ್ಟು ಜನ ಬೇಕಾಗುತ್ತಾರೆ ಎಂಬುದನ್ನು ಸರಕಾರ ತಿಳಿದುಕೊಳ್ಳಬೇಕು ಮತ್ತು ನಂತರ 109 ವರ್ಷಗಳಲ್ಲಿ ಎಷ್ಟು ಜನ ಪದವೀಧರರು ಅವರಿಗೆ ಅವಶ್ಯಕ ಹಾಗೂ ಅದಕ್ಕೆ ತಕ್ಕಂತೆ ಅವರು ಕಾಲೇಜುಗಳಿಗೆ ಪ್ರವೇಶವನ್ನು ನಿಯಂತ್ರಿಸಬೇಕು ಉಳಿದವರು ಇತರ ವೃತ್ತಿಗಳನ್ನು ಕೈಗೊಳ್ಳುವಂತೆ ಮಾಡಬೇಕು. ಒಂದು ವೇಳೆ ಅವರು ರೈತರ ಮಕ್ಕಳಾಗಿದ್ದರೆ ಅವರನ್ನು ಕೃಷಿಯಲ್ಲಿ ತೊಡಗಿಸಿಕೊಳ್ಳುವಂತೆ ಮಾಡಬೇಕು. ಅವರು ವ್ಯಾಪಾರಿಗಳ ಮಕ್ಕಳಾಗಿದ್ದರೆ, ಅವರು ವ್ಯಾಪಾರಿ ವಿಷಯಗಳ ಅಧ್ಯಯನ ಮಾಡಬಹುದು ಮತ್ತು ಕುಟುಂಬದ ಪ್ರತಿಯೊಬ್ಬರೂ ಪದವೀಧರರಾಗಬೇಕೆಂಬ ಗೀಳು ಹೋಗಬೇಕು. ಇದು ಸರಕಾರದ ವಿಷಯದಲ್ಲಲ್ಲ. ವಿಶ್ವವಿದ್ಯಾನಿಲಯ ಕೆಲವು ತೀವ್ರ ಪರಿಹಾರಗಳನ್ನು ಕೈಗೊಳ್ಳಬೇಕು ಇದನ್ನು ಮಾಡದ ಹೊರತು,

ಒಂದು ವೇಳೆ ಪದವೀಧರರನ್ನು ಅಧಿಕ ಪ್ರಮಾಣದಲ್ಲಿ ತಯಾರಿಸುವ (ಉತ್ಪಾದಿಸುವ) ಈ ಕ್ರಿಯೆ ಮುಂದುವರೆದರೆ, ಆಗ ಅಸ್ತವ್ಯಸ್ತತೆ, ಶ್ರಮಶಕ್ತಿಯ ನಷ್ಟ ಮತ್ತು ಹಣದ ಅಪವ್ಯಯುವುಂಟಾಗುತ್ತೆ ಆದ್ದರಿಂದಲೇ ತಕ್ಷಣದಲ್ಲಿ ಈ ಮಹತ್ವದ ವಿಷಯುವನ್ನು ಪರಿಗಣಿಸಬೇಕಾಗಿದೆ.

ಮಾನ್ಯರೇ, ನಾನು ಸಾಕಷ್ಟು ಸಮಯವನ್ನು ತೆಗೆದುಕೊಂಡಿದ್ದೇನೆ ಅನೇಕ ಆಸಕ್ತರು ಮಾತನಾಡುವವರಿದ್ದಾರೆ ನಾನು ನನ್ನ ಅಭಿಪ್ರಾಯಗಳನ್ನು ತಿಳಿಸಿದ್ದೇನೆ. ನಾನು ಮೊದಲ ಆದ್ಯತೆಕೊಡುತ್ತೇನೆ ಮತ್ತು ಸಂವಿಧಾನದಲ್ಲಿ ಕೊಟ್ಟಿರುವ ನಿರ್ದೇಶನಗಳನ್ನು ಜಾರಿಗೆ ತರುವಲ್ಲಿ ಸರಕಾರ ತಮ್ಮ ಪೂರ್ಣ ಗಮನ ಹರಿಸಬೇಕೆಂದು ಸರಕಾರಕ್ಕೆ ಕೇಳಿಕೊಳ್ಳುತ್ತೇನೆ. ಹತ್ತು ವರ್ಷಗಳಲ್ಲಿ ನಾವು ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ನೀಡಬೇಕು. ಮತ್ತು ಅದರ ಎಲ್ಲಾ ಸಂಪನ್ಮೂಲಗಳನ್ನು ಇದರೆಡೆಗೆ ವರ್ಗಾಯಿಸಬೇಕೆಂದು ಕೇಳಿಕೊಳ್ಳುತ್ತೇನೆ ಒಂದು ವೇಳೆ ಸಂಪನ್ಮೂಲಗಳು ಅವಕಾಶ ನೀಡಿದರೆ ಹಾಗೂ ಅವರು ಒಂದು ವೇಳೆ ಅವಶ್ಯಕ ಸಂಪನ್ಮೂಲಗಳನ್ನು ಪಡೆಯಲು ಸಾಧ್ಯವಾದರೆ ಆಗ ಅವರು ತಾಂತ್ರಿಕ ಶಿಕ್ಷಣವನ್ನು ನೀಡಬಹುದಾಗಿದೆ. ನಾನು ತಾಂತ್ರಿಕ ಶಿಕ್ಷಣ ನೀಡುವಲ್ಲಿ ತೀವ್ರ ಆಸಕ್ತಿಹೊಂದಿದ್ದೇನೆ. ಆದರೆ ಮಾಧ್ಯಮಿಕ ಶಾಲೆಯಲ್ಲಿ ಅಥವಾ ಪ್ರೌಢಶಾಲಾ ಶಿಕ್ಷಣದೊಂದಿಗೆ ತಾಂತ್ರಿಕ ಶಿಕ್ಷಣ ಕೊಡುವುದನ್ನು ನಾನು ಒಪ್ಪುವುದಿಲ್ಲ. ಏಕೆಂದರೆ ಅದು ವಿಫಲವೆನಿಸಿದೆ. ಪ್ರೌಢಶಾಲಾ ಮತ್ತು ಮಾಧ್ಯಮಿಕ ಶಾಲಾ ಶಿಕ್ಷಣದಿಂದ ಹೊರತಾಗಿ ತಾಂತ್ರಿಕ ಶಿಕ್ಷಣ ಪ್ರತ್ಯೇಕವಾಗಿ ಪ್ರಾರಂಭಿಸಬೇಕು ಮತ್ತು ಸೂಕ್ತ ತರಬೇತಿ ಪಡೆಯುವಂತೆ ಹುಡುಗರನ್ನು ಅವರ ಮಾಧ್ಯಮಿಕ ಶಾಲೆ ಅಥವಾ ಎಸ್.ಎಸ್ .ಎಲ್. ಸಿ.ಶಿಕ್ಷಣದ ನಂತರ ತಾಂತ್ರಿಕ ಶಾಲೆಗಳಿಗೆ ವರ್ಗಾಯಿಸಬೇಕೆಂದು ಹೇಳುತ್ತೇನೆ. ಕಾಲೇಜು ಶಿಕ್ಷಣಕ್ಕೆ ಸಂಬಂಧಿಸಿದಂತೆ, ಹಣದ ಅಪವ್ಯಯ ಹಾಗೂ ಶ್ರಮಶಕ್ತಿಯ ಅಪವ್ಯಯ ತಡೆಯಲು ಕಾಲೇಜು ಪ್ರವೇಶವನ್ನು ನಾವು ನಿಯಂತ್ರಿಸಬೇಕು.

(ಸಂಗ್ರಹ: ವಿಧಾನ ಸಭಾ ಕಲಾಪ ದಿನಾಂಕ ಜುಲೈ 14, 1952)

## ಮೈಸೂರು ಉದ್ದೇಶ ಮಸೂದೆ 1953

## (Mysore Appropriation Bill 1953)

### ಹಣಕಾಸಿನ ದುರುಪಯೋಗದ ಬಗ್ಗೆ.

ಶ್ರೀ ಜೆ. ಮಹಮ್ಮದ್ ಇಮಾಮ್: ಹೌದು ಮಾನ್ಯರೇ, ನಾನು ಈ ಸಭೆಯಲ್ಲಿ ಮಂಡಿಸಲ್ಪಟ್ಟ ಮಸೂದೆಯನ್ನು ವಿರೋಧಿಸುತ್ತೇನೆ. ನಮಗೆ ಸಚಿವಾಲಯಕ್ಕೆ 32 ಕೋಟಿ ರೂಪಾಯಿವರೆಗೆ ಮತ ಹಾಕುವ ಅವಕಾಶ ನೀಡಲಾಗಿದೆ. ಈ ಹಣವನ್ನು ವರ್ಷದ ಅವಧಿಯಲ್ಲಿ ವೆಚ್ಚಮಾಡಬಹುದಾಗಿದೆ. ಹೀಗೆ ಮಾಡುವ ಮೊದಲು ನಿಗದಿಸಲ್ಪಟ್ಟ ಮೊತ್ತವನ್ನು ವಿವೇಕ ಪೂರ್ಣವಾಗಿ ಹಾಗೂ ಸಮರ್ಪಕವಾಗಿ ವೆಚ್ಚ ಮಾಡಲಾಗುತ್ತದೆಂಬ ಅಂಶದ ಬಗ್ಗೆ ನಮಗೆ ನಾವು ತೃಪ್ತರಾಗಬೇಕು. ಈ ಮೊತ್ತವನ್ನು ವೆಚ್ಚ ಮಾಡುವಾಗ ಪ್ರಜಾಪ್ರಭುತ್ವದಲ್ಲಿರುವ ತತ್ವಗಳು ಉಲ್ಲಂಘನೆಯಾಗದಂತೆ ನೋಡಿಕೊಳ್ಳಬೇಕು.

ಎಲ್ಲಾ ಸದಸ್ಯರೂ, ಮಿತವ್ಯಯದ ಅವಶ್ಯಕತೆಯನ್ನು ಒತ್ತಾಯಿಸುತ್ತಿದ್ದಾರೆ ಮತ್ತು ಸರಕಾರ ಇಂತಹ ಪ್ರಮುಖ ಅಂಶದ ಬಗ್ಗೆ ಹೆಚ್ಚಿನ ಕಾಳಜಿ ತೋರಿಸುತ್ತಿಲ್ಲವೆಂದು ಹೇಳುತ್ತಿದ್ದಾರೆ. ನಾನು ಈ ವಿಷಯದ ಬಗ್ಗೆ ಆಳವಾಗಿ ಪ್ರಸ್ತಾಪಿಸುವುದಿಲ್ಲ. ಏಕೆಂದರೆ , ಈ ಹಿಂದೆ ನಾನು ಮಿತವ್ಯಯದ ಬಗ್ಗೆ ಸರಕಾರದ ವೈಫಲ್ಯವನ್ನು ವಿವರಿಸಿದ್ದೇನೆ. ಆದರ ನಾನು ಕೇವಲ ಒಂದು ಅಂಶದ ಬಗ್ಗೆ ಒತ್ತಿಹೇಳಲು ಇಚ್ಛಿಸುತ್ತೇನ, ಅದೇನೆಂದರೆ ಸ್ವತಃ ಮಂತ್ರಿಗಳೇ ವ್ಯಕ್ತಿಗತವಾಗಿ ಮಿತವ್ಯಯಕ್ಕೆ ಸಂಬಂಧಿಸಿದಂತೆ ಇತರರಿಗೆ ನಿದರ್ಶನ ನೀಡಬೇಕು ಮತ್ತು ಈ ವಿಷಯದಲ್ಲಿ ಅವರ ಒಂದು ಪ್ರಮುಖ ಚಟುವಟಿಕೆಯ ಬಗ್ಗೆ ಹೇಳಲಿಚ್ಛಿಸುತ್ತೇನೆ. ಅದೇನೆಂದರೆ ಅವರು ಕೈಗೊಳ್ಳುವ ಪ್ರವಾಸ.

ಇದುವರೆಗೆ ಎರಡೂ ಕಡೆಗಳಿಂದ ಸಭೆಯಲ್ಲಿ ಅನೇಕ ಸದಸ್ಯರು ಹಲವಾರು ಪ್ರಶ್ನೆಗಳನ್ನು ಇಟ್ಟಿದ್ದಾರೆ ಮತ್ತು ಕೆಲವರು ಇದರ ಬಗ್ಗೆ ಮಾಹಿತಿ ಸಂಗ್ರಹಿಸಲು ಪ್ರವಾಸವನ್ನೂ ಕೂಡ ಕೈಗೊಂಡಿದ್ದಾರೆ.

ಶ್ರೀ ಎ. ಬೀಮಪ್ಪ ನಾಯ್ಕ: ಹಾಗಾದರೆ ಅವರು ಪ್ರವಾಸ ಮಾಡಬಾರದಾಗಿತ್ತು ಎಂಬುದು ನಿಮ್ಮ ಭಾವನೆಯೇ?

ಶ್ರೀ ಜೆ. ಮಹಮ್ಮದ್ ಇಮಾಂ: ದಯವಿಟ್ಟು ತಾಳ್ಮೆವಹಿಸಿ, ನಾನು ನಿಮಗೆ ಅವರು ಹೇಗೆ ಮತ್ತು ಎಷ್ಟರವರೆಗೆ ಇದನ್ನು ಕಾರ್ಯರೂಪಕ್ಕೆ ತರಬಹುದೆಂದು ಹೇಳುತ್ತೇನೆ. ನನ್ನ ಸ್ನೇಹಿತ ನನಗೆ ನೇರ ಪ್ರಶ್ನೆ ಕೇಳುತ್ತಿದ್ದಾರೆ. ಅವರು ಪ್ರವಾಸ ಕೈಗೊಳ್ಳಬಾರದೆ? ನಾನೂ ಕೂಡ ಮಂತ್ರಿಯಾಗಿದ್ದೆ. ಆಗಲೂ ಇತರ ಮಂತ್ರಿಗಳು ಪ್ರವಾಸ ಕೈಗೊಳ್ಳುತ್ತಿದ್ದುದನ್ನು ನೋಡಿದ್ದೇನೆ ಮತ್ತು ಈಗಲೂ ಮಂತ್ರಿಗಳು ಪ್ರವಾಸ ಹೋಗುವುದನ್ನು ನೋಡುತ್ತಿದ್ದೇನೆ.

ಒಬ್ಬ ಗೌರವಾನ್ವಿತ ಸದಸ್ಯರು-ಈ ಹಿಂದೆ ಇದ್ದದ್ದು ಜವಾಬ್ದಾರಿಯುತವಾದ ಸರ್ಕಾರವಾಗಿರಲಿಲ್ಲ .

ಶ್ರೀ ಜೆ. ಮಹಮ್ಮದ್ ಇಮಾಂ - ಪ್ರಜಾಪ್ರಭುತ್ವ ಪದ್ಧತಿಯಲ್ಲಿ, ಮಂತ್ರಿಗಳು ತಮ್ಮ ಪ್ರವಾಸಗಳನ್ನು ಆದಷ್ಟು ಪ್ರಮಾಣದಲ್ಲಿ ಕಡಿಮೆ ಮಾಡಬೇಕೆಂದು ನಾನು ಹೇಳುತ್ತಿದ್ದೇನೆ. ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಮಂತ್ರಿಗಳು ಮತ್ತು ಶಾಸಕಾಂಗ, ನೀತಿಗಳನ್ನು ಮಂಡಿಸುತ್ತವೆ. ಆದರೆ ಅವುಗಳ ಕಾರ್ಯಾಚರಣೆಯನ್ನು ನಾಗರೀಕ ಸೇವಾ ವಿಭಾಗ ನೋಡಿಕೊಳ್ಳುತ್ತದೆ. ಇದೇ ರೀತಿಯ ಪ್ರಜಾಪ್ರಭುತ್ವ ಪದ್ಧತಿ ಇರುವ ಇಂಗ್ಲೆಂಡಿನಲ್ಲಿ ನಾನು ಅಧಿಕಾರಯುಕ್ತವಾಗಿ ಹೇಳಬಲ್ಲೆ ಮಂತ್ರಿಗಳು ಪ್ರವಾಸ ಕೈಗೊಳ್ಳುವುದೇ ಬಹಳ ವಿರಳ. ಅವರು ಪ್ರವಾಸವನ್ನೂ ಕೈಗೊಳ್ಳುವುದಿಲ್ಲ ಮತ್ತು ಸಾಂಪ್ರದಾಯಿಕ ಸಮಾರಂಭಗಳಲ್ಲೂ ಭಾಗವಹಿಸುವುದಿಲ್ಲ. ನಾನು ಅಲ್ಲಿ ಮೂರು ತಿಂಗಳು ಇದ್ದೆ ಮತ್ತು ಆ ಅವಧಿಯಲ್ಲಿ ನಾನು ಮಂತ್ರಿಗಳು ಪ್ರವಾಸ ಹೋಗಿದ್ದನ್ನಾಗಲೀ, ಅಥವಾ ಅಡಿಗಲ್ಲು ಇಟ್ಟಿದ್ದರ ಬಗ್ಗೆ ಯಾವುದೇ ವರದಿಯನ್ನು ಓದಿಲ್ಲ. ಎಲ್ಲಾ ಸಾಂಪ್ರದಾಯಿಕ ಗೌರವಗಳು ಕೇವಲ ಒಬ್ಬನೇ ವ್ಯಕ್ತಿಗೆ ಮೀಸಲು ಮತ್ತು ರಾಜಮನೆತನದ ಒಬ್ಬ ಸದಸ್ಯನಿಗೆ ಇರುತ್ತದೆ. ಎಲ್ಲಾ ಪ್ರವಾಸ ಮತ್ತು ನಾಗರೀಕ ಸಮಸ್ಯೆಗಳನ್ನು ಗುರುತಿಸುವ ಕಾರ್ಯವನ್ನು ಯಾವುದೇ ಪಕ್ಷಕ್ಕೆ ಸೇರದ ನಾಗರೀಕ ಸೇವೆಯಲ್ಲಿರುವವರು ನೋಡಿಕೊಳ್ಳುತ್ತಾರೆ ಇಲ್ಲಿ ಪ್ರವಾಸಗಳನ್ನು 3 ಉದ್ದೇಶಗಳಿಂದ ಕೈಗೊಳ್ಳಲಾಗುತ್ತದೆ. ಮೊದಲನೆಯದಾಗಿ, ಸರಕಾರದ ಕರ್ತವ್ಯದ ನೆಪದಲ್ಲಿ ಅವರು ಸಾಂಪ್ರದಾಯಿಕ ಪ್ರವಾಸಗಳನ್ನು ಕೈಗೊಳ್ಳುತ್ತಾರೆ ಮತ್ತು ಪ್ರಚಾರ ಹಾಗೂ ಚುನಾವಣಾ ಪ್ರವಾಸಗಳು ಮತ್ತು ಯಾತ್ರಸ್ಥಳದ ಪ್ರವಾಸಗಳನ್ನು ಕೈಗೊಳ್ಳುತ್ತಾರೆ. ಪ್ರವಾಸದಲ್ಲಿರುವಾಗ ಅವರು ಪ್ರಚಾರ ಕೈಗೊಳ್ಳುತ್ತಾರೆ. ನಾನು ನಿಮಗೊಂದು ಉದಾಹರಣೆ ಕೊಡುತ್ತೇನೆ. 2 ತಿಂಗಳ ಹಿಂದೆ, ಪ್ರಜಾ ಸೋಷಲಿಸ್ಟ್ ಪಕ್ಷ ಒಂದು ಸತ್ಯಾಗ್ರಹ ಹೂಡಿದ್ದಾಗ ಮತ್ತು ಗೋಪಾಲ ಗೌಡರನ್ನು ಬಂಧಿಸಿದ್ದ ಸಂದರ್ಭದಲ್ಲಿ ನನಗೆ ನೆನಪಿರುವಂತೆ ಮುಖ್ಯಮಂತ್ರಿಗಳು ಒಂದೆಡೆಯಿಂದ ಇನ್ನೊಂದೆಡೆ ಹೋಗಿ ಸಭೆಗಳನ್ನು ಉದ್ದೇಶಿಸಿ ಮಾತನಾಡುತ್ತಾ ಇದ್ದರು. ಅವರು ಏನನ್ನು ಹೇಳುತ್ತಿದ್ದರು? ನಾನು ಅವರು ಬಳಸಿದ ಮಾತುಗಳನ್ನು ಅರ್ಥಮಾಡಿಕೊಳ್ಳುತ್ತಿದ್ದೆ.

ವಿರೋಧ ಪಾರ್ಟಿಯವರು ಅಸಭ್ಯವರ್ತನೆ, ಅಶ್ಲೀಲ ವರ್ತನೆ ಎಂದು ಪ್ರಚಾರ ಮಾಡಲಿಕ್ಕೆ ಹೋಗುತ್ತಿದ್ದಾರೆ. ಅವರು ಹೀಗೆ ಪ್ರತಿಯೊಂದು ಸಂದರ್ಭದಲ್ಲಿಯೂ ಸರ್ಕಾರಿ ಡ್ಯೂಟಿಗೆಂದು ಹೊರಗಡೆ ಪ್ರವಾಸ ಹೋಗಿದ್ದಾಗ, ಅವರು ಹೀಗೆಂದು ಟೀಕೆಮಾಡಲಿಕ್ಕೆ ಹೋಗುತ್ತಿದ್ದಾರೆಯೇ ವಿನಃ ಬೇರೆ ಏತಕ್ಕೂ ಅಲ್ಲ. ಮೊನ್ನೆ ಮಾನ್ಯ ಮುಖ್ಯಮಂತ್ರಿಗಳೂ ಮತ್ತು ಕೆಲವು ಇತರ ಮಂತ್ರಿಗಳೂ ಜೋಗ್, ಹಾಸನ ಮತ್ತು ಶಿವಮೊಗ್ಗ ಈ ಸ್ಥಳಗಳಿಗೆ ಸರ್ಕಾರಿ ಡ್ಯೂಟಿಗೆಂದು ಪ್ರವಾಸ ಬಂದಿದ್ದಾಗ, ಅವರ ಮುಖ್ಯ ಉದ್ದೇಶ ಸರ್ಕಾರಿ ಕೆಲಸಗಳನ್ನು ಮಾಡಬೇಕೆಂದಲ್ಲ. ಪ್ರತಿಪಕ್ಷದವರನ್ನು ಜನರ ಮುಂದೆ ಹೀಯಾಳಿಸುವುದಕ್ಕಾಗಿಯೂ ಮತ್ತು ಟೀಕೆ ಮಾಡುವುದಕ್ಕಾಗಿಯೂ ಬಂದಿದ್ದರು. ಆಗ ಹಳ್ಳಿಯಿಂದ ಹಳ್ಳಿಹೋಗಿ ಇವರು ಭಾಷಣ ಮಾಡಿದ್ದು ಇದನ್ನೇ ಆದರೆ ನಾನು ಅವರು ಹಾಗೆ ಪ್ರಚಾರ ಮಾಡಕೂಡದು ಎಂದು ಹೇಳುವುದಿಲ್ಲ. ಮಹರಾಯರಾಗಿಮಾಡಿಕೊಳ್ಳಲಿ, ಆದರೆ ನಾನು ಹೇಳುವುದು ಅವರ ಸ್ವಂತ ಖರ್ಚಿನಿಂದ ಆ ಕೆಲಸಕ್ಕೆ ಹೋಗಬೇಕು ಎಂದು. ಅವರು ಸರ್ಕಾರದ ಪರವಾಗಿ ಹೊರಗಡೆ ಸಂಚಾರ ಹೋದಾಗ ಸರ್ಕಾರಿ ಪರವಾದ ಕೆಲಸಗಳನ್ನು ಮಾಡಬೇಕೇ ಹೊರತು, ಇನ್ನೊಂದು ಪಾರ್ಟಿಯ ವಿಚಾರವಾಗಿ ಹೀನ ನುಡಿಗಳನ್ನು ಆಡುವುದಕ್ಕಾಗಿ ಅಲ್ಲ. ಹೀಗೆ ಮಾಡುವುದು ಪ್ರಜಾಪ್ರಭುತ್ವ ಸರ್ಕಾರದ

ನೀತಿಯೂ ಅಲ್ಲ. ಹೀಗೆ ಅವರು ಸರ್ಕಾರಿ ಕೆಲಸಕ್ಕೆಂದು ಹೋಗಿ ಆ ರೀತಿ ವರ್ತಿಸಿರತಕ್ಕದ್ದು ಸಲ್ಲದು, ನ್ಯಾಯವಾದುದಲ್ಲ ಎಂದು ಹೇಳುತ್ತೇನೆ.

ನಿನ್ನ ತಾನೆ ಮಾತನಾಡುತ್ತ ಮಾನ್ಯ ಮುಖ್ಯಮಂತ್ರಿಗಳು ಹೇಳಿದರು."ನನ್ನ ಜೊತೆಯಲ್ಲಿ ಹಿಂದೆ ಮುಂದೆ 4-5- ಸಾವಿರ ಜನರಿದ್ದರು. ಆಗ ನೀವು ಧೂಳಿನಲ್ಲಿ ರಸ್ತೆಪಕ್ಕದಲ್ಲಿ ನಿಂತಿದ್ದಿರಿ" ಎಂದು ಹೀಗೆ ಈ ಮಾನ್ಯ ಸಭೆಯ ಮಾನ್ಯ ಸದಸ್ಯರೊಬ್ಬರ ಘನತೆಯನ್ನು ಹೀಯಾಳಿಸಿ ಮಾತನಾಡುವುದು ಪ್ರಜಾ ಸರ್ಕಾರದ ಘನತೆಯೇ?

ಆದರೆ ನಾನು ಹೇಳಿದ್ದೇನೆ? ದುಡ್ಡನ್ನು ಉಳಿಸುವುದನ್ನು ಬಿಟ್ಟು ಪ್ರತಿಯೊಂದಕ್ಕೂ ನೀವು ಹೀಗೆ ಖರ್ಚು ಮಾಡುತ್ತಿದ್ದೀರಿ, ಇದು ಆಗಬಾರದು ಎಂದು.

ಆದರೆ ಈ ಮಂತ್ರಿವರ್ಯರುಗಳು ಪ್ರವಾಸದ ಬಗ್ಗೆ ಮಾತನಾಡುವಾಗ ನಾನು ಶಾಭಾಸ್‌ಗಿರಿ ಕೊಡುವುದು ನಮ್ಮ ಜಿಲ್ಲೆಯ ಸಚಿವರಿಗೆ ಏತಕ್ಕೆಂದರೆ ಅವರು ಅಷ್ಟು ಹೆಚ್ಚಾಗಿ ಎಲ್ಲಿಯೂ ಹೋಗಿಲ್ಲ.

ಆದರಲ್ಲೂ ಇವರು ತಿಂಗಳು ತಿಂಗಳಲ್ಲಿ ಮಾಡಿರತಕ್ಕ ಟಿ.ಎ. ಬಿಲ್ಲುಗಳನ್ನು ನೋಡಿದರೆ ಎದೆ ಒಡೆದು ಹೋಗುತ್ತದೆ.

ನಾನು ಮಂತ್ರಿಯಾಗಿದ್ದೆ, ಹಿಂದೆಯೂ ಅನೇಕರು ಮಂತ್ರಿಗಳಾಗಿದ್ದರು. ಆಗಿನ ಟೂರ್ ಪಟ್ಟಿಗಳನ್ನು ಬೇಕಾದರೆ ನೋಡಿ ಅವರುಗಳು ತಿಂಗಳಿಗೆ 15 ದಿವಸ, 20 ದಿವಸ ಹೊರಗಡೆ ಟೂರಿನಲ್ಲೇ ಇರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ। ಅಷ್ಟೇ ಅಲ್ಲ, ಒಂದೊಂದು ಸಮಯದಲ್ಲಿ ನಾಲ್ಕೂ ಐದು ಜನ ಮಂತ್ರಿಗಳು ಬಂದು ಇಲ್ಲಿ ಬೆಂಗಳೂರಿನಲ್ಲಿಲ್ಲದೆ ಹೊರಗೆ ಟೂರ್ ಮೇಲೆ ಹೋಗುವುದನ್ನು ಹಿಂದೆಂದೂ ನನ್ನ ಅನುಭವದಲ್ಲಿ ಕಂಡಿರಲಿಲ್ಲ ಅದಕ್ಕೆ Instensive ಟೂರ್ ಮಾಡುತ್ತೀರಾ, ಅಥವಾ Extensive ಟೂರ್ ಮಾಡುತ್ತೀರಾ ಎಂದು ನಾನು ಒಂದು ಪ್ರಶ್ನೆ ಕೇಳಿದೆ ಏಕೆಂದರೆ ಟೂರ್ ಹೋಗಬೇಕೆಂಬುದು ಒಳ್ಳೆಯದು ಆದರೆ ಒಂದು ಸ್ಥಳದಲ್ಲಿ ತಂಗಬೇಕು, ಅಲ್ಲಿ ಎಲ್ಲಾ ಜನರು ಕಂಡು ಕೊರತೆಗಳನ್ನು ಕೇಳಬೇಕು. ಅವರ ಕಷ್ಟನಷ್ಟಗಳನ್ನು ಅರಿಯಬೇಕು. ಇದು Intensive Tour ಮಾಡುವ ಉದ್ದೇಶ. ಆದರೆ ನಮ್ಮ ಮಂತ್ರಿಗಳು ಏನು ಹೇಳಿದ್ದಾರೆಂದರೆ-"It is both intensive and extensive" ಒಂದೇ ಟೂರು Intensive ಮತ್ತು Extensive ಎರಡೂ ಆಗುವುದು ಹೇಗೆ ಸಾಧ್ಯ?How can it be intensive if it is extensive, or if it is extensive, how can it be intensive ? I want to know. ತಾವು ಹತ್ತು ಹನ್ನೆರಡು ದಿವಸಗಳು ಹೊರಗಡೆ, ಜೊತೆಗೆ ಐದು ಆರು ಜನ ಹೊರಗಡೆ ಒಂದೇ ಸಾರಿ ಹೋಗುತ್ತೀರಲ್ಲ! ಒಂದೇ ಸ್ಥಳದಲ್ಲಾದರೂ ಹೆಚ್ಚಿಗೆ ದಿವಸ ಇದ್ದು ಅಲ್ಲಿನ ಒಂದೊಂದು ವಿಷಯಗಳನ್ನಾದರೂ ಪರಿಶೀಲಿಸುತ್ತೀರಾ? ಅದು ಅಲ್ಲ. ಸರ್ಕಾರಕ್ಕೆ ಮಾತ್ರ ಖರ್ಚು, ಆದರಲ್ಲೂ ಈಗಿನ ಸಂದರ್ಭದಲ್ಲಿ half of our departments have been taken away by the centre and I say there is absolutely not much work.

ಅಲ್ಲದೆ, ಹಿಂದಿನ ಸಂಪ್ರದಾಯವೇನೆಂದರೆ, ಮಂತ್ರಿಗಳು ಟೂರ್ ಹೋಗಿ ಬಂದೊಡನೆ ಟೂರ್ ನೋಟ್ಸನ್ನು ಪಬ್ಲಿಷ್ ಮಾಡಿ ಸಂಬಂಧಪಟ್ಟ ಅಧಿಕಾರಿಗಳಿಗೆ instructions ಕೊಟ್ಟು

ಎಲ್ಲರಿಗೂ ಕಳುಹಿಸಿಕೊಡುತ್ತಿದ್ದರು. ಅದರ ಮೇಲೆ ಅವರುಗಳು ಕೈಗೊಂಡ ಕಾರ್ಯಗಳ ವರದಿಗಳು ಬರುತ್ತಿದ್ದವು. ಈಗ ಅಂಥ ಟೂರ್ ನೋಟ್ಸ್ ಏನೂ ಕಾಣುವುದಿಲ್ಲ ನಾನೇ ಎಷ್ಟೋ ಸಾರಿ ವಿಚಾರಿಸಿದ್ದೇನೆ. ಒಂದೂ ಬರುತ್ತಿಲ್ಲ ಇಂಥ ಟೂರ್ ಮಾಡಿದರೆ, ಆ ಟೂರ್ ನೋಟ್ಸನ್ನು ತಾನೇ ಮಾಡುವುದು ಹೇಗೆ? ಈ ರೀತಿಯಾಗೆಲ್ಲಾ ಮಾಡುವುದನ್ನು ನೋಡಿದರೆ ನನಗೆ ಬಹಳ ಆಶ್ಚರ್ಯವಾಗುತ್ತದೆ. ಏಕೆಂದರೆ ನನಗೆ ಇವುಗಳ ಸ್ವಂತ ಅನುಭವ ಇದೆ.

ಶ್ರೀ ವಿ.ಜಿ. ರಾಮಚಂದ್ರರಾವ್: ಸಮಯದ ಅಭಾವದಲ್ಲಿಯೂ ಟೂರ್ ನೋಟ್ಸನ್ನು ಪ್ರಕಟಿಸಬೇಕಾಗಿದೆಯಾ?

ಶ್ರೀ ಜೆ. ಮಹಮ್ಮದ್ ಇಮಾಂ: ಪ್ರತಿಯೊಂದು ಪ್ರವಾಸ ಟಿಪ್ಪಣಿಯನ್ನು ಮುದ್ರಿಸಬೇಕು ಮತ್ತು ಅದನ್ನು ವಿತರಿಸಬೇಕು ಮತ್ತು ಅವರು ಪ್ರವಾಸದ ಟಿಪ್ಪಣಿಗಳನ್ನು ಹೊಂದಿದ್ದರೆ ಒಂದು ದಿನದೊಳಗಾಗಿ, ಮುದ್ರಿತ ಪ್ರತಿಗಳು ಸಿದ್ಧವಾಗಿದ್ದರೆ ಅದನ್ನು ಪೂರೈಸಬೇಕು ನಾನು ಕೂಡ, ಇನ್ನು ಮುಂದೆ ಪ್ರವಾಸದ ಟಿಪ್ಪಣಿಗಳನ್ನು ಈ ಸಭೆಗೆ ನೀಡಬೇಕೆಂದು ಹೇಳುತ್ತಿದ್ದೇನೆ. ಅವರು ಪ್ರವಾಸ ಕೈಗೊಳ್ಳುವುದರ ಬಗ್ಗೆ ನನ್ನದೇನೂ ಅಭ್ಯಂತರವಿಲ್ಲ. ಅದು ಅವಶ್ಯಕ, ಆದರೆ ಯಾವಾಗ ಪ್ರವಾಸ ಹೋಗಬೇಕೆಂದು ಅವರಿಗೆ ತಿಳಿದಿರಬೇಕು. ಒಬ್ಬ ಮಂತ್ರಿ ಒಂದು ವಾರದಲ್ಲಿ ಇಡೀ ಜಿಲ್ಲೆಯ ಪ್ರವಾಸ ಕೈಗೊಳ್ಳಬಹುದು. ಇನ್ನಾವ ಮಂತ್ರಿಯೂ ಪ್ರವಾಸ ಕೈಗೊಳ್ಳುವ ಅವಶ್ಯಕತೆ ಇರುವುದಿಲ್ಲ . ಏಕೆಂದರೆ ಅವನಿಂದ ಪೂರ್ಣ ಮಾಹಿತಿಯನ್ನು ಸಂಗ್ರಹಿಸಬಹುದು. ನಾನು ಹೇಳಬಯಸುವ ಮತ್ತೊಂದು ಸಂಗತಿಯೆಂದರೆ ಹಣದ ಉಳಿತಾಯ ಮಾಡಲು, ಶ್ರಮದ ಉಳಿತಾಯ ಮಾಡಲು ಹಾಗೂ ಸ್ಥಳೀಯ ಅಧಿಕಾರಿಗಳು ಅವರ ಸಾಮಾನ್ಯ ಕಾರ್ಯಗಳನ್ನು ಮಾಡುವಂತೆ ನೋಡಿಕೊಳ್ಳಲು ಮಂತ್ರಿಗಳು ತಮ್ಮ ಪ್ರವಾಸಗಳನ್ನು ಕಡಿತಗೊಳಿಸಬೇಕು. ಇಲ್ಲವಾದರೆ ಸ್ಥಳೀಯ ಅಧಿಕಾರಿಗಳು ಮಂತ್ರಿಗಳು ಅವರ ಸ್ಥಳಗಳಿಗೆ ಆಗಾಗ್ಗೆ ಭೇಟಿ ನೀಡುತ್ತಾರೆ, ಸಾಮಾನ್ಯ ಕಾರ್ಯಗಳನ್ನೂ ಅವರು ಮಾಡುವುದಿಲ್ಲ .

ನಾವು ಪ್ರಜಾಪ್ರಭುತ್ವವನ್ನು ಎತ್ತಿ ಹಿಡಿಯಬೇಕು ಮತ್ತು ಸಚಿವಾಲಯದ ಹಾಗೂ ಮಂತ್ರಿಗಳ ಗೌರವವನ್ನು ಕಾಯ್ದುಕೊಳ್ಳಬೇಕು. ಆದರೆ, ಅನೇಕ ಸಂದರ್ಭಗಳಲ್ಲಿ ಪ್ರಜಾಪ್ರಭುತ್ವ ತತ್ವಗಳ ಕಡೆಗಣಿಸುವಿಕೆಯನ್ನು ನಾವು ನೋಡುತ್ತೇವೆ. ಅಲ್ಲದೆ ವಿಧಾನಸಭೆಯನ್ನು ಅನೇಕ ಪ್ರಮುಖ ವಿಷಯಗಳಲ್ಲಿ ವಿಶ್ವಾಸಕ್ಕೆ ತೆಗೆದುಕೊಳ್ಳಲಾಗುವುದಿಲ್ಲ. ಜನತೆಯ ಆಶೋತ್ತರಗಳನ್ನು ಕಡೆಗಣಿಸಿ ವರ್ತಿಸುವ ಪರಿಪಾಠ ಸರಕಾರದಲ್ಲಿ ಕಂಡು ಬರುತ್ತದೆ. ವಿಧಾನಸಭೆಯನ್ನು ಕೇಳದೆಯೇ ಅವರು ನಿರ್ಧಾರಗಳನ್ನು ಕೈಗೊಳ್ಳುತ್ತಾರೆ ಮತ್ತು ನಂತರದಲ್ಲಿ ವಚನ ಬದ್ಧತೆಯನ್ನು ಬಯಸುತ್ತಾರೆ. ಆದರ್ಶವಾದ ಕಾರ್ಯಕ್ರಮಗಳ ಮೇಲೆ ವೆಚ್ಚ ಕೈಗೊಳ್ಳಲು ಇಚ್ಛಿಸುತ್ತಾರೆ ಮತ್ತು ಸಭೆಯಲ್ಲಿ ಮುಂದೆ ಬಂದು ಹೆಚ್ಚುವರಿ ವೆಚ್ಚಕ್ಕಾಗಿ ಮತಹಾಕುವಂತೆ ಕೇಳಿಕೊಳ್ಳುತ್ತಾರೆ.

ಮೂರನೇ ಅಂಶ ನಾನು ನಿರ್ದಿಷ್ಟವಾಗಿ ಹೇಳುವುದು ಎಂದರೆ, ಮಂತ್ರಿಗಳ ಹೆಸರುಗಳು ಕಳಂಕ ಹೀನವಾಗಿರಬೇಕು ಮತ್ತು ಗೊಡ್ಡು ಹರಟೆಯ ವಿಷಯವಾಗಿರಬಾರದು. ಇತ್ತೀಚೆಗೆ, ಮಂತ್ರಿಗಳ ಮೇಲೆ ಆಪಾದನೆ, ಪ್ರತಿ ಆಪಾದನೆ ಮಾಡುವುದು ರೂಢಿ ಎನಿಸಿದೆ. ಮಂತ್ರಿಗಳು ಬರುತ್ತಾರೆ ಹೋಗುತ್ತಾರೆ ಮತ್ತು ನಮಗೆ ಕಾರಣ ನೀಡುವುದಿಲ್ಲ. 2 ಅಥವಾ 3 ಅಂತಹ

ಸನ್ನಿವೇಶಗಳು ಜರುಗಿವೆ. ನಾನು ಅನುಕೂಲ ಅಥವಾ ಅನಾನುಕೂಲದ ಬಗ್ಗೆ ಹೇಳುವುದಿಲ್ಲ, ಆದರೆ ನಾನು ಸಂವಿಧಾನಾತ್ಮಕ ವಿಧಿ ಮತ್ತು ಸ್ಥಾಪಿತವಾಗಬೇಕಾದ ಸಂಪ್ರದಾಯಗಳ ಬಗ್ಗೆ ನಿರ್ದಿಷ್ಟವಾಗಿ ಹೇಳುತ್ತಿದ್ದೇನೆ. ಒಬ್ಬ ಮಂತ್ರಿ ರಾಜಿನಾಮೆ ನೀಡಿದಾಗ, ಈ ಸಭೆಗೆ ಅವನು ಏಕೆ ರಾಜಿನಾಮೆ ನೀಡಿದ್ದಾನೆಂದು ತಿಳಿಯುವ ವಿಶೇಷಾಧಿಕಾರ ಇರುತ್ತದೆ, ಅಥವಾ ಒಬ್ಬ ಮಂತ್ರಿ ರಾಜೀನಾಮೆ ಇತ್ತಾಗ, ಒಂದು ನಿರ್ದಿಷ್ಟ ವಿಷಯ ಕುರಿತಂತೆ ಕೆಳಮನೆ ಒಬ್ಬ ಮಂತ್ರಿ ಪದತ್ಯಾಗ ಮಾಡಬೇಕೋ ಅಥವಾ ಇಡೀ ಮಂತ್ರಿ ಮಂಡಲ ರಾಜೀನಾಮೆ ನೀಡಬೇಕೂ ಎಂಬುದರ ಬಗ್ಗೆ ತನಗೆ ತಾನು ತೃಪ್ತಿ ಪಡಿಸಿಕೊಳ್ಳಬೇಕು, ಏಕೆಂದರೆ, ವ್ಯಕ್ತಿಗತ ಹೊಣಣೆಗಾರಿಕೆ ಮತ್ತು ಸಾಮೂಹಿಕ ಹೊಣೆಗಾರಿಕೆಯೆಂಬುದು ಕಂಡುಬರುತ್ತದೆ. ಆದರೆ, ನಾನು ಪ್ರತಿನಿದಿಸುವ ಈ ಕೆಳಮನೆಯ ಗಮನಕ್ಕೆ ಮಂತ್ರಿ ಅಥವಾ ಮಂತ್ರಿಮಂಡಲ ಇಂತಹ ವಿಪರೀತ ಕ್ರಮ ಅನುಸರಿಸಲು ಇರುವ ಕಾರಣಗಳನ್ನು ತರಲಾಗುವುದಿಲ್ಲ. ಇದು ಪ್ರಜಾಪ್ರಭುತ್ವ ತತ್ವಗಳಿಗೆ ತೋರುವ ಅಗೌರವ ಎನ್ನಬಹುದು.

ಮತ್ತೊಮ್ಮೆ ನಾನು ಮಂತ್ರಿಗಳ ವಿರುದ್ಧ ಮಾಡಲ್ಪಟ್ಟ ವಿವಿಧ ರೀತಿಯ ಅಪಾದನೆಗಳ ವಿಷಯಕ್ಕೆ ಬರುತ್ತೇನೆ. ಸೀಸರ್‌ನ ಪತ್ನಿಯು ಸಂಶಯಕ್ಕೆ ಮಿಗಿಲಾಗಿರಬೇಕು (asone suspision) ಅದೊಂದು ನೆಲೆಗೊಂಡ ರೂಢಿಯಾಗಿದೆ. ಇನ್ನಿತರ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಒಬ್ಬ ಮಂತ್ರಿಯ ಹೆಸರಿಗೆ ಕಳಂಕವುಂಟಾಗಿದೆ ಎಂದರೆ, ಅವನ ನಂಬಿಕೆಯ ಅರ್ಹತೆಯನ್ನು ಸಂಶಯಾಸ್ಪದವಾಗಿ ನೋಡಲಾಗುತ್ತದೆ, ಎಲ್ಲಾ ಸಂದರ್ಭದಲ್ಲೂ ಆಪಾದನೆಗಳ ಬಗ್ಗೆ ವಿಚಾರಿಸಲು ತಕ್ಷಣದಿಂದ ಒಂದು ಸಮಿತಿಯನ್ನು ನೇಮಕ ಮಾಡಲಾಗುತ್ತದೆ. ಉದಾ: ಈ ಸಭೆಯ ಒಂದು ಸಮಿತಿ ಆದರಲ್ಲಿ ವಿರೋಧ ಪಕ್ಷ ಪ್ರಾಮುಖ್ಯತೆ ಹೊಂದಿರುತ್ತದೆ, ಆದರೆ ಇಲ್ಲಿ ಯಾವ ರೀತಿ ಮತ್ತು ಯಾವ ವಿಧಾನ ಅನುಸರಿಸಲಾಗುತ್ತದೆ? ಅದು ಪ್ರತಿಯಾಗಿ ಪ್ರಜಾಪ್ರಭುತ್ವ ತತ್ವಕ್ಕೆ ವಿರುದ್ಧವಾಗಿ ಮತ್ತು ಸಾರ್ವಜನಿಕರ ಮನಸ್ಸನ್ನು ಉದ್ರೇಕಗೊಳಿಸುತ್ತಿದೆ ಅಲ್ಲದೆ ಅದೊಂದು ಧನಾತ್ಮಕ ಭಾದೆ (ಪೀಢೆ) ಎನ್ನಿಸುತ್ತದೆ ಮತ್ತು ಸಾಮಾನ್ಯ ಮಾತಾಗಿದೆ. ಇಂದು ನಾವು ಆಪಾದನೆ ಮತ್ತು ಪ್ರತಿ ಆಪಾದನೆಗಳನ್ನು ಕಾಣುತ್ತೇವೆ. ಅಂತಹ ಎಲ್ಲಾ ವಿಷಯಗಳಲ್ಲಿ ಸರಕಾರ ಧೈರ್ಯವಾದ ಮತ್ತು ನಿರ್ದಿಷ್ಟವಾದ ಕ್ರಮಕ್ಕೈಗೊಳ್ಳಬೇಕು. ಮಂತ್ರಿ ಮಂಡಲ ಅನುಸರಿಸುತ್ತಿರುವ ವಿಧಾನ, ಪ್ರಸ್ತುತ ಯುಕ್ತಿ, ಸರ್ವಸಮ್ಮತವಾಗಿಲ್ಲ ಮತ್ತು ಯಾವಾಗಲೂ ಸಂಶಯಕ್ಕೆ ಅವಕಾಶ ಮಾಡಿಕೊಟ್ಟಿದೆ. ಒಂದು ಸಂದರ್ಭದಲ್ಲಿ, ಮಂತ್ರಿಗಳಲ್ಲಿ ಒಬ್ಬರು ತಾವೇ ನಿರ್ದಿಷ್ಟ ಸ್ಥಳಕ್ಕೆ ಹೋಗಿ ಸಭೆಗೆ ವರದಿ ಸಲ್ಲಿಸಿದರು. ಸಭೆಗೆ ವರದಿಯನ್ನು ಸಲ್ಲಿಸಿದಾಗ, ವರದಿಯನ್ನು ಸಭೆಯಲ್ಲಿ ಮಂಡಿಸುವುದು ಹಾಗೂ ಸದಸ್ಯರ ಅಭಿಪ್ರಾಯ ಪಡೆಯುವುದು ಸರಕಾರದ ಕರ್ತವ್ಯವಾಗಿತ್ತು. ಆದರೆ ಸರಕಾರ ಹಾಗೆ ಮಾಡಲಿಲ್ಲ. ವರದಿ ಸರಿಯಾಗಿರಬಹುದು. ನಾನು ಅದರ ಬಗ್ಗೆ ಸಂಶಯ ಹೊಂದಿಲ್ಲ, ಆದರೆ ಕೆಲವು ವರ್ಗದ ಜನರು ಹೇಳುವಂತೆ, ಒಂದು ವೇಳೆ ವರದಿ ಸ್ವತಂತ್ರವಾದ ದಿಕ್ಕಿನಿಂದ ಬಂದಿದ್ದರೆ, ಅದು ಹೆಚ್ಚು ವಿಶ್ವಾಸಾರ್ಹವಾಗಿರುತ್ತಿತ್ತು ಮತ್ತು ಜನರು ಅದನ್ನು ಒಪ್ಪುತ್ತಿದ್ದರು. ಆದ್ದರಿಂದ ವರದಿಯ ನಂತರ ಕೆಲವು ಪರ ಹಾಗೂ ವಿರುದ್ಧ ಹೇಳಿಕೆಗಳನ್ನು ನಾವು ಕಾಣುತ್ತಿದ್ದೇವೆ ಹಾಗೂ ಅದು ಚುರುಕುಗೊಳ್ಳುತ್ತಿದೆ. (ಬಿಸಿ ಏರುತ್ತಿದೆ) ಅದು ನಮ್ಮನ್ನು ಹಾಗೂ ಮಂತ್ರಿ ಮಂಡಲ ಸಾಮಾನ್ಯಗೊಡ್ಡು ಹರಟೆಯ ವಿಷಯವಾಗುತ್ತಿರುವುದು ತುಂಬಾ ಅವಮಾನಕರ,

ನೀವು ನಮ್ಮನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು, ಒಂದು ಸ್ವತಂತ್ರ ನ್ಯಾಯಪೀಠ ಸ್ಥಾಪನೆಯಾಗಬೇಕು ಶ್ರೀ ಕಡಿದಾಳ್ ಮಂಜಪ್ಪ ಬಳಸಿದ ವಿಧಾನ ಪ್ರಜಾಪ್ರಭುತ್ವ ತತ್ವಕ್ಕೆ ಹೊಂದಿಕೆಯಾಗುವುದಿಲ್ಲ. ಅವರು ತಮ್ಮ ಪಕ್ಷದ ಸದಸ್ಯರೊಂದಿಗೇ ಹೋದೆನೆಂದು ಹೇಳಿದರು. ಇತರ ಪಕ್ಷದ ಸದಸ್ಯರು ಅವರದೇ ಸ್ವೀಕೃತಿಯಂತೆ ಹೋಗುತ್ತಾರೆ. ನೀವು ಒಂದು ಅಭಿಪ್ರಾಯ (ರೀತಿ) ನೀಡಿದರೆ ಮತ್ತೊಬ್ಬರು ಇನ್ನೊಂದು ಅಭಿಪ್ರಾಯ ನೀಡುತ್ತಾರೆ. ನೀವು ಮಾತುಕತೆಯ ವಸ್ತುವಾಗುತ್ತೀರೀ. ಆದ್ದರಿಂದ ಅಂತಹ ಎಲ್ಲಾ ಸಂದರ್ಭಗಳಲ್ಲಿಯೂ ಒಂದು ಸ್ವತಂತ್ರ ಸಮಿತಿಯನ್ನು ವಿಚಾರಣೆಗೆ ನೇಮಿಸಿ, ಆಪಾದನೆಗಳ ಬಗ್ಗೆ ನ್ಯಾಯವಾದ ನಿಷ್ಪಕ್ಷಪಾತವಾದ ವರದಿ ನೀಡುವಂತೆ ಹೇಳುವುದು ಸರಕಾರದ, ಅದರಲ್ಲೂ ಪ್ರಮುಖವಾಗಿ ಮುಖ್ಯಮಂತ್ರಿಗಳ ಕರ್ತವ್ಯವಾಗಿರುತ್ತದೆ. ಅದು ರೂಢಿಯಾಗಬೇಕು, ಭವಿಷ್ಯದಲ್ಲಿ ಅನುಸರಿಸಬೇಕಾದ ಪ್ರಜಾಪ್ರಭುತ್ವ ವಿಧಾನವಾಗಬೇಕು ಮತ್ತು ಮುಖ್ಯಮಂತ್ರಿಗಳು ಬೇರೆ ಬೇರೆ ವರ್ಗದ ಜನರನ್ನು ಸದಸ್ಯರಾಗಿ ಹೊಂದಿದ ಒಂದು ಸ್ವತಂತ್ರ ಸಮಿತಿಯನ್ನು ವಿಚಾರಣೆಗೆ ನೇಮಿಸಿ, ಈ ಸಭೆಗೆ ವರದಿ ಒಪ್ಪಿಸಲು ಕ್ರಮ ಕೈಗೊಳ್ಳುವಿರೆಂದು ನಾನು ಭಾವಿಸುತ್ತೇನೆ.

ನಾನು ಹೇಳ ಬಯಸುವ ಮತ್ತೊಂದು ವಿಷಯವೆಂದರೆ, ಹಣವನ್ನು ಖರ್ಚುಮಾಡುವಾಗ ಸ್ವಲ್ಪ ಮಟ್ಟಿನ ದಕ್ಷತೆಯೂ ಅವಶ್ಯವಿರುತ್ತದೆ. ನಿಮಗೆ ನೀಡಲ್ಪಟ್ಟ ಹಣವನ್ನು ಸರಿಯಾಗಿ ಮತ್ತು ಬುದ್ಧಿವಂತಿಕೆಯಿಂದ ವೆಚ್ಚಮಾಡಬೇಕು. ಯಾವುದೇ ರೀತಿಯ ಅಪವ್ಯಯವಾಗಬಾರದು. ಈ ವಿಷಯದಲ್ಲೂ ಅನೇಕ ಭಿನಾಭಿಪ್ರಾಯಗಳಿವೆ. ನಾನು ಯಾರೊಬ್ಬರ ನಡೆತೆಯನ್ನೂ ಅಥವಾ ಯಾರೊಬ್ಬರ ನಿಷ್ಕಪಟತೆಯನ್ನೂ ಸಂದೇಹಿಸುತ್ತಿಲ್ಲ. ಸತ್ಯಾಂಶಗಳು ನಿಮ್ಮ ಮುಂದಿರುವಾಗ, ನೀವೇ ಸರಿಯಾದ ಅವಶ್ಯಕ ಕ್ರಮಗಳನ್ನು ಕೈಗೊಳ್ಳಬೇಕು. ತಾಮ್ರದ ತಂತಿಯ ಸನ್ನಿವೇಶವನ್ನು ಕುರಿತು ಹೇಳುತ್ತೇನೆ. ಆ ಸನ್ನಿವೇಶದಲ್ಲಿ ಒಂದು ವರ್ಗ ಸರಕಾರ 1 ಲಕ್ಷ ರೂಪಾಯಿಗಳಷ್ಟು ನಷ್ಟವನ್ನು ಅನುಭವಿಸುತ್ತಿದೆಯೆಂದು ಆಪಾದಿಸಿದೆ.

ಶ್ರೀ ಕೆ. ಹನುಮಂತಯ್ಯ: ನೀವು ಕೇಳಿದ ಪ್ರಶ್ನೆಗೆ ನೀವೇ ಉತ್ತರವನ್ನು ಒದಗಿಸಬೇಕು.

ಶ್ರೀ ಜೆ. ಮಹಮದ್ ಇಮಾಂ: ಒಂದು ವೇಳೆ ಉತ್ತರಗಳು ಇಲ್ಲದಿದ್ದರೆ ಅದು ನನ್ನ ತಪ್ಪಲ್ಲ ನಾನು ತಿಳಿದಿರುವಂತೆ, ಸರಕಾರ 1 ಲಕ್ಷ ರೂಪಾಯಿಯ ನಷ್ಟವನ್ನು ಅನುಭವಿಸಲೇಬೇಕು, ಒಂದು ವೇಳೆ ರೈಲಿನಲ್ಲಿ ಅದೇ ವಸ್ತುವನ್ನು ಸಾಗಣೆ ಮಾಡಿದರೆ, ಅವರಿಗೆ ಒಂದು ಪೌಂಡ್‌ಗೆ ಒಂದು ಆಣೆ ಖರ್ಚಾಗುತ್ತಿತ್ತು. ಪ್ರತಿ ಒಂದು ಪೌಂಡಿಗೆ ಸರಕಾರಕ್ಕೆ 4 ಆಣೆಗಳ ನಷ್ಟವಾಗುತ್ತೆಂದು ಹೇಳಲಾಗುತ್ತದೆ. ಇದೇ ಆಪಾದನೆಗಳನ್ನು ಸತ್ಯವೋ ಅಥವಾ ಅಸತ್ಯವೋ ಸರಕಾರದ ವಿರುದ್ಧ ಮಾಡಲಾಗಿದೆ. ಅಂತಹ ಎಲ್ಲಾ ಸನ್ನಿವೇಶಗಳಲ್ಲಿ, ಬ್ರಿಟನ್ನಿನ ಸಂವಿಧಾನಾತ್ಮಕ (ಪಾರ್ಲಿಮೆಂಟ್) ಪದ್ಧತಿ ಮತ್ತು ಪ್ರಜಾಪ್ರಭುತ್ವ ಪದ್ಧತಿಯಂತೆ, ಸಾರ್ವಜನಿಕರ ಸಂದೇಹ ನಿವಾರಿಸುವುದು ಸರಕಾರದ ಕರ್ತವ್ಯವಲ್ಲವೆ? ನಿಮ್ಮ ಮೌನ ಎಲ್ಲಾ ರೀತಿಯ ಸಂದೇಹಗಳಿಗೂ ದಾರಿ ಮಾಡಿಕೊಡುತ್ತದೆ. ನಿಮ್ಮ ಒಳ್ಳೆಯ ಹೆಸರನ್ನು ನೀವೇ ಹಾಳು ಮಾಡಿಕೊಳ್ಳುತ್ತಿದ್ದೀರಾ. ಇದೊಂದೇ ಆಪಾದನೆ ಅಲ್ಲ. ಪ್ರತಿಯೊಬ್ಬ ಮಂತ್ರಿಯೂ ಸಂದೇಹಕ್ಕೆ ಒಳಗಾಗಿದ್ದಾರೆ. ಉದಾಹರಣೆಗೆ-ನಾನು ವೈಯಕ್ತಿಕವಾಗಿ ಮಾತನಾಡುವುದಿಲ್ಲ-ನಾನು ಮಟ್ಟೆದೊಡ್ಡಿ ಪ್ರಕರಣದ ಬಗ್ಗೆ ಹೇಳುತ್ತಿದ್ದೇನೆ. ಹಿಂದಿನ ಅವಧಿಯಲ್ಲಿ ಮುಖ್ಯಮಂತ್ರಿಗಳು ನಿರ್ದಿಷ್ಟ ಹೇಳಿಕೆ ನೀಡಲು ಸಂತೋಷಗೊಂಡರು.

ಆ ಅವಧಿಯಲ್ಲಿನ ಸಭೆಯ ನಿರ್ಧಾರಕ್ಕೆ ಬದ್ಧರಾಗಿರುವುದಾಗಿ ಅವರು ಹೇಳಿದರು. ನಾನು ಅವರ ನಿರ್ಧಾರವನ್ನು ಸ್ವಾಗತಿಸುತ್ತೇನೆ ಮತ್ತು ಅವರು ಸಭೆಯಲ್ಲಿ ಆ ನಿರ್ಧಾರವನ್ನು ಮುಂದಿಡುತ್ತಾರೆಂದು ನಾನು ಭಾವಿಸಿದ್ದೆ. ಇದುವರೆಗೂ ಆ ವಿಷಯ ಸಭೆಯ ಮುಂದೆ ಬಂದಿಲ್ಲ. ಅತ್ಯಂತ ದುಃಖ ಮತ್ತು ಅವಮಾನದಿಂದ, ಕೆಲವು ಆಪಾದನೆಗಳು ಮಾಡಲ್ಪಟ್ಟಿವೆ ಎಂದು ನಾನು ಹೇಳಬೇಕಾಗಿದೆ. ಅದು ಆಸಕ್ತಿಯುಳ್ಳ ಅಥವಾ ನಿರಾಸಕ್ತ ಮೂಲದಿಂದ ಮಂತ್ರಿಗಳ ವಿರುದ್ಧ ಬಂದಿರಬಹುದು. ಸರಕಾರ ಸುಮ್ಮನೆ ಕುಳಿತುಕೊಳ್ಳಬಾರದು. ಒಂದು ಆಪಾದನೆಯನ್ನು ಸರಕಾರದ ವಿರುದ್ಧ ಅಥವಾ ಮಂತ್ರಿಗಳ ವಿರುದ್ಧ ಮಾಡಿದಾಗ ತಕ್ಷಣ ಅದರ ಬಗ್ಗೆ ಸರಿಯಾದ ಕ್ರಮ ಕೈಗೊಂಡು ಆಪಾದನೆಗಳನ್ನು ಖಂಡಿಸುವಂತೆ ನೋಡಿಕೊಳ್ಳಬೇಕು. ಒಂದು ವೇಳೆ ಆಪಾದನೆಗಳು ಸತ್ಯವೆಂದು ಸಾಬೀತಾದರೆ ಮತ್ತು ಅವುಗಳು ಸರಿಯಾಗಿದ್ದರೆ ಅಂತಹವರು ಕಛೇರಿಯಲ್ಲಿರಲು ಅರ್ಹರೆನಿಸುವುದಿಲ್ಲ.

ಶ್ರೀ ಕೆ. ಹನುಮಂತಯ್ಯ: ಯಾವ ಆಪಾದನೆಯನ್ನು ನನ್ನ ಮೇಲೆ ಮಾಡುತ್ತಿದ್ದೀರಿ?

ಶ್ರೀ ಜೆ. ಮಹಮ್ಮದ್ ಇಮಾಂ: ಶ್ರೀ ನಂಜಪ್ಪ ಎಂಬುವರಿಗೆ, ನಿಮ್ಮ ಸೋದರ ಇವರಿಗೆ 50 ಎಕರೆ ಭೂಮಿಯನ್ನು ಪಡೆಯಲು ಸಹಾಯ ಮಾಡಿದ್ದೀರಾ, ಇದೊಂದು ಆಪಾದನೆ.

ಶ್ರೀ ಕೆ. ಹನುಮಂತಯ್ಯ : ಅದು ಸುಳ್ಳು ಆಪಾದನೆ, ನೀವು ಮಾತಿನಲ್ಲಿ ಭರವಸೆ ಇಡದಿದ್ದರೆ, ನಿಮಗೆ ತಿಳಿಹೇಳುವಲ್ಲಿ ನಾನು ಅಸಹಾಯಕ

ಶ್ರೀ ಜೆ. ಮಹಮ್ಮದ್ ಇಮಾಂ: ಹಿಂದಿನ ಸಭೆಯಲ್ಲಿ ವಿಧಾನಸಭೆಯ ನಿರ್ಧಾರಕ್ಕೆ ಬದ್ಧರಾಗಿರುವುದಾಗಿ ಅವರು ಹೇಳಿದ್ದರು.

ಶ್ರೀ ಭೀಮಪ್ಪ ನಾಯಕ್ : ಎಲ್ಲ ಅವರು ಅದನ್ನು ಹೇಳಿದ್ದರು.

ಶ್ರೀ ಜೆ. ಮಹಮದ್ ಇಮಾಂ: ಈ ಸಭೆಯವರ ಮುಂದಿಟ್ಟು ಅವರು ಹೇಳಿದ ಹಾಗೆ ಕೇಳುತ್ತಾ ಹೋಗುತ್ತೇನೆ. ಎಂದು ಹೇಳಿದ್ದಾರೆ. ದಯವಿಟ್ಟು ಸಭೆಯ ಪ್ರಸ್ತಾಪದ ದಾಖಲೆಗಳನ್ನು ನೋಡಿ.

ಶ್ರೀ ಸಭಾಪತಿ: ಇನ್ನೇನಾದರೂ ಅಂಶಗಳಿವೆಯೇ ?

ಶ್ರೀ ಜೆ. ಮಹಮ್ಮದ್ ಇಮಾಂ: ಆಡಳಿತ ಹಿತದೃಷ್ಟಿಯಿಂದ ಮತ್ತು ನಮ್ಮ ಮಂತ್ರಿಗಳ ಗೌರವ ಹೆಚ್ಚಿಸಲು ಹಾಗೂ ರಾಜ್ಯದ ಗೌರವ ಹೆಚ್ಚಿಸಲು, ಸರಕಾರ ಆವಶ್ಯವಿರುವ ಕ್ರಮಗಳನ್ನು ಕೈಗೊಂಡು, ಅಂತಹ ವಿಷಯಗಳಲ್ಲಿ ಪ್ರಜಾಪ್ರಭುತ್ವ ತತ್ವಗಳನ್ನು ಸ್ಥಾಪಿಸಬೇಕು. ಈ ಎಲ್ಲಾ ವಿಷಯಗಳನ್ನು ಗಮನದಲ್ಲಿರಿಸಿ ನಾನು ಮೈಸೂರು ಉದ್ದೇಶಿತ ಮಸೂದೆಯನ್ನು ವಿರೋಧಿಸಬೇಕಾಗಿದೆ.

(ವಿಧಾನಸಭೆ ಕಲಾಪ ದಿನಾಂಕ-ಮಾರ್ಚ್ 30, 1953)

## ಹೊಳೆನರಸೀಪುರದಲ್ಲಿ ಕೈಗಾರಿಕಾ ಶಾಲೆ

### ಬೇಡಿಕೆ ಸಂಖ್ಯೆ :15 ಮತ್ತು 28 ಕೈಗಾರಿಕೆ ಮತ್ತು ವಾಣಿಜ್ಯ

ಶ್ರೀ ಡಿ. ಮಲ್ಲಪ್ಪ : ಹೊಳೆನರಸೀಪುರದ ಕೈಗಾರಿಕೆ ಶಾಲೆ ಅದರ ಪ್ರಾರಂಭದ ಉದ್ದೇಶಗಳನ್ನು ಸಫಲಗೊಳಿಸುವಲ್ಲಿ ವಿಫಲವಾಗಿದೆ. ಅಲ್ಲಿ ಬಹಳ ಕಡಿಮೆ ವಿದ್ಯಾರ್ಥಿಗಳಿದ್ದಾರೆ. ಹಾಗೂ ಅಲ್ಲಿರುವ ಎಲ್ಲಾ ಶಿಕ್ಷಕರು ಒಂದೇ ಕುಟುಂಬಕ್ಕೆ ಸೇರಿರುವುದರಿಂದ ಅದು ಒಂದು ಕೌಟುಂಬಿಕ ವ್ಯವಹಾರದಂತೆ ಕಾರ್ಯ ನಿರ್ವಹಿಸುತ್ತಿದೆ. ಆದುದರಿಂದ ಇದೆ ಶಾಲೆಯನ್ನು ಗುಡಿ ಕೈಗಾರಿಕೆ ಮತ್ತು ಇತರೆ ಕೈಗಾರಿಕೆಗಳ ಬಗ್ಗೆ ಮಾಹಿತಿಯನ್ನು ತಿಳಿಸಲು ಅವಶ್ಯಕತೆ ಇದ್ದಕಡೆ ಪ್ರಾರಂಭಿಸಿದರೆ, ಈ ಸಂಸ್ಥೆಗೆ ಖರ್ಚು ಮಾಡುತ್ತಿರುವ ಹಣದ ಪೋಲನ್ನು ತಡೆಗಟ್ಟಿ ಅದರ ಸದುಪಯೋಗವನ್ನು ಮಾಡಿಕೊಳ್ಳಬಹುದು.

ಮಾನ್ಯ ಅಧ್ಯಕ್ಷರು: ನೀವು ಈ ಶಾಲೆ ಮುಚ್ಚಬೇಕೆಂದು ಹೇಳಿದ್ದೀರಿ. ನಾವು ನಿಮ್ಮ ಸಲಹೆಯನ್ನು ಪರಿಗಣಿಸುತ್ತೇವೆ.

ಇಮಾಂ: ಈ ವಿಷಯದಲ್ಲಿ ನಾನು ಕೆಲವು ಮಾತುಗಳನ್ನು ಹೇಳಲು ಇಚ್ಛಿಸುತ್ತೇನೆ. ಶ್ರೀ ಡಿ.ಎಸ್. ಮಲ್ಲಪ್ಪ ಹೊಳೆನರಸೀಪುರದ ಶಾಲೆಯ ಬಗ್ಗೆ ನಿರ್ದಿಷ್ಟವಾಗಿ ಹೇಳಿದರು. ಶಾಲೆ ಮುಚ್ಚಬೇಕೆಂದು ಅವರು ಹೇಳಿರುವುದು ಸರಿಯಲ್ಲ. ನಾನು ಇದನ್ನು ಒಪ್ಪುವುದಿಲ್ಲ ಒಂದು ವೇಳೆ ಸರಕಾರವೇ ಅದನ್ನು ಮುಚ್ಚಲು ಬಯಸಿದರೂ, ನಾನು ಅದಕ್ಕೆ ವಿರೋಧಿಯಾಗಿದ್ದೇನೆ. ಹೊಳೆನರಸೀಪುರಕ್ಕೆ ಒಂದು ಕೈಗಾರಿಕಾ ಶಾಲೆಯ ಅವಶ್ಯಕತೆ ಇದೆ. ಅದರಿಂದ ಅನೇಕರು ಪ್ರಯೋಜನ ಪಡೆಯುತ್ತಾರೆ. ನನ್ನ ವಾದವೆಂದರೆ, ಒಂದು ವೇಳೆ ಆ ಶಾಲೆಯ ಕಾರ್ಯಾಚರಣೆಯಲ್ಲಿ ಏನಾದರೂ ಲೋಪದೋಷಗಳಿದ್ದರೆ ಅದನ್ನು ಶಿಕ್ಷಣ ಇಲಾಖೆ ಸರಿಪಡಿಸಬೇಕು ಮತ್ತು ಶಾಲೆಯನ್ನು ಸರಿಯಾದ ರೀತಿಯಲ್ಲಿ ನಡೆಸಬೇಕು. ಈ ವಿಷಯಕ್ಕೆ ಸಂಬಂಧಿಸಿದಂತೆ, ಅಕ್ಕಪಕ್ಕದಲ್ಲಿ ಯಾವುದೇ ಕೈಗಾರಿಕಾ ಶಾಲೆ ಇಲ್ಲವೆಂಬ ಅಂಶವನ್ನೂ ಸೇರಿಸಲು ಇಚ್ಛಿಸುತ್ತೇನೆ.

ಹಾಗೆಯೇ, ಕೇವಲ ಜಿಲ್ಲಾ ಕೇಂದ್ರಗಳಲ್ಲಿ ಮಾತ್ರ ಅಂತಹ ಶಾಲೆಗಳಿವೆ. ನಾನು ಹೊಳೆನರಸೀಪುರದ ಶಾಲೆ ನೋಡಿಲ್ಲ ಮತ್ತು ಅದು ತೃಪ್ತಿಕರವಾಗಿ ಕಾರ್ಯನಿರ್ವಹಿಸುತ್ತಾ ಇಲ್ಲದಿರಬಹುದು. ಆದರೆ, ಇದು ಆ ಶಾಲೆ ಮುಚ್ಚಲು ಕಾರಣವಲ್ಲ ಅದನ್ನು ಸುಧಾರಿಸಬೇಕು. ಶಿಕ್ಷಕರು ಒಂದು ನಿರ್ದಿಷ್ಟ ಮಟ್ಟದಲ್ಲಿ ಇಲ್ಲದಿದ್ದರೆ, ಉತ್ತಮ ಶಿಕ್ಷಕರು ನೇಮಿಸಬೇಕು. ಸ್ಥಳೀಯರಿಗೆ ತರಬೇತಿ ಪಡೆಯಲು ಅವಕಾಶ ನೀಡಬೇಕು. ಶಿವಮೊಗ್ಗ ಹಾಗೂ ಚಿತ್ರದುರ್ಗಗಳಲ್ಲಿ ನಾನು ಕೆಲವು ಶಾಲೆಗಳನ್ನು ನೋಡಿದ್ದೇನೆ. ಅವು ತೃಪ್ತಿಕರವಾಗಿ ಕಾರ್ಯ ನಿರ್ವಹಿಸುತ್ತಿವೆ ಅನೇಕರು ಆ ಶಾಲೆಯ ಪ್ರಯೋಜನವನ್ನು ಪಡೆಯುತ್ತಿದ್ದಾರೆ ಮತ್ತು ಅವರ ಜೀವನ ನಿರ್ವಹಣೆಗೆ ದುಡಿಯಲು ಬೇಕಾಗುವ ಜ್ಞಾನವನ್ನು ಪಡೆಯುತ್ತಿದ್ದಾರೆ. ಅಂತಹ ಶಾಲೆಗಳನ್ನು ಜಿಲ್ಲಾ ಕೇಂದ್ರಗಳಲ್ಲಿ ಅಷ್ಟೇ

ಅಲ್ಲದೆ, ತಾಲೂಕು ಕೇಂದ್ರಗಳಲ್ಲೂ ಸ್ಥಾಪಿಸಬೇಕೆಂದು ನಾನು ಕೇಳಿಕೊಳ್ಳುತ್ತಿದ್ದೇನೆ. ಏಕೆಂದರೆ ಅನೇಕ (ಯುವಕರು) ಪ್ರೌಢ ಬಾಲಕರು, ಕರಕುಶಲ ಕೆಲಸವನ್ನು ಕಲಿಯುತ್ತಾರೆ ಮತ್ತು ಜೀವನ ನಿರ್ವಹಣೆಗೆ ಬೇಕಾಗುವ ಕೆಲಸವನ್ನು ಮಾಡುವ ಶಕ್ತಿ ಪಡೆಯುತ್ತಾರೆ.

ಮಾನ್ಯ ಅಧ್ಯಕ್ಷರು: ನೀವು ವಿರುದ್ಧ ಮಂಡನೆಗೆ ಪರವಾಗಿಲ್ಲವೆ?

ಇಮಾಂ: ಮಂಡನೆ ಕೇವಲ ಹೊಳೆನರಸೀಪುರ ಶಾಲೆ ಮುಚ್ಚುವುದಕ್ಕೆ ಸಂಬಂಧಿಸಿದ್ದರೆ ನಾನು ಅದಕ್ಕೆ ವಿರೋಧಿಯಾಗಿದ್ದೇನೆ. ಒಂದು ವೇಳೆ ಕೈಗಾರಿಕಾ ಶಿಕ್ಷಣ ನೀತಿಯ ಉದಾರೀಕರಣದ ಉದ್ದೇಶದಿಂದ ಸಾಮಾನ್ಯ ನೀತಿಯನ್ನು ವಿರೋಧಿಸುವುದಕ್ಕಾದರೆ, ನಾನು ಅದಕ್ಕೆ ಪರವಾಗಿದ್ದೇನೆ.

(ಸಂಗ್ರಹ :ವಿಧಾನ ಪರಿಷತ್ ನಡವಳಿಕೆ ದಿನಾಂಕ 3-7-1934)

## ಭಾಗ-3

## ಪ್ರಮುಖ ಚಿಂತನೆಗಳು

### ವಿಧಾನಸೌಧದ ವರ್ಣನೆ

ಪಾರ್ಲಿಮೆಂಟಿನಲ್ಲಿ ಭಾಷಾವಾರು ಪ್ರಾಂತ್ಯದ ಮಸೂದೆಗೆ ಅಂಗೀಕಾರ ದೊರೆಯಿತು. 1956ನೇ ನವೆಂಬರ್ 1 ರಲ್ಲಿ ವಿಶಾಲ ಮೈಸೂರಿನ ಉದ್ಘಾಟನೆಯನ್ನು ನೆರವೇರಿಸಲು ರಾಷ್ಟ್ರಪತಿ ಶ್ರೀ ರಾಜೇಂದ್ರ ಪ್ರಸಾದವರು ಅಂಗೀಕರಿಸಿದರು.

ವಿಶಾಲ ಮೈಸೂರಿನ ಪ್ರಥಮ ಮಂತ್ರಿಯಾರಾಗಬೇಕು?

ಶ್ರೀ ಹನುಮಂತಯ್ಯನವರು ಪದಚ್ಯುತರಾದ ಮೇಲೆ ಶ್ರೀ ಕಡಿದಾಳ್ ಮಂಜಪ್ಪನವರು ಎರಡು ತಿಂಗಳ ಕಾಲ ಈ ಸ್ಥಾನದಲ್ಲಿ ಮುಖ್ಯಮಂತ್ರಿಯಾಗಿದ್ದರು. ಅವರನ್ನೇ ಮುಂದುವರೆಸುವರೇ ಅಥವಾ ಇಲ್ಲವೆ ಎಂಬ ಸಮಸ್ಯೆಯ ಎದ್ದಿತು. ವಿಶಾಲ ಮೈಸೂರಿನ ಎಲ್ಲಾ ಭಾಗಗಳಿಂದ ಹೊಸ ಸದಸ್ಯರು ಆಗಮಿಸಿದರು. ಶ್ರೀ ಹನುಮಂತಯ್ಯನವರ ಉತ್ತರ ಕರ್ನಾಟಕದ ಪ್ರವಾಸ ಕಾಲದಲ್ಲಿ "ನೀವೇ ಅಖಿಲ ಕರ್ನಾಟಕದ ಪ್ರಥಮ ಮುಖ್ಯಮಂತ್ರಿ"ಎಂದು ಭಿನ್ನವತ್ತಳಿಕೆಯಲ್ಲಿ ಘೋಷಿಸಿದ್ದರು. ಆದರೆ ಈ ಪ್ರವಾಸದ ಫಲವಾಗಿ ಅವರ ವಿರೋಧಿಗಳು ಹೆಚ್ಚಿದರು. ಹಿಂದೆ ನಡೆದುದೆಲ್ಲಾ ಮರೆತುಹೋಯಿತು. ಉತ್ತರ ಕರ್ನಾಟಕದ ಮಹನೀಯರ ಪ್ರಭಾವವು ಹೆಚ್ಚಾಯಿತು. ಶ್ರೀ ನಿಜಲಿಂಗಪ್ಪನವರನ್ನು ವಿಶಾಲ ಮೈಸೂರಿನ ಪ್ರಥಮ ಮುಖ್ಯಮಂತ್ರಿಗಳಾನ್ನಾಗಿ ಚುನಾಯಿಸಿದರು. ಶ್ರೀ ಕಡಿದಾಳರವರು ಅವರ ಮಂತ್ರಿಮಂಡಲದಲ್ಲಿ ಸೇರಿದರು. ಉಳಿದ ಹಿಂದಿನ ಮಂತ್ರಿಗಳೆಲ್ಲ ನಿರುದ್ಯೋಗಿಗಳಾದರು. ಹನುಮಂತಯ್ಯನವರ ವಿಷಯವನ್ನು ನಿಷ್ಪಕ್ಷಪಾತವಾಗಿ ಹೇಳುವುದಾದರೆ ಅವರಲ್ಲಿ ಕೆಲವು ಲೋಪದೋಷಗಳಿದ್ದವು ಆದರೆ ಅವರ ಆಡಳಿತವು ಬಿಗಿಯಾಗಿದ್ದು, ಸ್ವಾರ್ಥಿಗಳ ಪ್ರಭಾವಕ್ಕೆ ಅವರು ಒಳಗಾಗುತ್ತಿರಲಿಲ್ಲ. ಅವರ ದೃಢಸಂಕಲ್ಪವಿಲ್ಲದಿದ್ದರೆ ವಿಧಾನಸೌಧದ ಕಟ್ಟಡವು ಪೂರ್ಣವಾಗುತ್ತಿರಲಿಲ್ಲ. ವಿಧಾನಸೌಧದ ಕಟ್ಟಡದ ವಿಷಯವಾಗಿ ವಿರೋಧಿಗಳು ಕಟುವಾಗಿ ಟೀಕಿಸಿದರು: ತನಿಖೆಯನ್ನು ನಡೆಸಲು ಒಂದು ಸಮಿತಿಯನ್ನೇ ನೇಮಿಸಿದರು. ಆದರೂ ಶ್ರೀ ಹನುಮಂತಯ್ಯನವರು ಅಷ್ಟು ದೊಡ್ಡ ಕಟ್ಟಡವನ್ನು ನಾಲ್ಕೈದು ವರ್ಷಗಳಲ್ಲಿ ಪೂರೈಸಿದರೆಂಬುದು ಮರೆಯಲಾಗದು.

ವಿಧಾನಸೌಧದ ಮುಂದೆ ನಿಂತು ಆ ದಿವ್ಯ ಭವನವನ್ನು ವೀಕ್ಷಿಸಿದರೆ ಪ್ರತಿಯೊಬ್ಬ ಮೈಸೂರಿನವನಿಗೂ ಇಂದು ಒಂದು ಹೆಮ್ಮೆಯಾಗುತ್ತದೆ. ಅದರ ಸೌಂದರ್ಯ, ಕೀರ್ತಿ ಇಂಡಿಯಾ ದೇಶದ ಹೊರಗೂ ಹರಡಿದೆ. ಈ ಸುಂದರವಾದ ಕಟ್ಟಡವನ್ನು ನೋಡಲು ಪ್ರತಿ ದಿವಸವೂ ನೂರಾರು ಜನ ಪ್ರೇಕ್ಷಕರು ಬರುತ್ತಾರೆ. ಶ್ರೀ ಹನುಮಂತಯ್ಯನವರು ಮುಖ್ಯಮಂತ್ರಿಯಾಗಿ ಮುಂದುವರಿದಿದ್ದರೆ ಅದರ ಸೌಂದರ್ಯ ಇನ್ನೂ ಹೆಚ್ಚುತ್ತಿತ್ತು. ಆಡಳಿತದ ದೃಷ್ಟಿಯಿಂದ ಇಂಥ ಕಟ್ಟಡದ ಅವಶ್ಯಕತೆ ಇದ್ದಿತು. ವಿಶಾಲ ಮೈಸೂರು ಆದ ನಂತರ ಸಿಬ್ಬಂದಿಯ ಸಂಖ್ಯೆಯೂ ವಿಪರೀತ ಹೆಚ್ಚಿತು. ಖಾತೆಗಳೂ ಜಾಸ್ತಿಯಾದವು. ಮಂತ್ರಿಗಳ ಸಂಖ್ಯೆಯೂ 20 ರಿಂದ 30ಕ್ಕೆ ಹೆಚ್ಚಿತು. ವಿಧಾನಸಭೆಗೆ, ವಿಧಾನ ಪರಿಷತ್ತಿಗೆ ದೊಡ್ಡಮಂದಿರಗಳೂ (Hall) ಬೇಕಾಗಿದ್ದವು.

ವಿಧಾನಸೌಧವು ಸಕಾಲಕ್ಕೆ ಮುಗಿಯಿತು. ಅದರಲ್ಲಿಯೇ ಈಗ ಎಲ್ಲರೂ ಆಡಳಿತ ನಡೆಸುತ್ತಿದ್ದಾರೆ. ಈ ಕಟ್ಟಡವಾಗದೆ ಇದ್ದಿದ್ದರೆ ಕರ್ನೂಲಿನಲ್ಲಿ ಆಂಧ್ರಸರ್ಕಾರ ಮಾಡಿದ ಹಾಗೆ ಡೇರೆಗಳನ್ನು ಉಪಯೋಗಿಸಬೇಕಾಗಿತ್ತು.

ಹಣವು ದುರಪಯೋಗವಾಯಿತೆಂದು ಕೆಲವರ ಟೀಕೆ. ಇಷ್ಟು ದೊಡ್ಡ ಕಟ್ಟಡವನ್ನು ಅತಿ ಶ್ರೀಘ್ರದಲ್ಲಿ ಕಟ್ಟುವಾಗ ಸ್ವಲ್ಪ ಪೋಲಾಗಿರುವುದು ಸಹಜ. ಕೆಲವರು ಹಣವನ್ನು ದುರುಪಯೋಗ ಮಾಡಿರಬಹುದು. ಆದರೂ ದೆಹಲಿ ಮತ್ತು ಇತರ ಕಡೆಗಳಲ್ಲಿರುವ ಕಟ್ಟಡಗಳಿಗೆ ಹೋಲಿಸಿದರೆ ಈ ಕಟ್ಟಡದ ಖರ್ಚು ಹೆಚ್ಚಲ್ಲವೆಂದು ಹೇಳಬೇಕಾಗಿದೆ. ಅದರ ಅಲಂಕಾರ, ಶೃಂಗಾರಕ್ಕೋಸ್ಕರವೇ ಬಹಳ ಖರ್ಚಾಗಿದೆ. ಶ್ರೀ ಹನುಮಂತಯ್ಯನವರು ಕಲಾಪ್ರಿಯರು."A Thing of beauty is a joy for ever" ಸೌಂದರ್ಯವು ಸತತ ಸಂತೋಷವನ್ನುಂಟು ಮಾಡುತ್ತದೆ. ಈಗ ವಿಧಾನಸೌಧವನ್ನು ನೋಡುವುದರಿಂದ ಪ್ರೇಕ್ಷಕರಿಗೆ ಎಷ್ಟು ಹರ್ಷವಾಗುತ್ತದೆಯೋ, ಅಷ್ಟು ಹರ್ಷ ಮತ್ತು ಹೆಮ್ಮೆ, ಶೃಂಗಾರರಹಿತ ಕಟ್ಟಡತದಿಂದ ಉಂಟಾಗುತ್ತಿರಲಿಲ್ಲ ಅದು ಮೈಸೂರಿನ ಹೆಮ್ಮೆಯಾಗುತ್ತಿರಲಿಲ್ಲ. ಮೈಸೂರಿನ ಶಿಲೆ, ಚಪ್ಪಡಿ ಎಷ್ಟು ಸೌಂದರ್ಯವನ್ನುಂಟು ಮಾಡುತ್ತವೆ. ಮೈಸೂರಿನ ಗ್ರಾನೈಟು ಶಿಲೆಯು ಪರದೇಶಗಳಲ್ಲಿ ಖ್ಯಾತಿಗೊಂಡಿದೆ. ಅದರ ರಫ್ತು ಜಾಸ್ತಿಯಾಗಿದೆ. ಟೀಕೆಗಳು ಏನೇ ಇರಲಿ, ಈ ಕಟ್ಟಡವು ವಿಶಾಲ ಮೈಸೂರಿನ ಹೆಮ್ಮೆ ಈ ವಿಶಾಲ ಭವನದಲ್ಲಿ ವಿಶಾಲ ಮೈಸೂರಿನ ಪ್ರಥಮ ಮಂತ್ರಿಯಾಗಲು ಅವರಿಗೆ ಅವಕಾಶ ದೊರೆಯದಿದ್ದರೂ, ಅವರ ಹೆಸರು ವಿಧಾನಸೌಧದ ಶಿಲ್ಪಿಗಳೆಂದು ಬಹಳ ದಿವಸಗಳವರೆಗೆ ಸ್ಮರಣೆಯಲ್ಲಿರುತ್ತದೆ.

## ಒಳಾಡಳಿತ ಸಂಸ್ಥೆಗಳು

ಡಿಸ್ಟ್ರಿಕ್ಟ್ ಬೋರ್ಡು ಮತ್ತು ಮುನಿಸಿಪಾಲಿಟಿಗಳ ವಿಷಯ ಹಿಂದೆಯೇ ತಿಳಿಸಿರುತ್ತೇನೆ. ಪ್ರತಿ ತಾಲ್ಲೂಕಿನಿಂದ ಡಿಸ್ಟ್ರಿಕ್ಟ ಬೋರ್ಡಿಗೆ ಇಬ್ಬರು ಸದಸ್ಯರನ್ನು ಆರಿಸುತ್ತಿದ್ದರು. ಪ್ರಜಾಪ್ರತಿನಿಧಿ ಸಭೆಯ ಮತದಾರರ ಹಾಗೆ ಇದಕ್ಕೂ ಕಂದಾಯ ಮತ್ತು ಮೋಹತರ್ಪ ಕೊಡುವವರು ಮಾತ್ರ ಓಟು( ಮತ) ಕೊಡುತ್ತಿದ್ದರು ; 5 ರಿಂದ 7 ಜನ ಅನುಭವವುಳ್ಳ ಖಾಸಗೀ ಮಹನೀಯರು ನಾಮಕರಣ ಮಾಡುತ್ತಿದ್ದರು. ಆಯಾ ಜಿಲ್ಲೆಯ ಎಕ್ಸಿಕ್ಯೂಟಿವ್ ಇಂಜಿನಿಯರ್, ವೈದ್ಯಾಧಿಕಾರಿಗಳು, ರೆವಿನ್ಯೂ ಸಬ್ ಡಿವಿಜನ್ ಅಧಿಕಾರಿಗಳು ವಿದ್ಯಾಭ್ಯಾಸದ ಅಧಿಕಾರಿಗಳು ಬೋರ್ಡಿನ ಸದಸ್ಯರಾಗಿ ಸೂಕ್ತವಾಗಿ ಸಲಹೆಗಳನ್ನು ಕೊಡುತ್ತಿದ್ದರು. ಜಿಲ್ಲಾಧಿಕಾರಿಗಳು 1930ರ ವರೆಗೆ ಈ ಸಭೆಯ ಅಧ್ಯಕ್ಷರಾಗಿದ್ದು, ಬೋರ್ಡಿನ ಮುಖ್ಯಾಧಿಕಾರಿಗಳಾಗಿರುತ್ತಿದ್ದರು.

ಹೊಸ ರಸ್ತೆಗಳನ್ನು ಮಾಡಿಸುವುದು, ಇರುವ ರಸ್ತೆಗಳ ರಿಪೇರಿ, ಗ್ರಾಮಾಂತರಗಳಿಗೆ ವೈದ್ಯ ಸೌಕರ್ಯ, ಸಿಡುಬು ಹಾಕುವುದು, ಕುಡಿಯುವ ನೀರಿನ ಸೌಕರ್ಯ ಇವೇ ಬೋರ್ಡಿನ ಮುಖ್ಯ ಕರ್ತವ್ಯವಾಗಿದ್ದವು.

1930ರಲ್ಲಿ ಸರ್ಕಾರದವರು ಜಿಲ್ಲಾ ಬೋರ್ಡಿಗೆ ಖಾಸಗಿ ಅಧ್ಯಕ್ಷರನ್ನು ಆರಿಸುವ ಹಕ್ಕನ್ನು ನೀಡಿದರು. ಚುನಾಯಿತ ಅಧ್ಯಕ್ಷರ ಅವಧಿಯು ಮೂರು ವರುಷವಿದ್ದಿತು. ಚುನಾಯಿತರಾದ ಅಧ್ಯಕ್ಷರು ತಮ್ಮ ಅವಧಿಯಲ್ಲಿ ಅನೇಕ ಶ್ಲಾಘನೀಯವಾದ ಕೆಲಸಗಳನ್ನು ಮಾಡಿದರು. ಸಿಬ್ಬಂದಿಯ ಖರ್ಚು ಬಹಳ ಮಿತವಾಗಿದ್ದಿತು. ಒಂದು ಡಿಸ್ಟ್ರಿಕ್ಟ್ ಬೋರ್ಡು ಆಫೀಸಿನಲ್ಲಿ 6-8 ಗುಮಾಸ್ತರು,

ಪ್ರತಿ ತಾಲ್ಲೂಕಿಗೆ ಒಬ್ಬ ಸ್ಯಾನಿಟರಿ ಇನ್ಸಪೆಕ್ಟರ್, ಒಬ್ಬ ವ್ಯಾಕ್ಸಿನೇಟರು ಮತ್ತು ಹಲವು ಜವಾನರು ಸಿಬ್ಬಂದಿಯಲ್ಲಿರುತ್ತಿದ್ದರು. ರಸ್ತೆಗಳ ಕಾಮಗಾರಿಯು ಇಂಜಿನಿಯರ್ ಇಲಾಖೆಯವರಿಗೆ ವಹಿಸಲ್ಪಟ್ಟಿದ್ದಿತು. ಆದುದರಿಂದ ವರಮಾನದ ಬಹು ಭಾಗವು ರಸ್ತೆಗಳ ರಿಪೇರಿಗೂ ವೈದ್ಯ ಸೌಕರ್ಯ ಮತ್ತು ಕುಡಿಯುವ ನೀರಿನ ಸೌಕರ್ಯಗಳಿಗಾಗಿಯೂ ವಿನಿಯೋಗಿಸಲ್ಪಡುತ್ತಿತ್ತು.

ಪ್ರಜಾ ಸರ್ಕಾರ ಬಂದ ನಂತರ ಸ್ಥಳೀಯ ಸಂಸ್ಥೆಗಳಿಗೆ (ಒಳಾಡಳಿತ ಸರ್ಕಾರ) ಪ್ರಜಾಪ್ರಭುತ್ವಕ್ಕೆ ಅನುಸಾರವಾಗಿ ಮಾರ್ಪಡಿಸಬೇಕೆಂದು ಶ್ರೀ ಕೆ.ಸಿ. ರೆಡ್ಡಿಯವರ ಮಂತ್ರಿಮಂಡಲವು ತೀರ್ಮಾನಿಸಿ, ಶ್ರೀ ವಿ. ವೆಂಕಟಪ್ಪನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿದರು. ಇವುಗಳ ಪುನರ್ ವ್ಯವಸ್ಥೆಯಾಗುವವರೆಗೂ ಆಗ ಜಾರಿಯಲ್ಲಿದ್ದ ಡಿಸ್ಟ್ರಿಕ್ಟ್ ಬೋರ್ಡುಗಳ ವಿಸರ್ಜನೆ (ವಜಾ) ಮಾಡಿ ಅವುಗಳ ಮುಂದಿನ ಆಡಳಿತವನ್ನು ಆಯಾ ಜಿಲ್ಲಾದಿಕಾರಿಗಳಿಗೆ ವಹಿಸಿದರು. ಶ್ರೀ ವಿ. ವೆಂಕಟಪ್ಪ ಸಮಿತಿಯ ಅನೇಕ ತಿಂಗಳು ಕೆಲಸ ಮಾಡಿ ತನ್ನ ವರದಿಯನ್ನು ಸರ್ಕಾರಕ್ಕೆ ಒಪ್ಪಿಸಿತು ಪ್ರತೀ ಗ್ರಾಮದಲ್ಲಿಯೂ ವಯಸ್ಕರ ಮತದಾನದಿಂದ ಪಂಚಾಯಿತಿ ಮೆಂಬರು (ಸದಸ್ಯ)ಗಳನ್ನು ಆರಿಸತಕ್ಕದ್ದೆಂದೂ ಮತ್ತು ಆಯಾ ತಾಲ್ಲೂಕಿನ ಪಂಚಾಯ್ತಿ ಸದಸ್ಯರೆಲ್ಲಾ ಸೇರಿ - ಇವರನ್ನು ಡಿಸ್ಟ್ರಿಕ್ಟ್ ಬೋರ್ಡಿಗೆ ಸದಸ್ಯರಾಗಿ ಚುನಾಯಿಸತಕ್ಕದ್ದೆಂದು ಈ ಸಮಿತಿಯ ವರದಿಯಲ್ಲಿ ಸೂಚಿತವಾಯಿತು. ಸರ್ಕಾರವು ಸಮಿತಿಯ ಸಲಹೆಗಳನ್ನು ಅಂಗೀಕರಿಸಿ, ಆದರ ಮಸೂದೆಯನ್ನು ವಿಧಾನಸಭೆಯಲ್ಲಿ ಮಂಡಿಸಿ ಆದರ ಒಪ್ಪಿಗೆಯನ್ನು ಪಡೆಯಲಾಯಿತು. ಆದರೆ ಮುಂದಿನ ಕಾರ್ಯಕ್ರಮವನ್ನು ತೆಗೆದುಕೊಳ್ಳಲಿಲ್ಲ. ಡೆಪ್ಯೂಟಿ ಕಮೀಷನರೇ ಜಿಲ್ಲಾ ಬೋರ್ಡಿನ ಕೆಲಸವನ್ನು ನೋಡಿಕೊಳ್ಳುವುದು ಮುಂದುವರಿಯಿತು. ಜಿಲ್ಲಾ ಬೋರ್ಡಿನ ಚಟುವಟಿಕೆಯು ಕಡಿಮೆಯಾಗುತ್ತಾ ಬಂದಿತು.

1960ರಲ್ಲಿ ಶ್ರೀ ಬಲವಂತರಾವ್ ಮೆಹ್ತಾರವರ ವರದಿಯು ಬಂದಿತು. ಈ ವರದಿಯ ಪ್ರಕಾರ ಜಿಲ್ಲಾ ಬೋರ್ಡುಗಳು ವಜಾ ಮಾಡಲ್ಪಟ್ಟು ಅವುಗಳ ಸ್ಥಳಗಳಲ್ಲಿ ತಾಲ್ಲೂಕು ಬೋರ್ಡುಗಳು ಮತ್ತು ಗ್ರಾಮ ಪಂಚಾಯ್ತಿಗಳನ್ನು ಸ್ಥಾಪಿಸಿ, ಪಂಚಾಯ್ತಿ ರಾಜ್ಯವನ್ನು ಸ್ಥಾಪಿಸಬೇಕೆಂದು ತೀರ್ಮಾನವಾಯಿತು. ಇದರ ಪ್ರಚಾರವು ದೇಶದಲ್ಲೆಲ್ಲಾ ಹರಡಿತು.

ಪಂಚಾಯ್ತಿಗಳಿಗೂ, ತಾಲ್ಲೂಕು ಬೋರ್ಡುಗಳಿಗೂ ಚುನಾವಣೆಯು ತೀವ್ರವಾಗಿ ನಡೆಯಿತು. ಒಳಾಡಳಿತ ಸಂಸ್ಥೆಗಳಲ್ಲೂ ಪಾರ್ಟಿಗಳ ಪ್ರಾಬಲ್ಯ ಮನೋಭಾವ ತಲೆದೂರಿತು.

ಈ ಒಳಾಡಳಿತ ಸಂಸ್ಥೆಗಳು ನಾಲ್ಕು ವರುಷಗಳಿಂದಲೂ ಕೆಲಸ ಮಾಡುತ್ತಿದೆ ಎಂದರೆ ಈ ನಾಲ್ಕು ವರುಷಗಳ ಅನುಭವದಿಂದ ಈ ಒಳಾಡಳಿತ ಸಂಸ್ಥೆಗಳು ಅಷ್ಟೇನೂ ಉಪಯುಕ್ತವಾದ ಕೆಲಸಗಳ್ನು ಕೈಗೊಂಡಿಲ್ಲವೆಂದು ಹೇಳಬೇಕಾಗಿದೆ. ಮುಖ್ಯ ಕಾರಣ ಹಣದ ಅಭಾವ ಪುನಃ ಸರ್ಕಾರವು ಶ್ರೀ ಕೊಂಡಜ್ಜಿ ಬಸಪ್ಪನವರ ಅಧ್ಯಕ್ಷತೆಯಲ್ಲಿ ಇನ್ನೊಂದು ಸಮಿತಿಯನ್ನು ರಚಿಸಿತು. ಸಮಿತಿ ಸರ್ಕಾರಕ್ಕೆ ಒಂದು ವರದಿಯನ್ನು ಒಪ್ಪಿಸಿ ಜಿಲ್ಲಾ ಬೋರ್ಡು ಪರಿಷತ್ತುಗಳನ್ನು ಪುನಃ ಸ್ಥಾಪನೆ ಮಾಡಬೇಕೆಂದು ಸಲಹೆ ಮಾಡಿದೆ. ಇದನ್ನು ಕಾರ್ಯ ರೂಪಕ್ಕೆ ತರಲು ಒಂದು ಮಸೂದೆಯು ವಿಧಾನಸಭೆಯ ಪರಿಶೀಲನೆಯಲ್ಲಿದೆ. ಅಂತು ಈ ಸ್ಥಳೀಯ ಸಂಸ್ಥೆಗಳ ಭವಿಷ್ಯ ಹೇಗಿದೆಯೋ ಹೇಳಲು ಸಾಧ್ಯವಿಲ್ಲ ಹಣದ ಅಭಾವ, ಹೆಚ್ಚಿದ ಸಿಬ್ಬಂದಿ ಖರ್ಚು, ಪಾರ್ಟಿ ಮನೋಭಾವ ಇವುಗಳಲ್ಲೂ ಸೇರಿ ಸ್ಥಳೀಯ ಸಂಸ್ಥೆಗಳ ಉಪಯೋಗವನ್ನು ಬಹಳ ಕಡಿಮೆ ಮಾಡಿದೆ.

## ಹಣಕಾಸಿನ ಪರಿಸ್ಥಿತಿ

ಶ್ರೀ ಹನುಮಂತಯ್ಯನವರು ಮಂತ್ರಿಗಳಾದ ಮೇಲೆ ಮೈಸೂರು ಹಣಕಾಸಿನ ಪರಿಸ್ಥಿತಿ ಇನ್ನೂ ಶೋಚನೀಯವಾಯಿತು. ನನ್ನ ಬಡ್ಜೆಟ್ಟು ಹಿಂದಿನ ಮತ್ತು ಆಗಿನ ಹಣಕಾಸಿನ ಪರಿಸ್ಥಿತಿಯ ಅವಧಿಯಲ್ಲಿ ಈ ಕೆಳಗೆ ಕಂಡಂತೆ ವಿವರಿಸಿದೆನು.

1.Period of administrtion before 1947 was one of peace, plenty and prosperity, free from extra taxation.

2.The Period from 1947-52 (Sri K.C. Reddy's period) was a period of extravagence.

3.The period from 1952 to 1957 (Sri Hanumanthaiah's period) was one of indiscriminate taxation.

ಮೊದಲನೆ. ಅವಧಿಯಲ್ಲಿ 1957ರವರೆಗೆ, ತೆರಿಗೆಗಳಿಂದ ಮುಕ್ತವಾದ, ಶಾಂತಿ ಸುಖದಿಂದ ಕೂಡಿದ ಕಾಲವಾಗಿದ್ದಿತು.

1947ರ ನಂತರ ದುಂದುವೆಚ್ಚದ ಕಾಲ ಪ್ರಾರಂಭವಾಯಿತು. ಹನುಮಂತಯ್ಯನವರ ಕಾಲದಲ್ಲಿ ತೆರಿಗೆಯ ಸುರಿಮಳೆಯಾಯಿತು. 1952ನೇ ಜೂನ್‌ನಲ್ಲಿ ಮಂಡಿಸಿದ ಹಣಕಾಸಿನ ಅಂದಾಜು ಪಟ್ಟಿಯಲ್ಲಿ (Budget) ಆದಾಯಕ್ಕಿಂತ ಖರ್ಚು 4 ಕೋಟಿ 35 ಲಕ್ಷ ರೂಪಾಯಿ ಜಾಸ್ತಿಯಾಯಿತು. ಸರ್ಕಾರದ ಸಾಲದ ಹೊರೆ 40 ಕೋಟಿಯವರೆಗೂ ಎರಿದ್ದಿತು. 1952ರಿಂದ ಪಂಚವಾರ್ಷಿಕ ಯೋಜನೆಯು ಪ್ರಾರಂಭವಾಯಿತು. ಈ ಯೋಜನೆಯಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳೂ, ಭಾವನಾತ್ಮಕ ರಚನೆಗಳೂ ಸೇರಲ್ಪಟ್ಟಿದ್ದುದರಿಂದ ಹೆಚ್ಚು ಹಣ ಬೇಕಾಗಿದ್ದಿತು. ಈ ಹಣವು ಹೊಸ ತೆರಿಗೆಗಳಿಂದಲೂ, ಸಾಲ ಎತ್ತುವುದರಿಂದಲೂ ಮತ್ತು ಕೇಂದ್ರ ಸರ್ಕಾರದಿಂದಲೂ ಬರಬೇಕಾಯಿತು. ಒಂದೊಂದು ಪಂಚವಾರ್ಷಿಕ ಯೋಜನೆಯ ಒಟ್ಟು ಅಂದಾಜು 38 ಕೋಟಿ ರೂಪಾಯಿಗಳಾಯಿತು. ಈ ಹಣವನ್ನು ಎಲ್ಲಿಂದ ತರುವುದು ? ಮೈಸೂರಿನ ಆರ್ಥಿಕ ಸ್ವಾತಂತ್ರ್ಯ ಮಾಯವಾಯಿತು. ಮತ್ತು ನಾನು ವಿಧಾನಸಭೆಯಲ್ಲಿ ಹೇಳಿದ್ದಂತೆ "Mysore became the Pensioner of the Central Government depending on its doles"

ಶ್ರೀ ಹನುಮಂತಯ್ಯನವರು ಆಡಳಿತದಲ್ಲಿ ಆಗುತ್ತಾ ಇದ್ದ ಅಧಿಕ ಖರ್ಚು ಕಡಿಮೆ ಮಾಡಬಹುದೆಂದು ಭಾವಿಸಿದೆವು. 1952-54ನೇ ವರುಷದಲ್ಲಿ 30 ಲಕ್ಷ ರೂಪಾಯಿಗಳ ಉಳಿತಾಯ ಮಾಡಲು ಪ್ರಯತ್ನಿಸಿದರು. ಆದರೆ ಮುಂದಿನ ವರ್ಷಗಳಲ್ಲಿ ಖರ್ಚು ಜಾಸ್ತಿಯಾಗುತ್ತಲೇ ಬಂದಿತು. ವಿಶೇಷ ತೆರಿಗೆಗಳನ್ನು ವಿಧಿಸಿದ್ದರಿಂದ ತೆರಿಗೆಗಳ ಯುಗವಾಯಿತು. 1953-54ರಲ್ಲಿ ಆದಾಯಕ್ಕಿಂತ ಖರ್ಚು 4 ಕೋಟಿ ರೂ. ಜಾಸ್ತಿಯಾಯಿತು. ಸಂಗ್ರಹಿಸಿದ ನಿಧಿಯು ಕ್ಷೀಣಿಸುತ್ತಾ ಬಂದಿತು ಕೊನೆಗೆ 13 ಕೋಟಿ ರೂಪಾಯಿಗಳ ಸೆಕ್ಯೂರಿಟಿಗಳು ನಿಂತವು. ಇವಕ್ಕೂ ಉಳಿಗಾಲವಿಲ್ಲದೆ ಮಾರಬೇಕಾಯಿತು. ಪಂಚವಾರ್ಷಿಕ ಯೋಜನೆಯಲ್ಲಿ

ಸೇರಿಸಲ್ಪಟ್ಟಿರುವ ಅಭಿವೃದ್ಧಿ ಕಾರ್ಯಗಳನ್ನು ಕಾರ್ಯಗತ ಮಾಡಲು ಹೆಚ್ಚಿಗೆ ತೆರಿಗೆಗಳನ್ನು ವಿಧಿಸುವುದೂ, ಹೆಚ್ಚಿಗೆ ಸಾಲವನ್ನು ತೆಗೆಯುವುದು, ಸಿಬ್ಬಂದಿಗೆ ಹೆಚ್ಚಿಗೆ ಖರ್ಚು ಮಾಡುವುದು ಅನಿವಾರ್ಯವೆಂದು ಸರ್ಕಾರದ ವಾದವಾಗಿದ್ದಿತು.

ಕೆಳಗಿನ ತಃಖ್ತೆಯು 1952ನೇ ಇಸವಿಯಿಂದ ಹಣಕಾಸಿನ ಪರಿಸ್ಥಿತಿಯನ್ನು ಸೂಚಿಸುತ್ತದೆ.

| ವರ್ಷ | ಆದಾಯ ಕೋಟಿ-ಲಕ್ಷ | ವೆಚ್ಚ ಕೋಟಿ-ಲಕ್ಷ | ಖೋತಾ ಕೋಟಿ-ಲಕ್ಷ | ಉಳಿತಾಯ ಕೋಟಿ-ಲಕ್ಷ |
|---|---|---|---|---|
| 1952-53 | 18.78 | 18.3 | -- | -75 |
| 1953-54 | 16.78 | 22.6 | 5.28 | -- |
| 1954-55 | 21.00 | 23.16 | 2.16 | -- |
| 1955-56 | 22.00 | 27.6 | 5.6 | -- |
| 1956-57 | 21.30 | 25.80 | 4.50 | -- |
| 1957-58 | 49.05 | 62.43 | 11.50 | -- |
| 1958-59 | -- | -- | -- | -- |
| 1959-60 | -- | -- | -- | -- |
| 1960-61 | -- | -- | -- | -- |
| 1961-62 | 91.01 | 95.68 | 4.66 | -- |
| 1962-63 | 99.70 | 102.09 | 3.22 | -- |
| 1963-64 | 99.11 | 98.01 | -- | 1.09 |

**ಸಾರ್ವಜನಿಕರ ಸಾಲ-Public Debts**

| | | ಕೋಟಿ | ಲಕ್ಷ |
|---|---|---|---|
| 1. | 1-4-1950 | 54 | 73 |
| 2. | 2-4-1951 | 59 | - |
| 3. | 1-4-1954 | 63 | - |
| 4. | 1-4-1955 | 72 | - |
| 5. | 1-4-1956 | 86 | - |
| 6. | 1-4-1958 | 85 | 75 |
| 7. | 1-4-1960 | 109 | - |
| 8. | 1-4-1962 | 157 | - |

ಕಾಂಗ್ರೆಸ್ ಸರ್ಕಾರ ಬಂದ ಮೇಲೆ ರಾಜ್ಯದಲ್ಲಿ ಹೊಸದಾಗಿ ವಿಧಿಸಿರುವ ತೆರಿಗೆಗಳು 1954ರವರೆಗೆ

1. ಮಾರಾಟದ ತೆರಿಗೆ.

2. ಎಲೆಕ್ಟ್ರಿಸಿಟಿ ಮೇಲೆ ಸರ್‌ಚಾರ್ಜು ಶೇಕಡ 10 ರಷ್ಟು.

3. ಹೀಟಿಂಗ್ ಸರ್ಕ್ಯೂಟ್ ದರ ಹೆಚ್ಚಿಸಿರುವುದು.

4. ರಿಜಿಸ್ಟ್ರೇಷನ್ ಫೀ ಹೆಚ್ಚಿಸಿರುವುದು.

5. ಬೆಟ್ಟಿಂಗ್ ಬಾಕ್ಸ್ ಶೇಕಡ $12^1/_2$.

6. ಸಿನಿಮಾ ಟ್ಯಾಕ್ಸ್ ಹಾಕಿರುವುದು ಶೇಕಡ 25.

7. ಕಾರು ಮತ್ತು ಬಸ್ಸುಗಳ ಮೇಲ ತೆರಿಗೆ ಹೆಚ್ಚು ಮಾಡಿದ್ದು 28ರೂ.ನಿಂದ 60 ರೂ.ಗೆ ಈಗ 120 ರೂಪಾಯಿ.

8. ಬಸ್ಸುಗಳ ಮತ್ತು ಲಾರಿಗಳ ಮೇಲೆ ಹೆಚ್ಚಿಗೆ ಟ್ಯಾಕ್ಸು.

9. ಪೆಟ್ರೋಲ್ ಮೇಲೆ ಟ್ಯಾಕ್ಸ್ ಗ್ಯಾಲನ್ನಿಗೆ 0-6-0.

10. ಬಟ್ಟೆ ಮೇಲೆ ಸುಂಕ.

11. ತಂಬಾಕು, ಸಿಗರೇಟು ಮೇಲೆ ಸುಂಕ.

12. ಸಕ್ಕರೆ ಮತ್ತು ಬೆಂಕಿಪಟ್ಟಣದ ಮೇಲೆ ಸುಂಕ.

13. ಎಜುಕೇಷನ್ ಸೆಸ್ಸು ಹೆಚ್ಚಿಗೆ ಮಾಡಿದುದು.

14. ಸ್ಟಾಂಪು ಡ್ಯೂಟಿ ಹೆಚ್ಚಿಗೆ ಮಾಡಿದುದು.

1954ನೇ ಮಾರ್ಚಿ 10ನೇ ತಾರೀಖಿನಲ್ಲಿ ಈ ಕೆಳಗೆ ಕಂಡಂತೆ ತೆರಿಗೆಗಳ ವಿಷಯವಾಗಿ ನಾನು ಹೇಳಿದೆನು.

"ಸ್ವಾಮಿ - ಕಾಲರ, ಪ್ಲೇಗು ಮುಂತಾದ ಸಾಂಕ್ರಾಮಿಕ ಜಾಡ್ಯಗಳನ್ನು ತಡೆಹಿಡಿಯುವುದಕ್ಕೂ ಮತ್ತು ಗುಣಪಡಿಸುವುದಕ್ಕೂ ತಕ್ಕ ಔಷಧೋಪಚಾರಗಳಿವೆ. ಆದರೆ ತೆರಿಗೆ ಪರಂಪರೆಗಳನ್ನು ವಿಧಿಸುವ ಸಾಂಕ್ರಾಮಿಕ ಜಾಡ್ಯಕ್ಕೆ ಯಾವ ಔಷಧೋಪಚಾರವೂ ಇಲ್ಲ ; ತಡೆಯುವ ಮಾರ್ಗವೂ ಇಲ್ಲ. ತಮ್ಮ ಪಾರ್ಟಿಯ ಬೆಂಬಲವಿದೆ ಎಂಬ ಕಾರಣದಿಂದ ಈ ನಿರಂಕುಶ ಸರ್ಕಾರವು ಪ್ರಜಾಪ್ರಭುತ್ವದ ಹೆಸರಿನಲ್ಲಿ ಈ ಅಧಿಕ ತೆರಿಗೆಗಳನ್ನು ವಿಧಿಸುತ್ತಿರುವುದರಿಂದ ಈ ಜಾಡ್ಯದ ನಿವಾರಣೆಗೆ ಔಷದ ಇರುವುದಿಲ್ಲ. ಸರಕಾರದ ದುರಾಡಳಿತದಿಂದ ಪ್ರಜೆಗಳು ತೊಂದರೆಗೆ ಈಡಾಗಬೇಕಾಗಿದೆ."

1954ರಿಂದೀಚೆಗೆ ಅನೇಕ ತೆರಿಗೆಗಳು ವಿಧಿಸಲ್ಪಟ್ಟಿವೆ. ವ್ಯವಸಾಯೋತ್ಪನ್ನ ತೆರಿಗೆ, ಭೂ ಕಂದಾಯ ಹೆಚ್ಚಿಗೆ ಮಾಡಿದ್ದಾರೆ. ಸರ್ ಛಾರ್ಜು ಹಾಕಿರುತ್ತಾರೆ. 1963ರವರೆಗೆ ಸಾಧಾರಣವಾಗಿ ಹೊಸ ತೆರಿಗೆಗಳು ಪ್ರತಿವರ್ಷವೂ ವಿಧಿಸಲ್ಪಟ್ಟಿವೆ.

ಇದರ ಜೊತೆಗೆ ಕೇಂದ್ರ ಸರ್ಕಾರದವರು ಪ್ರತಿವರ್ಷ 100 ಕೋಟಿಗಿಂತ ಹೆಚ್ಚಿಗೆ ಆದಾಯವು ಬರುವ ವರ್ಷ ತೆರಿಗೆಯನ್ನು ಪ್ರತಿ ವರ್ಷ ವಿಧಿಸುತ್ತಾರೆ. ಸ್ಥಳೀಯ ಸಂಸ್ಥೆಗಳೂ, ಮುನಿಸಿಪಾಲಿಟಿಗಳೂ, ತೆರಿಗೆಯನ್ನು ಹೆಚ್ಚಿಗೆ ಮಾಡುತ್ತಿವೆ. ತೆರಿಗೆಗಳ ಪರಂಪರೆ ಮುಂದುವರಿಯುತ್ತಾ ಇದೆ.

ಈಗ ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಪರಿಶೀಲನೆಯು ನಡೆಯುತ್ತಿದೆ.ಈ ಯೋಜನೆಯನ್ನು ಪೂರ್ಣವಾಗಿ ಕಾರ್ಯರೂಪಕ್ಕೆ ತರಲು 22,500 ಕೋಟಿರೂಪಾಯಿಗಳು ಬೇಕಾಗಿವೆಯೆಂದು ಕೇಂದ್ರ ಸರ್ಕಾರ ಮತ್ತು ಯೋಜನಾ ಮಂಡಲಿಯು ತೀರ್ಮಾನಕ್ಕೆ ಬಂದಿವೆ. ಈ ಯೋಜನೆಯ ಖರ್ಚಿನಲ್ಲಿ ಬಹುಭಾಗ ವಿದೇಶಗಳಿಂದಲೂ ಮತ್ತು ಭಾರತ ಪ್ರಜೆಗಳಿಂದಲೂ ಸಾಲ ರೂಪವಾಗಿಯೂ ಮತ್ತು ಹೊಸದಾಗಿ ಹೇರುವ ತೆರಿಗೆಗಳಿಂದಲೂ ಬರಬೇಕಾಗಿದೆ. ಪ್ರಾಂತೀಯ ಸರ್ಕಾರಗಳು 2250 ಕೋಟಿರೂಪಾಯಿಗಳನ್ನು ಹೊಸ ತೆರಿಗೆಗಳಿಂದ ಶೇಖರಿಸಬೇಕೆಂದು ಕೇಂದ್ರ ಸರ್ಕಾರವು ಪ್ರದೇಶ ಸರ್ಕಾರಗಳಿಗೆ ಸೂಚನೆಯನ್ನು ಕೊಟ್ಟಿರುತ್ತದೆ. ಈ ಸೂಚನೆಯ ಪ್ರಕಾರ ಮೈಸೂರು ಸರ್ಕಾರವು ಕನಿಷ್ಟ ಪಕ್ಷ ಒಂದು ವರ್ಷಕ್ಕೆ 50 ಕೋಟಿ ರೂಪಾಯಿ ಹೆಚ್ಚಿಗೆ ವರಮಾನ ಬರುವಷ್ಟು ಪ್ರಮಾಣದಲ್ಲಿ ಹೊಸ ತೆರಿಗೆಗಳನ್ನು ಹಾಕಬೇಕಾಗುತ್ತದೆ ಮತ್ತು ಅಧಿಕವಾಗಿ ಸಾಲವನ್ನು ತೆಗೆದುಕೊಳ್ಳಬೇಕಾಗುತ್ತದೆ. ಇದರ ಪ್ರತಿಕ್ರಿಯೆ ಪ್ರಜೆಗಳ ಮೇಲೆ ಯಾವ ರೀತಿ ಪರಿಣಮಿಸುತ್ತದೆ ಎಂಬುದನ್ನು ನಾನು ಹೇಳಬೇಕಾದ ಅವಶ್ಯಕವಿಲ್ಲ. ಭಾರತ ಸರ್ಕಾರವು ತನ್ನ ಆರ್ಥಿಕ ನೀತಿಯಿಂದ ದೇಶದಲ್ಲಿ ಕಮ್ಯುನಿಸಂ ತತ್ವವು ಹರಡಲು ಒಳ್ಳೆಯ ಅವಕಾಶಗಳನ್ನು ಕಲ್ಪಿಸಿಕೊಡುತ್ತಿದೆ.

ಮೈಸೂರು ಕಾಂಗ್ರೆಸ್ ಸರ್ಕಾರವು ಅನುಸರಿಸುತ್ತಿರುವ ಆರ್ಥಿಕ ನೀತಿಯ ಪರಿಣಾಮವು ಈ ರೀತಿ ಇದೆ.

1. ಪ್ರತಿ ವರ್ಷವೂ ಆದಾಯಕ್ಕಿಂತ ಖರ್ಚು ಜಾಸ್ತಿಯಾಗಿದೆ. 1956ರವರೆಗೆ ಆದಾಯಕ್ಕಿಂತ ಖರ್ಚು ಸುಮಾರು ಮೂರು ಕೋಟಿಯಿಂದ ಐದು ಕೋಟಿ ಜಾಸ್ತಿಯಾಯಿತು.

2. ಪ್ರತಿ ವರ್ಷವೂ ಅಧಿಕ ತೆರಿಗೆಗಳನ್ನು ವಿಧಿಸಬೇಕಾಯಿತು.

3. ಪ್ರತಿ ವರ್ಷವೂ ಅಧಿಕ ಸಾಲವನ್ನು ಸಾರ್ವಜನಿಕರಿಂದಲೂ ಮತ್ತು ಇತರ ದೇಶಗಳಿಂದಲೂ ಪಡೆಯಬೇಕಾಯಿತು.

4. ಪ್ರಜೆಗಳಿಗೆ ಅತ್ಯವಶ್ಯಕವಾದ ಸಾಮಾನು, ಸಾಮಗ್ರಿಗಳ ಬೆಲೆಯು ಬಹಳವಾಗಿ ಹೆಚ್ಚುತ್ತಾ ಬಂತು.

ಆಯವ್ಯಯ ಸಮತೂಗದೆ ಇರುವಾಗ ಸರ್ಕಾರವು ತನ್ನ ಅಧಿಕ ವೆಚ್ಚಕ್ಕೋಸ್ಕರ ಅಧಿಕ ತೆರಿಗೆಗಳನ್ನು ವಿಧಿಸಬೇಕಾಗುತ್ತದೆ ಮತ್ತು ಸಾಲವನ್ನು ತೆಗೆದುಕೊಳ್ಳಬೇಕಾಗುತ್ತದೆ.

## ತೆರಿಗೆಗಳು

ಸರ್ಕಾರದ ಸಾಮಾನ್ಯ ಖರ್ಚಿಗೂ ಮತ್ತು ಸೌಕರ್ಯಗಳನ್ನೊದಗಿಸುವುದಕ್ಕೂ ಪ್ರಜೆಗಳು ಸೂಕ್ತವಾದ ತೆರಿಗೆಗಳನ್ನು ಕೊಡಬೇಕಾದುದು ಅವರ ಧರ್ಮ. ಅವರು ಕೊಡಬೇಕಾದ ತೆರಿಗೆಗಳು ಅವರ ಉತ್ಪಾದನೆ ಮತ್ತು ಆರ್ಥಿಕ ಶಕ್ತಿಗನುಗುಣವಾಗಿರಬೇಕು. ತೆರಿಗೆಗಳ ರೂಪದಲ್ಲಿ ಅಧಿಕ ಭಾಗ ಕೊಡಬೇಕಾಗಿ ಬಂದಲ್ಲಿ ಅವರ ಮತ್ತು ಅವರ ಸಂಸಾರದ ಜೀವನ ನಡೆಸುವುದೇ ಕಷ್ಟವಾಗುತ್ತದೆ. ತೆರಿಗೆ ಮಿತವಾಗಿಯೂ ನಿರ್ದಿಷ್ಟವಾಗಿಯೂ ಇದ್ದರೆ ಹೆಚ್ಚಿಗೆ ಉತ್ಪಾದನೆ ಮಾಡಲು ಉತ್ತೇಜನ ಸಿಗುತ್ತದೆ.

ಪ್ರಜೆಗಳ ಮೇಲೆ ಭಾರತದ ಕೇಂದ್ರ ಸರ್ಕಾರ ಮತ್ತು ಸ್ಥಳೀಯ ಸಂಸ್ಥೆಗಳು ಪ್ರತಿ ವರ್ಷವೂ ಹೊಸ ತೆರಿಗೆಗಳನ್ನು ವಿಧಿಸುವುದು ಸಂಪ್ರದಾಯವಾಗಿದೆ. 1. ಸಂಪತ್ತು ತೆರಿಗೆ, 2. ವೆಚ್ಚದ ತೆರಿಗೆ 3. ಧಾನ್ಯದ ಮೇಲಿನ ತೆರಿಗೆ-ಇವು ಬೇರೆ ದೇಶಗಳಲ್ಲಿರುವುದಿಲ್ಲ. ವರಮಾನದ ತೆರಿಗೆಯ ದರವು ಪ್ರತಿವರ್ಷ ಹೆಚ್ಚುತ್ತಲೇ ಇದೆ. ತೆರಿಗೆಗಳ ಮೇಲೆ ತೆರಿಗೆ ಹಾಕುತ್ತಿದ್ದಾರೆ. ವರಮಾನದ ತೆರಿಗೆ ಮೇಲೆ ಮೂರು ತರದ ವಿಶೇಷ ತೆರಿಗೆಗಳು ಹಾಕಲ್ಪಟ್ಟಿವೆ. ಅಧಿಕಾರಿಗಳು ವಿಧಿಸಿದ ಮೊತ್ತವನ್ನು ಮುಂಗಡವಾಗಿ ಕೊಡಲೇಬೇಕು. ಸರಕು ಸಾಮಗ್ರಿಗಳ ಮೇಲೆ ಹಾಕಿರುವ ಅಪ್ರತ್ಯಕ್ಷ ತೆರಿಗೆಗಳು ಪ್ರತಿ ವರ್ಷವೂ ಹೆಚ್ಚಿಗೆಯಾಗುತ್ತಿವೆ. ಮೈಸೂರು ಸರ್ಕಾರವು ಕೇಂದ್ರ ಸರ್ಕಾರದ ಉದಾಹರಣೆಯನ್ನು ಅನುಸರಿಸಿ ಅಧಿಕ ತೆರಿಗೆಗಳನ್ನು ಹಾಕುತ್ತಿದೆ. ಭೂಕಂದಾಯದ ಮೇಲೆ ಅಧಿಕವಾಗಿ ಸರ್ ಚಾರ್ಜು ಹಾಕಿರುವುದರಿಂದ ರೈತನು ಎರಡರಷ್ಟು ಜಾಸ್ತಿ ಪ್ರಮಾಣದಲ್ಲಿ ಕಂದಾಯ ಕೊಡಬೇಕಾಗಿದೆ. ಬೆಟರ್‌ಮೆಂಟ್ ಲೆವಿಯ ರೂಪವಾಗಿ ಪ್ರತಿವರ್ಷವೂ ಎಕರೆ ಒಂದಕ್ಕೆ ಎಂಬತ್ತರಿಂದ ಒಂದು ನೂರು ರೂಪಾಯಿಗಳವರೆಗೆ ತೆರಿಗೆ ಕೊಡಬೇಕು. ವ್ಯವಸಾಯ ಉತ್ಪನ್ನದ ಮೇಲೆ ತೆರಿಗೆ ಕೊಡಬೇಕು. ಈಗ ಕಟ್ಟಡಗಳ ಮೇಲೆ ಒಂದು ನವೀನ ತರವಾದ ತೆರಿಗೆಯನ್ನು ಹಾಕಲು ಉದ್ದೇಶಪಟ್ಟಿದ್ದಾರೆ. ಮನೆಗಳನ್ನು ಯಾವ ಕಾಲದಲ್ಲಿಯೇ ಕಟ್ಟಿರಲಿ, ಈಗ ಪ್ರತಿ ಚದುರ ಅಡಿಗೂ 10 ರಿಂದ 25 ಪೈಸೆದವರೆಗೆ ತೆರಿಗೆಯನ್ನು ಕೊಡಬೇಕು. ಆದರೆ ಈ ತೆರಿಗೆ ಹಾಕುವುದು ಅಕ್ರಮ ಮತ್ತು ನ್ಯಾಯವಾದದ್ದು ಅಲ್ಲವೆಂದು ಮೈಸೂರು ಹೈಕೋರ್ಟಿನವರು ತೀರ್ಮಾನಿಸಿದರು. ಸ್ಥಳೀಯ ಸರ್ಕಾರಗಳು ಈ ಉದಾಹರಣೆಯನ್ನನುಸರಿಸಿ ತಮ್ಮ ಖರ್ಚು ನಿರ್ವಹಣೆಗೆ ತೆರಿಗೆ, ಶುಲ್ಕಗಳನ್ನು ಹಾಕುತ್ತಿದ್ದಾರೆ. ಅಂತು ಹಿಂದೆ ಎಂದೂ ಇಲ್ಲದ ತೆರಿಗೆಯ ಹೊರೆಯನ್ನು ಭಾರತದ ಪ್ರತಿಯೊಬ್ಬ ಪ್ರಜೆಯೂ ಹೊರಬೇಕಾಗುತ್ತದೆ.

## ಸಾರ್ವಜನಿಕ ಸಾಲ

ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಪ್ರತಿ ವರುಷವೂ ಸಾರ್ವಜನಿಕರಿಂದಲೂ, ಪರದೇಶಗಳಿಂದಲೂ, ಸಾಲವನ್ನು ತೆಗೆದುಕೊಳ್ಳುವುದು ಸಂಪ್ರದಾಯವಾಗಿದೆ. ಯಾವ ಸರ್ಕಾರವೇ ಆಗಲಿ ಆಗಿಂದ್ದಾಗ್ಗೆ ಸಾಲವನ್ನು ತೆಗೆದುಕೊಳ್ಳುವುದುಂಟು. ಆದರೆ ಅದಕ್ಕೆ ಕೆಲವು ನಿಯಮ, ನಿಭಂದನೆಗಳನ್ನು ಅನುಸರಿಸಬೇಕು. ಸಾಧಾರಣವಾಗಿ ಸರ್ಕಾರದವರು ಈ ಕೆಳಕಂಡ ಸಂದರ್ಭಗಳಲ್ಲಿ ಸಾಲವನ್ನು ಪಡೆಯಬಹುದು.

1. ಯಾವುದಾದರೂ ಒಂದು ವರ್ಷ ಆದಾಯಕ್ಕಿಂತಲೂ ಖರ್ಚು ಅನಿರೀಕ್ಷಿತವಾಗಿ ಜಾಸ್ತಿಯಾದರೆ, ಆಯವ್ಯಯ ಸಮತೂಗಿಸಲು ಮತ್ತು ಹೊಸ ತೆರಿಗೆಗಳನ್ನು ತಪ್ಪಿಸಲು ಸಾಲವನ್ನು ತೆಗೆದುಕೊಂಡು, ಆಯವ್ಯಯ ಸಮಮಾಡುತ್ತಾರೆ.

2. ದೇಶಕ್ಕೆ ಉತ್ಕಟ ಅಥವಾ ಅಪಾಯ ಸ್ಥಿತಿ ಬಂದಾಗ ಈ ಪರಿಸ್ಥಿತಿಯನ್ನು ಎದುರಿಸಲು ಸಾಲ ತೆಗೆದುಕೊಳ್ಳುತ್ತಾರೆ.

3. ಉತ್ಪಾದನಕರವಾದ ಮತ್ತು ಲಾಭದಾಯಕವಾದ ಅಭಿವೃದ್ಧಿ ಕೆಲಸಗಳನ್ನು ಕೈಗಾರಿಕೆಗಳನ್ನು ಕೈಗೊಳ್ಳಲು ಸಾಲ ಮಾಡಬೇಕಾಗುತ್ತದೆ. ರೈಲ್ವೆ ಬೀಳಾವಣೆ, ಹೊಸ ಜಲಾಶಯ ಕಾಮಗಾರಿ, ವಿದ್ಯುಚ್ಛಕ್ತಿ ಕೇಂದ್ರ ನಿರ್ಮಾಣ ಇಂತಹುದಕ್ಕೆ ಸಾಲವನ್ನು ಪಡೆಯುತ್ತಾರೆ. ಈ ಸಾಲಗಳ ಹಣದಿಂದ ಹೊಸದಾಗಿ ಆಸ್ತಿಯು ಕಟ್ಟಲ್ಪಡುತ್ತೆ ಮತ್ತು ಇವುಗಳಿಂದ ಬರಲಿರುವ ವರಮಾನದಿಂದ ಕ್ರಮೇಣ ಸಾಲವನ್ನು ತೀರುವಳಿ ಮಾಡಲು ಅನುಕೂಲವಿರುತ್ತೆ.

ಸರ್ಕಾರವು ಸಾಮಾನ್ಯ ಖರ್ಚಿಗಾಗಿಯೂ, ವಿದ್ಯಾಭ್ಯಾಸ, ವೈದ್ಯಸೌಕರ್ಯ, ಸಿಬ್ಬಂಧಿಯ ಸಂಬಳ ಇವುಗಳ ಖರ್ಚಿಗಾಗಿಯೂ ಸಾಲವನ್ನು ಮಾಡಿದರೆ ದೇಶದ ಆರ್ಥಿಕ ಪರಿಸ್ಥಿತಿ ಶೋಚನೀಯವಾಗುತ್ತದೆ.

Public debt is a means of securing money for unusual demand or for demand of an unusual amount. But public debt used for ordinary purposes will lead to serious financial difficulties. Productive debts must be fully covered by assets of equal of greater values. For example: Railways, Irrigation, Electricity works. The practice of raising funds both for productive and improcductive works by loan, has grown so much that vast debts have become a prominent features of public finances. Borrowing should be limited to capital expendfiture and must be met out of normal Revenue.

ಈ ಸಂದರ್ಭದಲ್ಲಿ 1951 ರಿಂದ 1965 ರವರೆಗೆ ನಡೆದ ಮೂರು ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಭಾರತ ಸಂಸ್ಥಾನಗಳ ಸಾಲ 445 ಕೋಟಿಯಿಂದ 5381 ಕೋಟಿಗೆ ಏರಿದೆ ಎಂಬುದನ್ನು ಗಮನಿಸಬೇಕು. ಅಂದರೆ ಈ ಸಾಲ ಒಂದಕ್ಕೆ ಹನ್ನೆರಡರಷ್ಟು ಹೆಚ್ಚಾಗಿದೆ. ಈ ಸಾಲದ ಬಹುಭಾಗವು ಕೇಂದ್ರ ಸರ್ಕಾರದಿಂದ ಪಡೆದುದು. 1952ನೇ ಮಾರ್ಚಿ ಕೊನೆಯ ವೇಳೆಗೆ ಕೇಂದ್ರ ಸರ್ಕಾರದಿಂದ ಸಂಸ್ಥಾನಗಳು ಪಡೆದ ಸಾಲದ ಮೊತ್ತ 239 ಕೋಟಿ, 1966ನೇ ಮಾರ್ಚಿ ಕೊನೆಯ ವೇಳೆಗೆ ಇದು ಕ್ರಮಕ್ರಮವಾಗಿ 4094 ಕೋಟಿಗೆ ಏರಿದೆ. ಅಂದರೆ ಒಟ್ಟು ಸಾಲದ ಶೇಕಡ 76 ಭಾಗ ಕೇಂದ್ರದಿಂದ ಪಡೆದುದಾಗಿದೆ.

ತೆರಿಗೆಗಳು ಈಗಿನ ಜನಾಂಗದ ಮೇಲೆ ಹೊರೆಯಾದರೆ ಸಾಲಗಳು ಮುಂದಿನ ಜನಾಂಗದ ಮೇಲೆ ಭಾರವಾಗಿ ಅವರಿಗೆ ಬಹಳ ಕಷ್ಟಪರಿಸ್ಥಿತಿಯನ್ನುಂಟು ಮಾಡುತ್ತದೆ. ನಮ್ಮ ಕಾಲದ ದುಂದುವೆಚ್ಚಕ್ಕೆ ಮುಂದಿನ ಜನಾಂಗವು ಹೊಣೆಯಾಗುತ್ತದೆ.

ಸಾಲ ಜಾಸ್ತಿಯಾಗುವುದರಿಂದ ಸರ್ಕಾರವು ಬಡ್ಡಿಯ ರೂಪದಲ್ಲಿ ಕೊಡುವ ಹಣವೂ ಜಾಸ್ತಿಯಾಗುತ್ತದೆ. ಈ ಹಣವನ್ನು ದೇಶದ ಸಾಮಾನ್ಯ ವರಮಾನದಿಂದ ಕೊಡ-ಬೇಕಾಗಿರುವುದರಿಂದ ಪ್ರಜೆಗಳಿಗೆ ಸೌಕರ್ಯಗಳನ್ನು ಒದಗಿಸುವುದನ್ನು ಕಡಿಮೆ ಮಾಡಬೇಕಾಗುತ್ತೆ. ಇದರಿಂದ ತೆರಿಗೆಗಳನ್ನು ಹೆಚ್ಚಿಗೆ ಮಾಡುವುದು ಅನಿವಾರ್ಯವಾಗುತ್ತದೆ.

ಕೇಂದ್ರ ಸರ್ಕಾರವು ಇಂಡಿಯಾ ದೇಶದ ಪ್ರಜೆಗಳಿಂದ ಅಧಿಕವಾಗಿ ಸಾಲವನ್ನು ಪಡೆದಿರುವುದಲ್ಲದೆ, ಪರದೇಶಗಳಿಂದಲೂ ವಿಶೇಷ ಸಾಲವನ್ನು ಪಡೆದಿದೆ. ಅಮೇರಿಕಾ, ಇಂಗ್ಲೆಂಡ್, ಫ್ರಾನ್ಸ್, ಜೆಕೊಸ್ಲೋವೇಕಿಯಾ, ರಷ್ಯ, ಜಪಾನ್ ಮುಂತಾದ ದೇಶಗಳಿಂದ ಸಾಲವನ್ನು ತೆಗೆದುಕೊಂಡಿದೆ. ಪರದೇಶಗಳಿಗೆ ಕೊಡಬೇಕಾದ ಮೊತ್ತವು ಅನೇಕ ಸಾವಿರ ಕೋಟಿ ರೂಪಾಯಿಗಳವರೆಗೂ ಬರುತ್ತದೆ. ಇಂಡಿಯಾ ದೇಶದ ಒಳಗಿನ ಸಾಲವು ಆರು ಸಾವಿರ ಕೋಟಿಗಿಂತ ಜಾಸ್ತಿಯಾಗಿದೆ. ಬಡ್ಡಿಯ ರೂಪವಾಗಿ ಸುಮಾರು ನಾನೂರು ಕೋಟಿ ಪ್ರತಿ ವರುಷ ಕೊಡಬೇಕಾಗಿದೆ. ಈ ಮೊತ್ತವನ್ನೆಲ್ಲಾ ಉತ್ಪಾದನಾ ಕಾರ್ಯಗಳಿಗೆ ಉಪಯೋಗಿಸಿದೆಯೇ? ಭಾರತದಲ್ಲಿ ಮೂರು ದೊಡ್ಡ ಕಬ್ಬಿಣದ ಕಾರ್ಖಾನೆಗಳು (ಭಿಲಾಯ್, ರೋರ್ಕೆಲಾ, ದುರ್ಗಾಪುರ) ಸುಮಾರು ಒಂದು ಸಾವಿರ ಕೋಟಿ ರೂಪಾಯಿ ಖರ್ಚಿನಲ್ಲಿ ಸ್ಥಾಪಿಸಲ್ಪಟ್ಟಿವೆ. ಭಾಕ್ರಾನಂಗಲ್, ಹಿರಾಕುಡ್ ಮುಂತಾದ ದೊಡ್ಡ ಜಲಾಶಯಗಳೂ, ನಂಗಲ್ ಮತ್ತು ದುರ್ಗಾಪುರದ ಫರ್ಟಿಲೈಸರ್ ಫ್ಯಾಕ್ಟರಿಗಳೂ ಕಟ್ಟಲ್ಪಟ್ಟಿವೆ. ಸುಮಾರು ಎಂಟುನೂರು ಮೈಲಿಗಳವರೆಗೆ ರೈಲ್ವೆ ಬಡಾವಣೆಯಾಗಿದೆ. ಮೈಸೂರಿನಲ್ಲಿಯೂ ತುಂಗಭದ್ರಾ ಜಲಾಶಯ, ಭದ್ರಾಜಲಾಶಯ, ಶರಾವತಿ ವಿದ್ಯುಚ್ಛಕ್ತಿ ಕೇಂದ್ರ ಮುಂತಾದ ಯೋಜನೆಗಳು ನಡೆಯುತ್ತಾ ಇವೆ. ಭಾರತ್ ವಿಸ್ತರಣೆ, ಭದ್ರಾವತಿಯ ಉಕ್ಕಿನ ಕಾರ್ಖಾನೆಯ ಬಡಾವಣೆ ಮುಂತಾದ ಕೈಗಾರಿಕೆಗಳೂ ಕೇಂದ್ರದ ಆರ್ಥಿಕ ನೆರವಿನಿಂದ ಆಗಿವೆ. ಈ ಕೆಲಸಗಳಲ್ಲಿ ಕಾರ್ಯರೂಪಕ್ಕೆ ಬಂದಿರುವುದು ಶ್ಲಾಘನೀಯವಾದ್ದು. ಇವುಗಳ ಖರ್ಚುನ್ನೆಲ್ಲ ಸಾಲದ ಮೂಲಕವೇ ನಿರ್ವಹಿಸಿದ್ದಾರೆ.

ಆದರೆ ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ತೆಗೆದುಕೊಂಡಿರುವ ಸಾಲದ ಮೊತ್ತವೆಲ್ಲಾ ಇಂಥ ಉತ್ಪಾದನಾ ಕಾರ್ಯಗಳಿಗೇ ವಿನಿಯೊಗಿಸಿರುವುದಿಲ್ಲ. ಆದರಲ್ಲಿ ಬಹುಭಾಗ ಸಿಬ್ಬಂದಿ ಖರ್ಚಿಗಾಗಿಯೂ ಉತ್ಪಾದನೆ ಇಲ್ಲದೆ ಯೋಜನೆಗಳಿಗೂ ಖರ್ಚಾಗಿರುತ್ತೆ. ಇದುವರೆಗೆ ನಡೆದಿರುವ ಉತ್ಪಾದನಾ ಕೆಲಸಗಳಿಂದ ಸಾಲಗಳನ್ನು ಮೇಲಿನ ಬಡ್ಡಿಯೂ ಮತ್ತು ಸಾಲಗಳನ್ನು ತೀರುವಳಿ ಒದಗಿಸಬೇಕಾದಷ್ಟು ಹಣವೂ ವರಮಾನ ರೂಪದಲ್ಲಿ ಬರುತ್ತಿಲ್ಲ.

ಈಗ ಪ್ರಜೆಗಳು ಎದುರಿಸುತ್ತಿರುವ ಅತ್ಯಂತ ಘೋರವಾದ ಶತ್ರುವು ಬೆಲೆಗಳ ಏರಿಕೆ (inflation) ಯಾಗಿದೆ. ಇದರ ಕಾರಣವನ್ನು ಆಗಲೇ ತಿಳಿಸಿರುತ್ತೇನೆ. ಜನಗಳ ವರಮಾನ ಈಗ ಜಾಸ್ತಿಯಾಗಿರಬಹುದು. ಸಂಬಳ ಸಾರಿಗೆಗಳು ಹೆಚ್ಚಾಗಿವೆ. ಆದರೆ ಜನಗಳು ಸಾಮಾನುಗಳಿಗೆ ಕೊಡಬೇಕಾದ ಬೆಲೆ ಬಹಳ ಜಾಸ್ತಿಯಾಗಿರುತ್ತೆ, ಹಣದ ಬೆಲೆಯು ಕಡಿಮೆಯಾಗಿದೆ. ನಮ್ಮ ಸಂಪಾದನೆಯ ಬಹುಭಾಗ ತೆರಿಗೆಯ ರೂಪದಲ್ಲಿ ಹೋಗುತ್ತಿದೆ. ಉಳಿದ ಹಣದಲ್ಲಿ ನಮ್ಮ ಜೀವನಕ್ಕೆ ಎಷ್ಟು ಸಾಮಾನುಗಳು ದೊರೆಯಬೇಕೋ ಅಷ್ಟೂ ದೊರೆಯದೆ. ಬಡವರೂ ಮಧ್ಯಮ ತರಗತಿಯವರೂ, ರೈತರೂ ಬಹಳ ಕಷ್ಟಕ್ಕೆ ಈಡಾಗಿರುತ್ತಾರೆ.

1940-41 ನೇ ಸುಮಾರಿನಲ್ಲಿ ಒಂದು ರೂಪಾಯಿಗೆ 20 ಸೇರು ರಾಗಿ, 10 -12 ಸೇರು ಅಕ್ಕಿ 7-8ಸೇರು ಗೋಧಿ ಮಾರಲಾಗುತ್ತಿತ್ತು. ಒಂದು ಸೇರು ಸಕ್ಕರೆಗೆ 2-3 ಆಣೆ ಕೊಡುತ್ತಿದ್ದರು. 4 ಆಣೆಯಿಂದ 8 ಆಣೆಯೊಳಗೆ ಒಂದು ಗಜ ಬಟ್ಟೆ ಸಿಕ್ಕುತ್ತಿತ್ತು. ಪ್ರಜೆಗಳ ಜೀವನಕ್ಕೆ ಅವಶ್ಯಕವಾದ ಎಲ್ಲಾ ಸಾಮಗ್ರಿಗಳೂ ಬಹಳ ಕಡಿಮೆ ಬೆಲೆಗೆ ಸಿಕ್ಕುತ್ತಿದ್ದವು. ಆದರೆ ಈಗ ಅವುಗಳ ಬೆಲೆಯೂ ಒಂದಕ್ಕೆ 8 ರಿಂದ 10ರವರೆಗೆ ಏರಿದೆ. ಇದಕ್ಕೆ ತಕ್ಕಂತೆ ಜನಗಳ ಸಂಪಾದನೆಯು ಹೆಚ್ಚಿರುವುದಿಲ್ಲ ಈಗ ಯಾವನಾದರೊಬ್ಬನಿಗೆ 100 ರೂಪಾಯಿ ಸಂಬಳ ಬರುತ್ತಿದ್ದರೆ ಹಿಂದೆ 15 ರೂಪಾಯಿ ಸಂಬಳ ಬರುತ್ತಿದ್ದಾಗ ಅವನು ಎಷ್ಟು ನೆಮ್ಮದಿಯಿಂದ ಜೀವನ ಮಾಡುತ್ತಿದ್ದನೋ ಆ ರೀತಿ ಈಗ ಮಾಡಲಾಗುತ್ತಿಲ್ಲ.

ಈ ಬೆಲೆಯ ಏರಿಕೆಗೆ ಮತ್ತು ಸಾಮಾನಿನ ಅಭಾವಕ್ಕೆ ಹೆಚ್ಚಿನ ಜನಸಂಖ್ಯೆ ಕಾರಣವೆಂದು ಹೇಳುತ್ತಾರೆ. ಆದರೆ ಬೆಲೆಯ ಏರಿಕೆಗೆ ಮುಖ್ಯವಾದ ಕಾರಣ ಸರ್ಕಾರ ವಿಧಿಸಿರುವ ಪ್ರತ್ಯಕ್ಷ ಅಪ್ರತ್ಯಕ್ಷ ತೆರಿಗೆಗಳೂ, ಧಾನ್ಯ ಮತ್ತು ಆಹಾರ ಪದಾರ್ಥಗಳನ್ನು ಮಾರುವವರು ಲೈಸೆನ್ಸ್ ಫೀಜು ಮುಂತಾದವನ್ನು ಕೊಡಬೇಕಾಗುತ್ತದೆ. ಆಹಾರ ಪದಾರ್ಥಗಳ ಬೆಲೆಗಳ ಮೇಲೆ ಪ್ರತಿಬಿಂಬಿಸಿದೆ. ಈಗ ಅಕ್ಕಿ ಒಂದು ಕಿಲೋಗ್ರಾಮಿಗೆ ಒಂದು ರೂಪಾಯಿಯಾಗಿದೆ. ಕಾಳಸಂತೆಯಲ್ಲಿ ಇನ್ನೂ ಅಧಿಕವಾಗಿದೆ, ಬಡವರು ಉಪಯೋಗಿಸುವ ಜೋಳ, ರಾಗಿ ಒಂದು ರೂಪಾಯಿಗೆ ಒಂದೂವರೆ ಸೇರು ಸಿಕ್ಕುವುದೂ ಕಷ್ಟವಾಗಿದೆ. ಸರ್ಕಾರದವರು ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಸಾವಿರಾರು ಕೋಟಿ ರೂಪಾಯಿಗಳನ್ನು ಖರ್ಚುಮಾಡುತ್ತಿರಬಹುದು. ದೊಡ್ಡ ದೊಡ್ಡ ಜಲಾಶಯಗಳನ್ನೂ ಕಾರ್ಖಾನೆಗಳನ್ನೂ, ನಿರ್ಮಾಣ ಮಾಡುತ್ತಿರಬಹುದು. ಯಾವುದಕ್ಕೂ ವಿವೇಕವಾದ ವಿತರಣೆ ಬೇಕು. ಆದರೆ ಸರ್ಕಾರದ ಒಟ್ಟಿನ ಆರ್ಥಿಕ ನೀತಿಯ ಪರಿಣಾಮವಾಗಿ ಬಡವರು ಮತ್ತು ರೈತರು ಬಹಳ ಕಷ್ಟಪರಿಸ್ಥಿತಿಯಲ್ಲಿ ಸಿಕ್ಕಿದ್ದಾರೆ ಅವರಿಗೆ ನೆಮ್ಮದಿ, ಸುಖ, ಶಾಂತಿಗಳು ಇಲ್ಲವಾಗಿವೆ. ಭವಿಷ್ಯವೂ ಆಶಾದಾಯಕವಾಗಿಲ್ಲ.

ಕಾಂಗ್ರೆಸ್ ಸರ್ಕಾರವು ಈಗ ಸಂಪೂರ್ಣ ಸಮಾಜವಾದವನ್ನೊಪ್ಪಿದೆ. ಸಮಾಜವಾದ ಸರ್ಕಾರದಲ್ಲಿ, ಸರ್ಕಾರದ ಹತೋಟಿ, ಆಜ್ಞೆಗಳು ಜಾಸ್ತಿ. ನಿರ್ಬಂಧಗಳು ಜಾಸ್ತಿಯಾದ ಹಾಗೆಲ್ಲಾ ಆ ಭಾರವೂ ಹೆಚ್ಚುತ್ತದೆ. ಅದರ ಜೊತೆಯಲ್ಲಿ ಬೆಲೆಗಳು ಏರುತ್ತವೆ.

## ಪಂಚವಾರ್ಷಿಕ ಯೋಜನೆಗಳು

ಪಂಚವಾರ್ಷಿಕ ಯೋಜನೆಗಳಲ್ಲಿ ಹಲವು ಅಭಿವೃದ್ಧಿ ಕಾರ್ಯಗಳಾಗಿವೆ. ಹಿಂದೆ ಪ್ರಾರಂಭಿಸಿದ್ದ ನೀರಾವರಿ ಕಾಮಗಾರಿಗಳು ಮುಂದುವರಿದು ಪೂರೈಸಲ್ಪಟ್ಟವು. ತುಂಗಾ ಅಣೆಕಟ್ಟನ್ನು ಪೂರ್ತಿಮಾಡಿ, ಭದ್ರಾಜಲಾಶಯದ ಕಾಮಗಾರಿಯನ್ನು ಪ್ರಾರಂಭ ಮಾಡಲಾಯಿತು. ಸಿದ್ದವಾಗಿದ್ದ (ಜೋಗ) ಮಹಾತ್ಮಾಗಾಂಧಿ ವಿದ್ಯುತ್ ಕೇಂದ್ರದಿಂದ ಗ್ರಾಮಾಂತರಗಳಿಗೆ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡುವ ಕಾರ್ಯ ಪ್ರಾರಂಭವಾಯಿತು. ಸಾಬೂನು ಕಾರ್ಖಾನೆ, ಕಬ್ಬಿಣದ ಕಾರ್ಖಾನೆ ಮತ್ತು ಪಿಂಗಾಣಿ ಕಾರ್ಖಾನೆಗಳನ್ನು ವಿಸ್ತರಿಸಲಾಯಿತು. ಮುಖ್ಯವಾದ ರಸ್ತೆಗಳನ್ನು ರಾಜಮಾರ್ಗಗಳನ್ನು ದುರಸ್ತು ಮಾಡಿ ಉತ್ತಮ ಸ್ಥಿತಿಗೆ ತರಲಾಯಿತು. ಹೈಸ್ಕೂಲುಗಳ, ಕಾಲೇಜುಗಳ ಸಂಖ್ಯೆಯು ಹೆಚ್ಚಿತು. ಕ್ರಮೇಣ ಪ್ರತಿಯೊಂದು ಡಿಸ್ಟ್ರಿಕ್ಟನಲ್ಲಿಯೂ ಒಂದನೇ ದರ್ಜೆಯ

ಕಾಲೇಜನ್ನು ಸ್ಥಾಪಿಸಲಾಯಿತು. ವೃತ್ತಿ ಶಿಕ್ಷಣ ಶಾಲೆಗಳ ಸಂಖ್ಯೆಯೂ ಹೆಚ್ಚಾಯಿತು. ಹೆಚ್ಚಿಗೆ ಇಂಜನಿಯರಿಂಗ್ ಮತ್ತು ಮೆಡಿಕಲ್ ಕಾಲೇಜುಗಳನ್ನು ತೆರೆಯಲಾಯಿತು. ವೈದ್ಯಸೌಕರ್ಯಗಳು ಜಾಸ್ತಿಯಾದವು. ಆರೋಗ್ಯ ಇಲಾಖೆಯವರು ಡಿ.ಡಿ.ಟಿ. ಮೂಲಕ ಮಲೇರಿಯ ಮತ್ತು ಪ್ಲೇಗು ಜಾಡ್ಯಗಳನ್ನು ನಿರ್ಮೂಲ ಮಾಡಲು ಕಾರ್ಯಕ್ರಮ ಪ್ರಾರಂಭಿಸಿದರು ದೊಡ್ಡ ಗ್ರಾಮಗಳಿಗೆ ಕುಡಿಯುವ ನೀರಿನ ಸೌಕರ್ಯವನ್ನು ಹೆಚ್ಚಿಸಿದರು. ಅಂಚೆಯ ಸೌಕರ್ಯ ಜಾಸ್ತಿಯಾಯಿತು. ಈ ಮೇಲೆ ಹೇಳಿದ ಅಭಿವೃದ್ಧಿ ಕಾರ್ಯಗಳು ಮೂರು ಪಂಚವಾರ್ಷಿಕ ಯೋಜನೆಗಳಲ್ಲಿ ನಡೆದವು.

ದೇಶದ ಅಭಿವೃದ್ಧಿಗೆ ಪಂಚವಾರ್ಷಿಕ ಯೋಜನೆಗಳನ್ನು ರಚಿಸುವುದೇನೋ ಒಳ್ಳೆಯ ನೀತಿ. ಅದರಲ್ಲಿ ನನಗೆ ನಂಬಿಕೆ ಇದೆ ನಾನು ಚಿತ್ರದುರ್ಗ ಡಿಸ್ಟ್ರಿಕ್ಟ ಬೋರ್ಡ್ ಅಧ್ಯಕ್ಷನಾಗಿದ್ದಾಗ ಚಿತ್ರದುರ್ಗ ಜಿಲ್ಲೆಯಲ್ಲಿ ಹೊಸದಾಗಿ ರಸ್ತೆ ಸೇತುವೆ ಮತ್ತು ಬಾವಿಗಳನ್ನು ಮಾಡಲು ಒಂದು ಪಂಚವಾರ್ಷಿಕ ಯೋಜನೆಯನ್ನು ರಚಿಸಿ ಅದನ್ನು ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದು, ಆರು ದೊಡ್ಡ ಸೇತುವೆಗಳನ್ನೂ 250 ಮೈಲಿ ರಸ್ತೆಯನ್ನೂ 300 ಕುಡಿಯುವ ನೀರಿನ ಬಾವಿಗಳನ್ನೂ ನಿರ್ಮಿಸಲಾಯಿತು. ಯೋಜನೆಗಳನ್ನು ಅನುಸರಿಸುವುದಕ್ಕಿಂತ ಮುಂಚೆ ಕೆಲವು ನಿಯಮಗಳಿಗೆ ಬದ್ಧರಾಗಿರಬೇಕು. ಯೋಜನೆಯಲ್ಲಿ ಅಡಕವಾಗಿರುವ ಕಾಮಗಾರಿಗಳನ್ನು ಪೂರೈಸಲು ಸಾಕಾದಷ್ಟು ದ್ರವ್ಯವಿದೆಯೇ ಅಥವಾ ಇಲ್ಲವೇ ಎಂಬುದನ್ನು ನೋಡಿಕೊಳ್ಳಬೇಕು ಅಭಿವೃದ್ಧಿ ಕಾರ್ಯಗಳು ಶಾಶ್ವತವಾಗಿರಬೇಕು. ಭಾವನಾತ್ಮಕ ಕಾರ್ಯಗಳಿಗೆ ವಿಶೇಷ ಖರ್ಚು ಮಾಡಬಾರದು. ಯೋಜನೆಗಳ ಹೆಸರಿನಲ್ಲಿ ವಿಶೇಷ ಸಿಬ್ಬಂದಿಯನ್ನು ನೇಮಿಸಿ, ಅದಕ್ಕೆ ಹಣಖರ್ಚು ಮಾಡಬಾರದು. ಅದೆಲ್ಲಕ್ಕಿಂತಲೂ ಮುಖ್ಯವಾದುದೆಂದರೆ, ರೈತರ ಮತ್ತು ಪ್ರಜೆಗಳ ಮೇಲೆ ವಿಶೇಷ ತೆರಿಗೆಗಳನ್ನು ವಿಧಿಸದಂತೆ ನೋಡಿಕೊಳ್ಳಬೇಕು. ಅಧಿಕ ಖರ್ಚು, ಅಧಿಕ ಸಾಲಗಳು, ಅಧಿಕ ತೆರಿಗೆಗಳು-ಇವು ಯಾವಾಗಲೂ ಹಣದುಬ್ಬರಕ್ಕೆ ಮೂಲ ಕಾರಣವಾಗುತ್ತವೆ. ಬಹು ಜನರಿಗೆ ಅತ್ಯಾವಶ್ಯಕವಾದ ಸರಕುಗಳ ಬೆಲೆ ಮಿತಿಮೀರದ ಹಾಗೆ ನೋಡಿಕೊಳ್ಳಬೇಕು. ಸರ್ಕಾರದವರು'ಬರೀ ಕೈಲಿ ಮೊಳ ಹಾಕಿದರು.' ಎಂಬ ಗಾದೆಗೆ ಅನುಸಾರವಾಗಿ ಸಾಕಾದಷ್ಟು ಹಣದ ಬೆಂಬಲವಿಲ್ಲದೆ ಯೋಜನೆಗಳನ್ನು ತಾಯರಿಸಿ ಕಾರ್ಯಗತ ಮಾಡಿದುದರ ಪರಿಣಾಮವಾಗಿ ಅಧಿಕ ಸಾಲವನ್ನು ಮಾಡಬೇಕಾಗಿ ಬಂದುದಲ್ಲದೆ, ಅಧಿಕ ತೆರಿಗೆಗಳನ್ನು ವಿಧಿಸಬೇಕಾಗಿಬಂತು. ಇದರೊಂದಿಗೆ ಭ್ರಷ್ಟಾಚಾರವೂ ನಡೆಯುತ್ತಾ ಬಂತು.

ಪಂಚವಾರ್ಷಿಕ ಯೋಜನೆಯ ಹೆಸರಿನಲ್ಲಿ ಹಣವು ಹೇಗೆ ವ್ಯರ್ಥವಾಗುತ್ತಿದೆ. ಎಂಬುದನ್ನು 2-3 ದೃಷ್ಟಾಂತಗಳನ್ನು ಕೊಡುವುದು ಅವಶ್ಯಕವಾಗಿದೆ. ರಾಷ್ಟ್ರೀಯ ವಿಸ್ತರಣಾ ಯೋಜನೆಯು ಪಂಚವಾರ್ಷಿಕ ಯೋಜನೆಯಲ್ಲೊಂದು ಮುಖ್ಯಅಂಗವಾಗಿದೆ. ದೇಶದಲ್ಲಿ ರೈತರಿಗೆ ಅತ್ಯಾವಶ್ಯಕವಾದ ಸೌಕರ್ಯಗಳನ್ನು ಒದಗಿಸುವ ಸದುದ್ದೇಶದಿಂದ ಈ ಕಾರ್ಯಕ್ರಮವನ್ನು ಕೈಗೊಳ್ಳಲಾಗಿದೆ. ಇದು ಇಂಡಿಯಾ ದೇಶದಲ್ಲೆಲ್ಲಾ ವಿಸ್ತರಣಾ ಕೇಂದ್ರಗಳು (N.E.S) ಸ್ಥಾಪಿಸಲ್ಪಟ್ಟಿವೆ. ಒಂದೊಂದು ಕ್ಷೇತ್ರಕ್ಕೆ ಒಂದು ವರ್ಷಕ್ಕೆ ಸುಮಾರು 50,000 ರೂಪಾಯಿಗಳು ಸಿಬ್ಬಂದಿಗಾಗಿ ಖರ್ಚಾಗುತ್ತಿದೆ. ಅದರ ಮುಖ್ಯ ಕೆಲಸಗಳೆಂದರೆ ಜೀಪಿನಲ್ಲಿ ಹಳ್ಳಿ ಹಳ್ಳಿಗೂ ಸಂಚಾರ ಮಾಡಿ ನಾಟಕಗಳನ್ನು ಆಡಿಸಿ ನೋಡುವುದು, ಹಳ್ಳಿಯವರಿಗೆ ಸಾಲವನ್ನು ಕೊಡಿಸುವುದು,ಇನ್ನೇನಾದರೂ ಬುದ್ಧಿವಾದ ಹೇಳುವುದು, ಹೆಂಗಸರಿಗೆ ಕಸೂತಿ ಹಾಕುವ ಮತ್ತು

ಬಲೆಗಳನ್ನು ಹಾಕುವ ಕೆಲಸಗಳನ್ನು ಕಲಿಸುವುದು. ಗೊಬ್ಬರದ ಗುಂಡಿಗಳನ್ನು ತೋಡಿಸುವುದು, ಸಪ್ತಾಹಗಳು, ಸಂಸ್ಕೃತಿ ಪ್ರಚಾರ, ಉದ್ಘಾಟನೆಗಳನ್ನು ಏರ್ಪಡಿಸುವುದು, ಇಷ್ಟೇ ಮುಖ್ಯ ಸೌಕರ್ಯಗಳಾದ ವಿದ್ಯಾಭ್ಯಾಸ, ವೈದ್ಯ ಸಾರಿಗೆ ಇವುಗಳಿಗೆ ಬಹು ಸ್ವಲ್ಪಭಾಗ ಹಣ ಖರ್ಚಾಗುತ್ತದೆ. ಅಂತು ವಿಶಾಲಮೈಸೂರಿನಲ್ಲಿರುವ 200 ಕೇಂದ್ರಗಳಿಗೆ 5 ವರ್ಷಕ್ಕೆ ಹತ್ತು ಕೋಟಿ ರೂಪಾಯಿಗಳಿಗಿಂತಲೂ ಹೆಚ್ಚು ಖರ್ಚಾಗುತ್ತಿದೆ. ಖಾದಿ ಅಭಿವೃದ್ಧಿಗಾಗಿ ವರ್ಷಕ್ಕೆ ಸುಮಾರು ಹತ್ತು ಕೋಟಿ ರೂಪಾಯಿಗಳಿಂತಲೂ ಹೆಚ್ಚು ಖರ್ಚಾಗುತ್ತದೆ. ಖಾದಿ ಬಟ್ಟೆಗೆಂದು ವರ್ಷಕ್ಕೆ ಸುಮಾರು ಹತ್ತು ಕೋಟಿ ರೂಪಾಯಿಗಳನ್ನು ಇಂಡಿಯಾ ದೇಶದಲ್ಲಿ ಖರ್ಚುಮಾಡುತ್ತಾರೆ. ಅದರಲ್ಲಿ ಬಹುಭಾಗ ಹಣ ದುರುಪಯೋಗವಾಗುತ್ತಿದೆ. 20 ಕೋಟಿ ರೂಪಾಯಿಗಳಿಗೆ ಲೆಕ್ಕವೇ ಇಲ್ಲವೆಂದು ವರದಿಯಾಗಿದೆ.

ವಿದ್ಯಾಭ್ಯಾಸದ ಕ್ರಮವನ್ನು ಬದಲಾಯಿಸಿ ಅದನ್ನು ಹೆಚ್ಚು ಪ್ರಯೋಜನವಾಗುವ ರೀತಿಯಲ್ಲಿ ಮಾರ್ಪಾಡು ಮಾಡಬೇಕೆಂದು ಶ್ರೀ ಹನುಮಂತಯ್ಯನವರ ಸರ್ಕಾರವು ಒಂದು ದೊಡ್ಡ ಸಮಿತಿಯನ್ನು ನೇಮಿಸಿತು. ಈ ಸಮತಿಯ ಕಾರ್ಯಕಲಾಪಗಳನ್ನು ಮೈಸೂರಿನ ಕ್ರಾಫರ್ಡ್‌ಭವನದಲ್ಲಿ ಬಹಳ ವಿಜೃಂಭಣೆಯಿಂದ ಉದ್ಘಾಟಿಸಲಾಯಿತು. ಈ ಸಮಿತಿಯಲ್ಲಿ ನಾನು ಒಬ್ಬ ಸದಸ್ಯನಾಗಿದ್ದೆ 5-6 ತಿಂಗಳು ಕೆಲಸ ಮಾಡಿದ ನಂತರ ಈ ಸಮಿತಿಯು ಒಂದು ವರದಿಯನ್ನೊಪ್ಪಿಸಿತು. ಪ್ರೈಮರಿ ಸ್ಕೂಲುಗಳಲ್ಲಿಯೇ ವೃತ್ತಿ ಶಿಕ್ಷಣ ಕೊಡುವ ಏರ್ಪಾಡು ಮಾಡಬೇಕೆಂದು ಈ ಸಮಿತಿಯು ಸಲಹೆ ನೀಡಿತು " Earn while you learn " ಕಲಿಯುವಾಗ ಸಂಪಾದಿಸು ಎಂಬ ತತ್ವವನ್ನು ಸೂಚಿಸಿತು. ಇದನ್ನು ಸರ್ಕಾರದವರು ಒಪ್ಪಿ ಪ್ರತಿಯೊಂದು ಶಾಲೆಗೂ ವ್ಯವಸಾಯಕ್ಕೆ ಅನುಕೂಲವಾದ ಜಮೀನನ್ನು ಒದಗಿಸಲು ತೀರ್ಮಾನಿಸಿದರು. ಆದರೆ ಜಮೀನು ಎಲ್ಲಿಂದ ಬರಬೇಕು? ಮುಖ್ಯ ಮಂತ್ರಿಗಳು, ಭೂದಾನಯಾತ್ರೆ ಹೊರಟರು. ಒಂದು ತಿಂಗಳು ಸತತವಾಗಿ ಸಂಚರಿಸಿ ಬಹಳ ಜಮೀನುಗಳನ್ನು ವಾಗ್ದಾನಗಳ ಮೂಲಕ ಸಂಗ್ರಹಿಸಿದರು. ಆದರೆ ಭೂದಾನವಾಗಿ ಕೊಡಲ್ಪಟ್ಟ ಜಮೀನುಗಳು ಬಹುಭಾಗ ಸಾಗುವಳಿಗೆ ಯೋಗ್ಯವಾಗಿರಲಿಲ್ಲ. ಕೆಲವರು ಕಂದಾಯ ಕೊಡುವುದನ್ನು ತಪ್ಪಿಸಿಕೊಳ್ಳಲು ಉಪಯೋಗವಿಲ್ಲದ ಜಮೀನುಗಳನ್ನು ದಾನವಾಗಿ ಕೊಟ್ಟಿದ್ದರು. ವೃತ್ತಿ ಶಿಕ್ಷಣವನ್ನು ಕೊಡಲು ಸರಿಯಾದ ಬೋಧಕರು ಇಲ್ಲವಾದ್ದರಿಂದ ಈ ಸದುದ್ದೇಶವೂ ಫಲಕಾರಿಯಾಗಲಿಲ್ಲ. ಭೂದಾನದ ಪ್ರದೇಶವು ಭೂದಾನದಲ್ಲಿಯೇ ಪರಿಸಮಾಪ್ತಿಯಾಯಿತು.

ಶ್ರೀ ಹನುಮಂತಯ್ಯನವರು ಸರ್ವೋದಯ ದಿನವಾದ ಜನವರಿ 30 ರಂದು ಶಾಲೆಗಳು ವರ್ಷವೂ ಪ್ರಾರಂಭವಾಗಬೇಕೆಂದೂ, ಶಾಲೆಯ ಹುಡುಗರಿಗೆ ಸುಗ್ಗಿಯ ಕಾಲದಲ್ಲಿ ರಜೆವನ್ನು ಕೊಡಬೇಕೆಂದೂ ಆಜ್ಞೆ ಮಾಡಿದರು. ಆದರೆ ಈ ಯೋಜನೆಯು ಯಶಸ್ವಿಯಾಗಲಿಲ್ಲ. ಸಮಿತಿಯ ವರದಿಯು ಈಗ ಪುಸ್ತಕ ಭಂಡಾರಕ್ಕೆ ಸೇರಿದೆ. ಸಂಸ್ಕತಿ ಪ್ರಚಾರ, ವನಮಹೋತ್ಸವ, ಕುಟುಂಬ ಕಲ್ಯಾಣ, ಹೆಚ್ಚು ಸಿಬ್ಬಂದಿ ಇವಕ್ಕೆ ಬಹಳ ಹಣ ವ್ಯಯವಾಗುತ್ತಿದೆ.

ಶ್ರೀ ಹನುಮಂತಯ್ಯನವರ ಕಾಲದಲ್ಲಿ ಆದ ಮುಖ್ಯ ಕಾರ್ಯವೆಂದರೆ ಚಿನ್ನದ ಗಣಿಗಳ ರಾಷ್ಟ್ರೀಕರಣ. ಶ್ರೀ ದಾಸಪ್ಪನವರ ಕಾಲದಲ್ಲಿ ಕೋಲಾರದ ಚಿನ್ನದ ಗಣಿಗಳ ಮೇಲೆ ವಿಧಿಸಲಾಗಿದ್ದ ಸುಂಕವನ್ನು ವಜಾ ಮಾಡಿದ ವಿಷಯವನ್ನು ಈ ಹಿಂದೆಯೇ ವಿವರಿಸಿರುತ್ತೆ. ಶ್ರೀ ದಾಸಪ್ಪನವರು ಹೊಸ ಒಪ್ಪಂದದಿಂದ ಹೆಚ್ಚಿಗೆ ಆದಾಯ ಸರ್ಕಾರಕ್ಕೆ ಸಲ್ಲುತ್ತದೆಂದು ಕೊಟ್ಟ ಭರವಸೆಯು

ಈಡೇರಲಿಲ್ಲ. ಚಿನ್ನದಗಣಿಯ ಮಾಲೀಕರು ಖರ್ಚು ಜಾಸ್ತಿ ಮಾಡಿದರು. ರಾಜ್ಯಕ್ಕೆ ಬರುತ್ತಿದ್ದ ಆದಾಯವೆಲ್ಲಾ ಮಾಯವಾಯಿತು. ಬೆಲೆಯುಳ್ಳ ಅದಿರನ್ನು ಉಪಯೋಗಿಸಿ ಗಣಿಗಳನ್ನು ನಿಷ್ಪ್ರಯೋಜನ ಮಾಡುತ್ತಿದ್ದರು. ಹೊಸದಾಗಿ ಬಂಗಾರದ ರೇಖೆಗಳನ್ನು ಕಂಡುಹಿಡಿಯಲು ಹೆಚ್ಚಿಗೆ ಖರ್ಚು ಮಾಡುತ್ತಿರಲಿಲ್ಲ. ಕೆಲವು ವರ್ಷಗಳಿಲ್ಲಿಯೇ ಗಣಿ ಮುಕ್ತಾಯ ಮಾಡುವ ಸಂಭವ ಬರಬಹುದೆಂಬ ಸಂಶಯ ಮೂಡಿತು.

ಒಂದುದಿವಸ ಶ್ರೀ ಹನುಮಂತಯ್ಯನವರು ಈ ವಿಷಯವನ್ನು ನನ್ನಲ್ಲಿ ಪ್ರಸ್ತಾಪಿಸಿದರು. ಇದನ್ನು ಕೂಲಂಕುಷವಾಗಿ ಪರಿಶೀಲಿಸಲು ಒಂದು ಸಮಿತಿಯನ್ನು ಏರ್ಪಡಿಸಬೇಕೆಂದು ನಾವಿಬ್ಬರೂ ತೀರ್ಮಾನಿಸಿದೆವು. ಈ ಸಮಿತಿಯು ಶ್ರೀ ಸಿದ್ದವಿರಪ್ಪನವರ ಅಧ್ಯಕ್ಷತೆಯಲ್ಲಿ ಸೇರಿ ಎಲ್ಲಾ ಅಂಶಗಳನ್ನೂ ಪರಿಶೀಲಿಸಿ, ಕೋಲಾರದ ಚಿನ್ನದ ಗಣಿಗಳನ್ನು ರಾಷ್ಟ್ರೀಕರಣ ಮಾಡಿ, ಮೈಸೂರು ಸರ್ಕಾರಕ್ಕೆ ಸೇರಿಸಿಕೊಳ್ಳಬೇಕೆಂದು ಸಲಹೆ ಮಾಡಿತು. ಮೈಸೂರು ಸರ್ಕಾರವು ಈ ಸಲಹೆಯನ್ನು ಒಪ್ಪಿತು.

ಜಾನ್ ಟೈಲರ್ ಕಂಪನಿಯವರು ಅದಕ್ಕೆ ವಿಘ್ನ ಳನ್ನು ತಂದರು; ಡೆಲ್ಲಿಯ ಸರ್ಕಾರದ ಪ್ರಭಾವ ಬೀರಿದರು. ರಾಷ್ಟ್ರೀಕರಣದ ಬೆಲೆಯನ್ನು ನಿರ್ಧರಿಸುವುದು ಮುಖ್ಯವಾದ ಕೆಲಸವಾಗಿತ್ತು. ಈ ಕೆಲಸಕ್ಕೆ ನಾನೂ ಮತ್ತು ಶ್ರೀ ಹನುಮಂತಯ್ಯನವರು, ಶ್ರೀ ಸಿದ್ದವೀರಪ್ಪ ಮತ್ತು ಶ್ರೀ ಪಟ್ಟಾಭಿರಾಮನ್‌ರೂ ದೆಹಲಿಗೆ ಹೋಗಿ ಅಲ್ಲಿ ನಡೆದ ಸಂಧಾನದಲ್ಲೂ ಭಾಗವಹಿಸಿದೆವು. ಕೊನೆಗೆ ಕೇಂದ್ರ ಸರ್ಕಾರವು ಪರಿಹಾರ ದ್ರವ್ಯವನ್ನು ನಿರ್ಧರಿಸಲು ಒಂದು ಸಮಿತಿಯನ್ನು ಏರ್ಪಡಿಸಬೇಕೆಂದು ನಾವಿಬ್ಬರೂ ತೀರ್ಮಾನಿಸಿದೆವು. ಈ ಸಮಿತಿಯ ಶ್ರೀ ಸಿದ್ದವೀರಪ್ಪನವರ ಅಧ್ಯಕ್ಷತೆಯಲ್ಲಿ ಸೇರಿ, ಎಲ್ಲಾ ಅಂಶಗಳೂ ಪರಿಶೀಲಿಸಿ, ಕೋಲಾರದ ಚಿನ್ನದಗಣಿಗಳನ್ನು ರಾಷ್ಟ್ರೀಕರಣ ಮಾಡಿ, ಮೈಸೂರು ಸರ್ಕಾರಕ್ಕೆ ಸೇರಿಸಿಕೊಳ್ಳಬೇಕೆಂದು ಸಲಹೆ ಮಾಡಿತು. ಮೈಸೂರು ಸರ್ಕಾರವು ಈ ಸಲಹೆಯನ್ನು ಒಪ್ಪಿತು.

ಈ ಸಮಯಕ್ಕೆ ಸರಿಯಾಗಿ ಶ್ರೀ ಹನುಮಂತಯ್ಯನವರು ತಮ್ಮ ಮುಖ್ಯಮಂತ್ರಿತ್ವವನ್ನು ತ್ಯಜಿಸಬೇಕಾಯಿತು. ಶ್ರೀ ಕಡಿದಾಳ್ ಮಂಜಪ್ಪನವರು ಮುಖ್ಯಮಂತ್ರಿಗಳಾದರು. ಶ್ರೀ ಸಿದ್ದವೀರಪ್ಪನವರು ಗಣಿಖಾತೆಯ ಮಂತ್ರಿಗಳಾಗಿದ್ದರು. ಚಿನ್ನದ ಗಣಿ ಮಾಲೀಕರಿಗೆ ಒಂದು ಕೋಟಿ ಎಂಬತ್ತು ಲಕ್ಷ (1,80,000) ರೂಪಾಯಿಗಳನ್ನು ಪರಿಹಾರವಾಗಿ ಕೊಟ್ಟರು. ಸಮಿತಿಯವರು ಒಂದು ಕೋಟಿಮೂವತ್ತು ಲಕ್ಷ (1,30,000) ರೂಪಾಯಿ ಸೂಚಿಸಿದ್ದರೂ ವಿನಾಕಾರಣ ಐವತ್ತು ಲಕ್ಷ (50,00,000) ರೂಪಾಯಿ ಹೆಚ್ಚಿಗೆ ಪರಿಹಾರ ಕೊಟ್ಟರು. ಆಗ ಕೇಂದ್ರದಲ್ಲಿ ಶ್ರೀ ಮಾಳವಿಯಾರವರು ಗಣಿಗಳ ಮಂತ್ರಿಗಳಾಗಿದ್ದರು.

ಈ ವಿಷಯವನ್ನು ನಾನು ಲೋಕಸಭೆಯ ಮುಂದೆ ಚರ್ಚೆಗೆ ತಂದು ಎಲ್ಲಾ ಕೂಲಂಕುಷವಾಗಿ ಸಭೆಗೆ ತಿಳಿಸಿದೆ. ಸಮರ್ಪಕವಾದ ಉತ್ತರವು ದೊರೆಯಲಿಲ್ಲ. ಅಂತೂ ರಾಜ್ಯಕ್ಕೆ 50 ಲಕ್ಷ ರೂಪಾಯಿ ಹೆಚ್ಚಿಗೆ ಖರ್ಚಾಯಿತು.

## ವಿರೋಧಪಕ್ಷದ ಪಾತ್ರ

ಏಕಪಕ್ಷ ಸರ್ಕಾರದ ಆಡಳಿತದಲ್ಲಿ ಪ್ರಜಾಪ್ರಭುತ್ವ ಯಶಸ್ವಿಯಾಗಿ ನಡೆಯಬೇಕಾದರೆ ಸುವ್ಯವಸ್ಥಿತವಾದ ವಿರೋಧ ಪಕ್ಷವು ಇರಬೇಕಾದುದು ಅವಶ್ಯಕವಾಗಿರುತ್ತದೆ. ಶ್ರೀ ಕೆ.ಸಿ. ರೆಡ್ಡಿಯವರು ಮುಖ್ಯಮಂತ್ರಿಗಳಾದಾಗ ಮೈಸೂರು ವಿಧಾನಸಭೆಯಲ್ಲಿ ಒಂದು ವಿರೋಧ ಪಕ್ಷವು ಸ್ಥಾಪಿತವಾದದ್ದನ್ನು ಹಿಂದೆಯೇ ತಿಳಿಸಿದ್ದೇನೆ.

1952ರ ಸಾರ್ವತ್ರಿಕ ಚುನಾವಣೆಯಲ್ಲಿ 80 ಜನ ಸದಸ್ಯರು ಕಾಂಗ್ರೆಸ್ ಪರವಾಗಿಯೂ ಸುಮಾರು ಇಪ್ಪತ್ತು ಜನರು ಇತರ ಪಕ್ಷಗಳು ಮತ್ತು ಸ್ವತಂತ್ರರಾಗಿಯೂ ಮೈಸೂರು ವಿಧಾನಸಭೆಗೆ ಸದಸ್ಯರಾಗಿ ಆರಿಸಲ್ಪಟ್ಟರು. ಅವರಲ್ಲಿ 12 ಜನ ಸದಸ್ಯರು ಕೆ.ಎಂ.ಪಿ. ಪಕ್ಷದಿಂದ ಚುನಾಯಿತರಾಗಿ ಮುಂದೆ ವಿರೋಧ ಪಕ್ಷವಾಯಿತು. ಈ ಪಕ್ಷದಲ್ಲಿದ್ದವರು 1. ಶ್ರೀ ಎಲ್. ಸಿದ್ದಪ್ಪ 2. ಶ್ರೀ ಹುಚ್ಚೇಗೌಡ 3. ಶ್ರೀ ಎಸ್. ಶ್ರೀನಿವಾಸಯ್ಯಂಗಾರ್ 4. ಶ್ರೀ ಮುಲ್ಕಗೋವಿಂದರೆಡ್ಡಿ, 5. ಶ್ರೀ ರಾಜಶೇಖರಮೂರ್ತಿ, 6. ಶ್ರೀ ಬಿ. ರಾಚಯ್ಯ 7. ಶ್ರೀ ನಾಗರಾಜ ಮೂರ್ತಿ 8. ಶ್ರೀ ಚಿಕ್ಕಲಿಂಗಯ್ಯ 9. ಶ್ರೀ ಆಂಜನೇಯ ರೆಡ್ಡಿ. 10. ಶ್ರೀ ಮಾದಪ್ಪ 11. ಶ್ರೀ ಗೋಪಾಲಗೌಡರು ಮತ್ತು 12 ನಾನು.

ಕೆಲವು ದಿನಗಳ ನಂತರ ಶ್ರೀ ರಾಜಶೇಖರಮೂರ್ತಿಯವರು ಮತ್ತು ಶ್ರೀಮಾನ್ ರಾಚಪ್ಪನವರು ವಿರೋಧಪಕ್ಷಕ್ಕೆ ರಾಜೀನಾಮೆ ಇತ್ತು ಕಾಂಗ್ರೆಸ್ ಪಕ್ಷವನ್ನು ಸೇರಿದರು. ಶ್ರೀ ರಾಚಯ್ಯನವರು ಆಗ ಶಾಲಾ ಕಾಲೇಜಿನಲ್ಲಿ ವಿದ್ಯಾರ್ಥಿಗಳಾಗಿದ್ದರು. ಅವರು ಈಗ ಅರಣ್ಯ ಖಾತೆಯ ಮಂತ್ರಿಗಳಾಗಿದ್ದಾರೆ. ಅಧಿಕಾರ ಮೋಹವಿರುವವರಿಗೆ ವಿರೋಧಪಕ್ಷದಲ್ಲಿ ಸ್ಥಾನವಿರುವುದಿಲ್ಲ. ಉಳಿದ ಸದಸ್ಯರೆಲ್ಲರೂ ಕೊನೆಯವರೆವಿಗೂ ಸರ್ಕಾರದ ಆಡಳಿತ ನೀತಿಯನ್ನು ರಚನಾತ್ಮಕವಾಗಿ ಟೀಕಿಸುತ್ತಾ ರೈತರ ಮತ್ತು ಪ್ರಜೆಗಳ ಹಿತರಕ್ಷಣೆ ಮಾಡಲು ಹೋರಾಡುತ್ತಿದ್ದರು. ಸ್ಥಳೀಯ ಸಂಸ್ಥೆಗಳಲ್ಲಿಯೂ ರಾಜಕೀಯದಲ್ಲಿಯೂ ಬಹಳ ಕಾಲ ಕೆಲಸ ಮಾಡಿ, ಅವರು ಬಹಳ ಅನುಭವ ಪಡೆದಿದ್ದರು. ಶ್ರೀಮಾನ್ ಎಲ್. ಸಿದ್ದಪ್ಪನವರು ಅನೇಕ ವರುಷ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿಯೂ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿಯೂ ದೇಶಕ್ಕೆ ಬಹಳ ಸೇವೆಯನ್ನು ಸಲ್ಲಿಸಿದ್ದರು. ಸ್ವಾತಂತ್ರ್ಯ ಬರುವುದಕ್ಕೆ ಮುಂಚೆ ಮೈಸೂರು ಸರ್ಕಾರದ ಮರಾಮತ್ ಶಾಖಾ ಸಚಿವರಾಗಿದ್ದು ಅನೇಕ ಕೆರೆ ಮತ್ತು ರಸ್ತೆಗಳ ನಿರ್ಮಾಣಕ್ಕೆ ಕಾರಣರಾಗಿದ್ದರು. ಶ್ರೀ ಹುಚ್ಚೇಗೌಡರು ಜಿಲ್ಲಾ ಬೋರ್ಡು ಅಧ್ಯಕ್ಷರಾಗಿಯೂ, ಪ್ರಜಾ ಪ್ರತಿನಿದಿ ಸಭೆಯ ಸದಸ್ಯರಾಗಿಯೂ ದೇಶಕ್ಕೆ ಬಹಳ ದುಡಿದವರು, ಅವರು ಸ್ವರ್ಗಸ್ಥರಾಗುವವರೆಗೂ ವಿರೋಧಪಕ್ಷದಲ್ಲಿಯೇ ಇದ್ದು ಸರ್ಕಾರದ ನೀತಿಯನ್ನು ತೀವ್ರವಾಗಿ ಖಂಡಿಸುತ್ತಿದ್ದರು. ಎರಡು ವರುಷಗಳ ಹಿಂದೆ ಅವರು ದಿವಂಗತರಾದದ್ದು ಎಲ್ಲರಿಗೂ ದುಃಖವನ್ನುಂಟುಮಾಡಿತು. ಟಿ. ನರಸೀಪುರದ ಶ್ರೀ ಶ್ರೀನಿವಾಸ ಅಯ್ಯಂಗಾರ್‌ರವರು ಇಂಜಿನಿಯರಿಂಗ್ ಪದವೀಧರರು,

ಅವರ ಭಾಷಣವು ಅಂಕಿ ಅಂಶಗಳಿಂದ ಕೂಡಿರುತ್ತಿದ್ದಿತು. ಇವರ ನಿಧನದಿಂದ ಮೈಸೂರಿನ ಒಬ್ಬ ಮಹಾ ವ್ಯಕ್ತಿಯು ಕಣ್ಮರೆಯಾದಂತಾಯಿತು. ಶ್ರೀ ಎಸ್. ಗೋಪಾಲಗೌಡರು, ಶ್ರೀ ಮೂಲ್ಕಗೋವಿಂದರೆಡ್ಡಿಯವರು ಶ್ರೀ ಬಿ.ಪಿ. ನಾಗರಾಜಮೂರ್ತಿ, ಶ್ರೀ ಚಿಕ್ಕಲಿಂಗಯ್ಯ ಇವರು ನಿಸ್ಪೃಹತೆಯಿಂದ ದೇಶದ ಹಿತವನ್ನು ಮತ್ತು ವಿರೋಧ ಪಕ್ಷದ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ವಿರೋಧಪಕ್ಷಕ್ಕೆ ಬಹಳವಾಗಿ ಪ್ರೋತ್ಸಾಹಕೊಡುತ್ತಿದ್ದವರು ಕೋಲಾರದ ಶ್ರೀಮಾನ್ ಪಟ್ಟಾಭಿರಾಮನ್‌ರವರು ಇವರು ಅನೇಕ ವರುಷ ಮೈಸೂರು ಕಾಂಗ್ರೆಸ್ ಸಂಸ್ಥೆಗೆ ಪ್ರದಾನ ಕಾರ್ಯದರ್ಶಿಗಳಾಗಿದ್ದು, ಕಾಂಗ್ರೆಸ್ಸಿನ ಬೆಳವಣಿಗೆಗೆ ಬಹಳ ಶ್ರಮವಹಿಸಿದ್ದವರು. ಅನಾಚಾರ ಸ್ವಾರ್ಥತೆ ಮತ್ತು ಅಧಿಕಾರ ಮೋಹ ತಲೆದೋರಿರುವುದಾಗಿ ಅವರಿಗೆ ಮನವರಿಕೆಯಾದುದರಿಂದ, ಕಾಂಗ್ರೆಸ್ ಸಂಸ್ಥೆಯಲ್ಲಿ ಇರಲು ಇವರ ಮನಸ್ಸೊಪ್ಪಲಿಲ್ಲ. ಕಾಂಗ್ರೆಸ್ಸಿಗೆ ರಾಜೀನಾಮೆಯನ್ನು ಕೊಟ್ಟು 1952ರ ಚುನಾವಣೆಯಲ್ಲಿ ಸ್ವತಂತ್ರ ಅಭ್ಯರ್ಥಿಯಾಗಿ ವಿಧಾನಸಭೆಗೆ ಸ್ಪರ್ಧಿಸಿ ಜಯಶೀಲರಾದರು. ಅವರು ವಿಧಾನಸಭೆಯ ಸದಸ್ಯರಾದ ನಂತರವೇ ಅವರ ಪ್ರಥಮ ಪರಿಚಯ ನನಗೆ ದೊರೆಯಿತು. 1952 ರಿಂದ 1957ರವರೆಗೆ ವಿಧಾನಸಭೆಯ ಕಾರ್ಯಕಲಾಪಗಳಲ್ಲಿ ಮುಖ್ಯಪಾತ್ರ ವಹಿಸಿ ಅವರ ಘನತೆ ಮತ್ತು ಗೌರವವನ್ನು ಹೆಚ್ಚಿಸಿದರು. ಅವರು ಬಹಳ ಸರಳಜೀವಿ. ಅಧಿಕಾರ ಲಾಲಸೆ ಇರಲಿಲ್ಲ. ಅವರು ಅಧಿಕಾರಕ್ಕೆ ಮೋಹಪಟ್ಟಿದ್ದರೆ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರಾಗಿ ನಿವೃತ್ತಿರಾಗುತ್ತಿದ್ದರು.

ಶ್ರೀ ಪಟ್ಟಾಭಿರಾಮನ್‌ರವರು ಅವರ ಧ್ಯೇಯಕ್ಕೆ ವಿರೋಧವಾಗಿ ನಡೆಯುತ್ತಿರಲಿಲ್ಲ. ಪ್ರಜಾಸರ್ಕಾರ ಬಂದ ನಂತರ ರಾಜಕೀಯ ಮುಖಂಡರಿಂದ ಮಂತ್ರಿಗಳಿಗೂ, ಅಧಿಕಾರಿಗಳಿಗೂ ಶಿಫಾರಸ್ ಮಾಡಿಸಿ ತಮ್ಮ ಕಾರ್ಯಸಾಧನೆ ಮಾಡಿಕೊಳ್ಳುವ ವಾಡಿಕೆ ಹೆಚ್ಚಾಗುತ್ತಾ ಬಂದಿತು. ಒಂದು ದಿನ ಒಬ್ಬ ಮಹನೀಯರು ಶ್ರೀ ಪಟ್ಟಾಭಿರಾಮನ್‌ರವರಲ್ಲಿಗೆ ಬಂದು ತನ್ನ ಬಂಧು ಒಬ್ಬರಿಗೆ ಉನ್ನತ ನೌಕರಿ ಕೊಡುವ ಹಾಗೆ ಶಿಫಾರಸ್ಸು ಮಾಡಬೇಕೆಂದು ಕೇಳಿಕೊಂಡರು ಶ್ರೀ ರಾಮನ್‌ರವರು. ಸಾರ್ವಜನಿಕರ ಸೌಕರ್ಯಕ್ಕೆ ಸಂಬಂಧಪಟ್ಟ ಕೆಲಸವಾದರೆ ಅಥವಾ ಒಂದು ಕೆರೆ, ವೈದ್ಯ ಸೌಕರ್ಯಕ್ಕೆ ಬೇಕಾದರೆ ನಾನು ಶಿಫಾರಸ್ಸು ಮಾಡುತ್ತೇನೆ. ಮಂತ್ರಿಗಳನ್ನು ನೋಡಿ ಅವರನ್ನು ಬೇಡಿಕೊಳ್ಳುತ್ತೇನೆ. ಆದರೆ ವೈಯಕ್ತಿಕವಾದ ಶಿಫಾರಸ್ಸು ಮಾಡುವುದನ್ನು ನಾನು ಒಪ್ಪಲಾರೆ ಅರ್ಹತೆ, ದಕ್ಷತೆ ಇರುವವನಿಗೆ ಶಿಫಾರಸ್ಸಿನ ಅವಶ್ಯಕತೆ ಇಲ್ಲ. ಅರ್ಹತೆ, ಯೋಗ್ಯತೆ ಇಲ್ಲದವರಿಗೆ ಶಿಫಾರಸ್ಸು ಮಾಡಿದರೆ ಅರ್ಹತೆ ಉಳ್ಳವನಿಗೆ ಅನ್ಯಾಯ ಮಾಡಿ, ಅವನ ಜೀವನವನ್ನೇ ಕೆಡಿಸಿದ ಹಾಗೆ ಆಗುತ್ತದೆ. ಇದು ಪಾಪಕಾರ್ಯ, ಶಿಫಾರಸ್ಸಿನಿಂದ ನ್ಯಾಯ ಅನ್ಯಾಯವಾಗುತ್ತದೆ, ಅನ್ಯಾಯ ನ್ಯಾಯವಾಗುತ್ತದೆ ಎಂದು ಖಂಡಿತವಾಗಿ ಹೇಳಿದರು. ಈ ಧ್ಯೇಯವು ಅನೇಕರಿಗೆ ಅಸಮಾಧಾನವನ್ನುಂಟು ಮಾಡಬಹುದು. ಆದರೂ ಈಗಿನ ರಾಜಕೀಯ ಮುಖಂಡರು ಶಿಫಾರಸ್ಸುಗಳಿಂದ ಉಂಟಾಗುವ ಅನ್ಯಾಯಗಳನ್ನು ಗ್ರಹಿಸಿ ತಮ್ಮ ನಡೆತೆಯನ್ನು ಮಾರ್ಪಡಿಸಿ

ಕೊಳ್ಳಬೇಕಾದುದು ಅವಶ್ಯ. ಶಿಫಾರಸ್ಸು ಮಾಡಿ ಪ್ರತಿಫಲ ಹೊಂದುವವರಿಗೆ ನಾನು ಏನೂ ಹೇಳಬೇಕಾದುದಿಲ್ಲ. ಅಂತೂ ಶ್ರೀ ಪಟ್ಟಾಭಿರಾಮನ್‌ರಂಥ ವ್ಯಕ್ತಿಗಳಿಗೆ ಈಗಿನ ರಾಜಕೀಯದಲ್ಲಿ ಸ್ಥಾನವಿಲ್ಲ.

ಇವರ ಬೆಂಬಲದಿಂದ ವಿರೋಧ ಪಕ್ಷದ ಕಾಂತಿಯು ಬೆಳಗಿತು. ಸರ್ಕಾರದ ನೀತಿ, ಆದರ ಆರ್ಥಿಕ ಪರಿಸ್ಥಿತಿಯನ್ನು ನಾವುಗಳೆಲ್ಲರೂ ಕಟುವಾಗಿ ಟೀಕೆ ಮಾಡುತ್ತಿದ್ದರೂ, ಸರ್ಕಾರ ಮತ್ತು ವಿರೋಧ ಪಕ್ಷದ ಮಧ್ಯೆ ಮಧುರ ಬಾಂಧವ್ಯವಿದ್ದಿತು. ವೈಯಕ್ತಿಕ ದ್ವೇಷವಿರಲಿಲ್ಲ. ವೈಯಕ್ತಿಕವಾಗಿ ಒಬ್ಬರನ್ನು ಹಿಯ್ಯಾಳಿಸುವ ಮನೋಭಾವವೂ ಇರಲಿಲ್ಲ. ಟೀಕೆಗಳು ಉತ್ತಮ ಮಟ್ಟದಲ್ಲಿ ನಡೆಯುತ್ತಿದ್ದವು.

ನಾವು ವಿರೋಧಕ್ಕೋಸ್ಕರ ವಿರೋಧ ಮಾಡುತ್ತಿರಲಿಲ್ಲ. ದೇಶದ ಕೀರ್ತಿಯನ್ನು ಹೆಚ್ಚಿಸುವ ಅಥವಾ ಜನರಿಗೆ ಉಪಯೋಗವಾಗುವ ಸಮಸ್ಯೆಗಳು ಸಭೆಯ ಮುಂದೆ ಬಂದರೆ ಅದಕ್ಕೆ ಪೂರ್ಣ ಬೆಂಬಲ ಕೊಡುತ್ತಿದ್ದೆವು. ಕೋಲಾರದ ಚಿನ್ನದ ಗಣಿಗಳ ರಾಷ್ಟ್ರೀಕರಣ, ಬಳ್ಳಾರಿ ಮೈಸೂರಿನಲ್ಲಿ ವಿಲೀನವಾದದ್ದು, ವಿಶಾಲ ಮೈಸೂರು ನಿರ್ಮಾಣ ಈ ವಿಷಯಗಳು ಸಭೆಯ ಮುಂದೆ ಬಂದಾಗ ವಿರೋಧಪಕ್ಷವು ಉತ್ತಮ ರೀತಿಯಲ್ಲಿ ತನ್ನ ಕೆಲಸ ಮಾಡಿ, ಕೆಲವು ಸಂಪ್ರದಾಯಗಳನ್ನು ಆಚರಣೆಗೆ ತಂದಿತ್ತೆಂದು ವಿರೋಧ ಪಕ್ಷದ ನಾಯಕನಾಗಿದ್ದ ನಾನು ಹೆಮ್ಮೆಯಿಂದ ತಿಳಿಸುತ್ತೇನೆ.

## ವಿಶಾಲ ಮೈಸೂರಿನ ಆಡಳಿತಾರಂಭ

ಶ್ರೀ ನಿಜಲಿಂಗಪ್ಪನವರು ವಿಶಾಲ ಮೈಸೂರಿನ ಪ್ರಥಮ ಮುಖ್ಯಮಂತ್ರಿಗಳಾಗಿದ್ದು, ಸರಿಯಷ್ಟೆ, ಮಂತ್ರಿಗಳ ಸಂಖ್ಯೆಯು 12 ಕ್ಕೇರಿತು. ವಿಧಾನಸಭಾ ಸದಸ್ಯರ ಸಂಖ್ಯೆಯು 208 ಕ್ಕೆ ಬಂದಿತು. ಹೊಸ ಮಂತ್ರಿ ಮಂಡಲವು ಉತ್ಸಾಹದಿಂದ ಆಡಳಿತವನ್ನು ಪ್ರಾರಂಭಿಸಿತು.

ವಿಶಾಲ ಮೈಸೂರಿನ ವಿಧಾನಸಭೆಯು ಪ್ರಥಮವಾಗಿ 19-12-1956ರಲ್ಲಿ ಸೇರಿತು. ರಾಜಪ್ರಮುಖರು 20-12-1956ರಲ್ಲಿ ಎರಡೂ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ರಾಜಪ್ರಮುಖರ ಭಾಷಣದ ಮೇಲೆ ಮಾತನಾಡುತ್ತಾ, ನಾನು ಈ ರೀತಿ ಇಂಗ್ಲೀಷಿನಲ್ಲಿ ಹೇಳಿದೆ.

"Sir this is a proud and happy day for me, because, on this day, all of us, people from various parts of the State, have come together here. It is a happy sight that we are meeting in this new and magnificient hall. Let us all welcome each other with fervour and zeal like brothers who were lost to each other centuries and who have now been re-united. It is now up to us to work together for the good of the state. We have so much in common .We have a Common civilization, a common culture, and a common language. let us now strive hard for the improvement of the State"

ಈ ಹೊಸ ಮಂತ್ರಿ ಮಂಡಲಕ್ಕೆ ಶ್ರೀ ಹೆಚ್.ಎಸ್. ರುದ್ರಪ್ಪನವರೂ ಮತ್ತು ಶ್ರೀ ಚೆನ್ನಿಗರಾಮಯ್ಯನವರೂ ಸೇರಿದ್ದು, ನನಗೆ ಸಮರ್ಪಕವಾಗಿ ಕಾಣಲಿಲ್ಲ. ಈ ಮಹನೀಯರಿಬ್ಬರೂ ಕ್ರಮವಾಗಿ ವಿಧಾನಸಭೆಯ ಅಧ್ಯಕ್ಷರೂ ಉಪಾಧ್ಯಕ್ಷರೂ ಆಗಿದ್ದರು. ಇವು ಎರಡೂ ಪವಿತ್ರವಾದ ಗೌರವ ಸ್ಥಾನಗಳು, ಆದರೆ ಇವರಿಬ್ಬರೂ ಅವಕ್ಕೆ ರಾಜೀನಾಮೆ ಕೊಟ್ಟು ಮಂತ್ರಿಮಂಡಲಕ್ಕೆ ಸೇರಿದರು.

ಹೊಸ ಮಂತ್ರಿಮಂಡಲವು ಹಿಂದಿನ ಮಂತ್ರಿಗಳಿಂದ ನುರಿತವರೂ ಯೋಗ್ಯರೂ ಆದವರನ್ನು ಹೊಸಮಂತ್ರಿಮಂಡಲದಲ್ಲಿ ಸೇರಿಸಬಹುದಾಗಿದ್ದಿತು. ಆದರೆ ಮೈಸೂರು ಕಾಂಗ್ರೆಸ್ಸಿನ ಇತಿಹಾಸದಲ್ಲಿ ಈ ಸಂಪ್ರದಾಯ ಬೆಳೆದು ಬರಲಿಲ್ಲ. ಹಳಬರೆಲ್ಲಾ ನಿರುದ್ಯೋಗಿಗಳಾದರು ಕಾರಣಗಳು:1 ಕಾಂಗ್ರೆಸ್ಸಿನ ಒಳಗುಂಪಿನ ಜಗಳ. 2. ಅರ್ಹತೆ ಇರಲಿ, ಇಲ್ಲದಿರಲಿ ಮಂತ್ರಿಯಾಗುವ ಆಶೆ.

ತಾರೀಖು 20-12-56ರಲ್ಲಿ ವಿಧಾನಸಭೆಯಲ್ಲಿ ನಾನು ಇಂಗ್ಲೀಷಿನಲ್ಲಿ ಈ ರೀತಿಯಾಗಿ ಹೇಳಿದೆ:

I know, during this period there have been group politicis, moves and counter moves, and wheels moving within wheels. During these five years, this State was ruled by a House divided a against - itself. We do not mind party is in power. We are aware that the party on the other

side has a majority and........a brute majority. But we are interested that when a party is charged with power and responsibility of administration of the country and when the duties of administration have been ಕೋಟಿ ಖೋತಾ ಬಿದ್ದಿತು. ಈ ಲೆಕ್ಕದ ಪ್ರಕಾರ ಒಂದು ವರ್ಷಕ್ಕೆ ಖರ್ಚು ಆದಾಯಕ್ಕಿಂತ 9 ಕೋಟಿ ಜಾಸ್ತಿಯಾಯಿತು. ವಿಶಾಲ ಮೈಸೂರಿನ ಪ್ರಾರಂಭದ ದೆಸೆಯಲ್ಲಿಯೇ ಹಣಕಾಸಿನ ಸ್ಥಿತಿಯು ಅಸಮರ್ಪಕವಾದ ಸ್ತಿತಿಯಲ್ಲಿತ್ತು. ಕೇಂದ್ರ ಸರ್ಕಾರದ ಸಹಾಯವು ಒದಗದಿದ್ದರೆ ಮೈಸೂರಿನ ಅಭಿವೃದ್ಧಿಯು ಮುಂದುವರಿಸಲು ಅಸಾಧ್ಯವಾಗುತ್ತಿತ್ತು.

1961-62ರ ಆದಾಯ 91 ಕೋಟಿ ರೂಪಾಯಿ, ಖರ್ಚು 95 ಕೋಟಿ, 68 ಲಕ್ಷ. ಖೋತಾ 4 ಕೋಟಿ 66 ಲಕ್ಷವಾಯಿತು. 1962-63ರಲ್ಲಿ ಆದಾಯ 99 ಕೋಟಿ 70 ಲಕ್ಷ, ಖರ್ಚು102 ಕೋಟಿ, ಖೋತಾ ಬಿದ್ದದ್ದು 3 ಕೋಟಿ 22 ಲಕ್ಷ. ಇದರ ಪರಿಣಾಮವಾಗಿ ಸಾಲದ ಹೊರೆ ದಾಸ್ತಿಯಾಗುತ್ತಾ ಬಂದಿತು. 31-3-58ರಲ್ಲಿ ಮೈಸೂರು ಸರ್ಕಾರವು ಕೊಡಬೇಕಾದ ಸಾಲವು 85 ಕೋಟಿ 75 ಲಕ್ಷವಿದ್ದಿತು. 31-3-60ರಲ್ಲಿ 109 ಕೋಟಿಗೆ ಏರಿತು. 31-3-62ರಲ್ಲಿ 157 ಕೋಟಿ ರೂಪಾಯಿಗಳಿಗೆ ಏರಿತು. ಈ ಸಾಲಕ್ಕೆ ಸರ್ಕಾರವು ಕೊಡಬೇಕಾಗಿದ್ದ ಬಡ್ಡಿಯು ಒಂದು ವರ್ಷಕ್ಕೆ 8 ಕೋಟಿ 51 ಲಕ್ಷರೂ. ಗಳಾಗುತ್ತೆ. ಇದರ ಜೊತೆಗೆ ಸಿಬ್ಬಂದಿಯ ಖರ್ಚು ಜಾಸ್ತಿಯಾಗುತ್ತಲೇ ಇದೆ. ಹಣಕಾಸಿನ ಪರಿಸ್ಥಿತಿ ಹೀಗಿರುವಾಗ ಜನಗಳ ಮೇಲೆ ಹೆಚ್ಚಿಗೆ ತೆರಿಗೆಗಳನ್ನು ಹಾಕುವುದು ಅನಿವಾರ್ಯವಾಯಿತು. ಹೀಗೆ ಶ್ರೀ ಜತ್ತಿಯವರ ಮುಖ್ಯಮಂತ್ರಿತ್ವವು 1962ನೇ ಚುನಾವಣೆವರೆಗೂ ನಡೆಯಿತು.

## ಚುನಾವಣೆಗಳು

ಆ ಕಾಲದಲ್ಲಿ ಶ್ರೀ ನಿಜಲಿಂಗಪ್ಪನವರು ಮೈಸೂರು ಪ್ರಾದೇಶಿಕ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. 1962ನೇ ಫೆಬ್ರವರಿ ಚುನಾವಣೆಗಳಿಗೆ ಕಾಂಗ್ರೆಸ್ ಅಭ್ಯರ್ಥಿಗಳನ್ನು ಆರಿಸುವ ಕೆಲಸವು ಪ್ರಾರಂಭವಾಯಿತು. ಶ್ರೀ ಜತ್ತಿ ಪಾರ್ಟಿಯವರಿಂದ ಅನೇಕ ದೂರುಗಳು ಕೇಂದ್ರ ಪಾರ್ಲಿಮೆಂಟ್ ಬೋರ್ಡಿಗೂ ಅಧ್ಯಕ್ಷರಿಗೂ ಹೋದವು. ಕೊನೆಗೆ ಶ್ರೀ ನಿಜಲಿಂಗಪ್ಪನವರ ಪಾರ್ಟಿಯಿಂದ ಐದು ಸದಸ್ಯರು ಮತ್ತು ಶ್ರೀ ಜತ್ತಿಯವರ ಪಾರ್ಟಿಯಿಂದ ನಾಲ್ಕು ಸದಸ್ಯರನ್ನೊಳಗೊಂಡ ಒಂದು ಸಮಿತಿಯು ಏರ್ಪಾಡಾಯಿತು. ಶ್ರೀ ನಿಜಲಿಂಗಪ್ಪನವರ ಕಡೆಯವರು ಅಭ್ಯರ್ಥಿಗಳ ಒಂದು ಪಟ್ಟಿಯನ್ನು ತಯಾರು ಮಾಡಿದರು. ಶ್ರೀ ಜತ್ತಿಯವರ ಕಡೆಯವರು ಮತ್ತೊಂದು ಪಟ್ಟಿಯನ್ನು ತಯಾರ್ಮಾಡಿದರು. ಶ್ರೀ ನಿಜಲಿಂಗಪ್ಪ ಮತ್ತು ಶ್ರೀ ಜತ್ತಿ ಇವರು ತಮ್ಮ ತಮ್ಮ ಪಾರ್ಟಿಯವರು ತಯಾರು ಮಾಡಿದ ಪಟ್ಟಿಗಳನ್ನು ತೆಗೆದುಕೊಂಡು ಕೇಂದ್ರ ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡಿಗೆ ಹೋದರು. ಶ್ರೀ ನಿಜಲಿಂಗಪ್ಪನವರ ಪಾರ್ಟಿಗೆ ಬೆಂಬಲ ಸಿಕ್ಕಿತು. ಚುನಾವಣೆಗಳಲ್ಲಿ ಶ್ರೀ ಜತ್ತಿ ಮಂತ್ರಿ ಮಂಡಲದಲ್ಲಿ ಶ್ರೀ ಸುಬ್ರಹ್ಮಣ್ಯಂ, ಶ್ರೀ ಮಾಲಿಮರಿಯಪ್ಪ ಮತ್ತು ಶ್ರೀ ಲಿಂಗಾರೆಡ್ಡಿ ಈ ಮುಖಂಡರೆಲ್ಲಾ ಪರಾಜಿತರಾದರು. ಶ್ರೀ ನಿಜಲಿಂಗಪ್ಪನವರೂ ಸಹ ಹೊಸದುರ್ಗ ಕ್ಷೇತ್ರದಲ್ಲಿ ಪರಾಜಿತರಾದರು.

ಶ್ರೀ ಜತ್ತಿ ಮತ್ತು ಶ್ರೀ ಕಂಠಿಯವರ ಮಧ್ಯೆ ನಾಯಕತ್ವಕ್ಕೆ ಸ್ಪರ್ಧೆಯುಂಟಾಗಿ ಶ್ರೀ ಕಂಠಿಯವರು ಜಯಶೀಲರಾಗಿ ಮುಖ್ಯಮಂತ್ರಿಗಳಾದರು. ಶ್ರೀ ಕಂಠಿಯವರು ಮುಖ್ಯಮಂತ್ರಿಗಳಾದುದು ಶ್ರೀ ನಿಜಲಿಂಗಪ್ಪನವರ ಸಹಾಯಕ್ಕಾಗಿಯೇ ಆನಂತರ ಶ್ರೀ ನಿಜಲಿಂಗಪ್ಪನವರು ಬಾಗಲಕೋಟೆ ಕ್ಷೇತ್ರದಿಂದ ವಿರೋಧವಿಲ್ಲದೆ ಆರಿಸಿ ಬಂದು, ಕೇಂದ್ರ ಕಾಂಗ್ರೆಸ್ಸಿನ ಸಂಧಾನಗಳ ಫಲವಾಗಿ ಮುಖ್ಯಮಂತ್ರಿಗಳಾದುದು ಎಲ್ಲರಿಗೂ ತಿಳಿಸಿದೆ. ಈಗ, ಹಿಂದೆ ಎಂದೂ ಕಾಣದ 28 ಜನ ಮಂತ್ರಿಗಳೂ, ಉಪಮಂತ್ರಿಗಳೂ ಮಂತ್ರಿಮಂಡಲದಲ್ಲಿದ್ದಾರೆ ಸ್ಪೀಕರು, ಡೆಪ್ಯುಟಿಸ್ಪೀಕರು, ಛೇರ್‌ಮನ್ ಮತ್ತು ಡೆಪ್ಯುಟಿ ಛೇರ್‌ಮನ್ ಸೇರಿ ಒಟ್ಟು 32 ಜನ ಶಾಸನಸಭೆಗಳ ಕಾಂಗ್ರೆಸ್ ಸದಸ್ಯರು ಅಧಿಕಾರದಲ್ಲಿದ್ದಾರೆ, ಕಾಂಗ್ರೆಸ್ ಸದಸ್ಯರ ಸಂಖ್ಯೆ 138, ಶೇಕಡ 24 ಜನ ಕಾಂಗ್ರೆಸ್ ಸದಸ್ಯರು ಅಧಿಕಾರವಹಿಸಿದ ಹಾಗಾಯಿತು. ಇಷ್ಟು ಜನಮಂತ್ರಿಗಳ ಅವಶ್ಯಕವಿದೆಯೇ, ಅವರೆಲ್ಲರಿಗೂ ಸಾಕಾದಷ್ಟು ಕೆಲಸವಿದೆಯೇ ಎಂಬುದನ್ನು ಯೋಚಿಸಬೇಕಾಗಿದೆ.

ಮಹಾರಾಜರ ಆಡಳಿತದಲ್ಲಿ ಇಬ್ಬರಿಂದ ಐದು ಜನ ಮಂತ್ರಿಗಳಿದ್ದರು. ದಕ್ಷತೆಯಿಂದ ಆಡಳಿತವನ್ನು ನಡೆಸಿದರು. ಶ್ರೀ ಕೆ.ಸಿ. ರೆಡ್ಡಿಯವರ ಕಾಲದಲ್ಲಿ 9 ಜನ ಮಂತ್ರಿಗಳಿಂದ ಪ್ರಾರಂಭವಾಗಿ ಕಡೆಗೆ 6 ಜನ ಮಂತ್ರಿಗಳಾದರು. ಶ್ರೀ ಹನುಮಂತಯ್ಯನವರ ಕಾಲದಲ್ಲಿ 6 ಜನ ಮಂತ್ರಿಗಳಿದ್ದರು. ವಿಶಾಲ ಮೈಸೂರು ಆದ ನಂತರ ಮಂತ್ರಿಗಳ ಸಂಖ್ಯೆ 12 ಕ್ಕೆ ಏರಿತು. ಶ್ರೀ ಜತ್ತಿಯವರ ಕಾಲದಲ್ಲಿ 14ಕ್ಕೆ ಏರಿತು. ಆದರೆ ಶ್ರೀ ನಿಜಲಿಂಗಪ್ಪನವರು 192 ರಲ್ಲಿ ಮಂತ್ರಿಗಳು ಮತ್ತು ಉಪಮಂತ್ರಿಗಳ ಸಂಖ್ಯೆ 28ಕ್ಕೆ ಏರಿಸಿದರು. ಅಧಿಕಾರ ದಾಹವನ್ನು ಶಾಂತ ಮಾಡಲು ಇಷ್ಟು ಜನರನ್ನು ತೆಗೆದುಕೊಳ್ಳಬೇಕಾಯಿತು. ನಾನು ಒಂದು ಸಲ ವಿಧಾನ ಸಭೆಯಲ್ಲಿ ನಾನೇ ರಚಿಸಿದ ಒಂದು ಶ್ಲೋಕವನ್ನು ಕೆಳಕಂಡಂತೆ ಹೇಳಿದೆನು.

ಅಧಿಕಸ್ಯ ಅಧಿಕ ಸಚಿವಂ ।
ಅಧಕಸ್ಯ ಅಧಿಕ ಹಣವ್ಯಯಂ ।।
ಅಧಿಕಸ್ಯ ಅಧಿಕ ತೆರಿಗೆಗಳಿಂ।
ರಾಹುಬಲಂ ಕೇತುಬಲಂ ।।

ಸರ್ಕಾರಕ್ಕೆ ಖರ್ಚು ಜಾಸ್ತಿಯಾಯಿತು. ಸಿಬ್ಬಂದಿ ಬೆಳೆಯಿತು. ಸಂಚಾರ ವಿಸ್ತಾರವಾಯಿತು. ತೆರಿಗೆಗಳು ಮಿತಿಮೀರಿದವು. ಭೂಕಂದಾಯವು ಹೆಚ್ಚಾಯಿತು. ಅನೇಕ ಹೊಸ ತೆರಿಗೆಗಳು ಜನ್ಮತಾಳಿದವು. ಶ್ರೀ ಕಾಮರಾಜರ ಯೋಜನೆ ನಿಷ್ಫಲವಾಯಿತು.

ವಿಶಾಲ ಮೈಸೂರಿನ ಅಭಿವೃದ್ಧಿ ಕಾರ್ಯವು ಮಹತ್ಕಾರ್ಯವೆಂದೂ ಇದನ್ನು ನೆರವೇರಿಸಲು ದಕ್ಷತೆಯಿಂದ ಕೂಡಿದ ಸುಭದ್ರವಾದ ಸರ್ಕಾರಬೇಕೆಂದೂ ಹಿಂದೆಯೇ ಹೇಳಿದ್ದೇನೆ. ಆದರೆ ಆಡಳಿತಗಾರರಲ್ಲಿ ಭಿನ್ನಾಭಿಪ್ರಾಯಗಳೂ ಒಡಕುಗಳೂ ಹೆಚ್ಚಾಗುತ್ತಿವೆ. ಕಾಂಗ್ರೆಸ್ ವಲಯದಲ್ಲಿ ಒಳಜಗಳಗಳು ಹೆಚ್ಚಾಗುತ್ತಿವೆ. ಬಹಳ ದಿವಸಗಳಿಂದಲೂ ಕಾಂಗ್ರೆಸ್ಸಿಗೆ ದುಡಿದ ಮಹನೀಯರು ತಮ್ಮ ಅಸಮಾಧಾನವನ್ನು ಬಹಿರಂಗವಾಗಿ ವ್ಯಕ್ತಪಡಿಸುತ್ತಿದ್ದಾರೆ. ಶ್ರೀ ಟಿ. ಸುಬ್ರಹ್ಮಣ್ಯಂರವರು ರಾಜೀನಾಮೆ ಸಲ್ಲಿಸಿದ್ದಾರೆ. ಶ್ರೀ ಹನುಮಂತಯ್ಯನವರು ಸ್ವರಾಜ್ಯ ಪಕ್ಷವೆಂಬ ಹೊಸ ಪಕ್ಷವನ್ನು

ಸ್ಥಾಪಿಸುವುದಾಗಿ ಹೇಳುತ್ತಿದ್ದಾರೆ. ಶ್ರೀ ಚನ್ನಯ್ಯನವರು ಕಾಂಗ್ರೆಸ್ ಸದಾಚಾರ ಪಾರ್ಟಿಯನ್ನು ಕಟ್ಟುವುದಾಗಿ ಹೇಳುತ್ತಿದ್ದಾರೆ. ಮೈಸೂರಿನ ಮಕ್ಕಳು ಶಿಸ್ತು ಮತ್ತು ಸತ್ಯದಿಂದ ಕೂಡಿದ ಸರ್ಕಾರವನ್ನು ನೋಡುವುದು ಇನ್ನೂ ಬಹು ದೂರವಿದೆ.

ಭವಿಷ್ಯವು ಏನಿರುತ್ತೆಂಬುದು ಈಗಲೇ ಹೇಳಲು ಸಾಧ್ಯವಿಲ್ಲ. ನಾವುಗಳೆಲ್ಲರೂ ವಿಶಾಲ ಮೈಸೂರಿನ ನಿರ್ಮಾಣಕ್ಕೆ ಬಹಳವಾಗಿ ದುಡಿದಿದ್ದೇವೆ. ಆದರೆ ಇಲ್ಲಿಯ ಪ್ರಜೆಗಳಿಗೆ ಒಬ್ಬರಲ್ಲೊಬ್ಬರಿಗೆ ಅಪನಂಬಿಕೆ ಹುಟ್ಟುತ್ತಿದೆ. ಹಳೆಯ ಮೈಸೂರಿನವರಲ್ಲಿ ಕೆಲವರು ನಿರಾಶಾ ಬಾವನೆಯನ್ನು ತೋರಿಸುತ್ತಿದ್ದಾರೆ. ಸರ್ಕಾರಿ ಅಧಿಕಾರವೆಲ್ಲಾ ಹೊಸದಾಗಿ ಮೈಸೂರಿಗೆ ಸೇರಿದವರಲ್ಲಿ ಕೇಂದ್ರಿಕೃತವಾಗಿದೆ ಎಂದು ಕೆಲವರ ಭಾವನೆಯಾಗಿದೆ. ಮುಖ್ಯವಾದ ಸರ್ಕಾರಿ ಖಾತೆಗಳೆಲ್ಲಾ ಹೊಸದಾಗಿ ಮೈಸೂರಿಗೆ ಸೇರಿದವರ ಕೈಯಲ್ಲಿ ಎಂಬುದು ಇನ್ನೂ ಕೆಲವರ ಭಾವನೆ. ಇದರಿಂದ ಹಳೆಯ ಮೈಸೂರಿನವರಿಗೆ ನ್ಯಾಯನೀತಿಗಳು ಸಿಗುತ್ತಿಲ್ಲವಾಗಿ ಎಲ್ಲೆಲ್ಲಿಯೂ ಬೇಸರ ವ್ಯಕ್ತವಾಗುತ್ತಿದೆ. ವಿಶಾಲ ಮೈಸೂರಿನ ತಳಹದಿ ಭದ್ರವಾಗಬೇಕಾದರೆ ಎಲ್ಲರ ನಂಬಿಕೆಗೂ ಪಾತ್ರವಾದ ಸರ್ಕಾರವಿರಬೇಕು ಮತ್ತು ಕೋಮುವಾರು ಭಾವನೆಗೆ ಎಳ್ಳಷ್ಟೂ ಅವಕಾಶವಿರಬಾರದು.

ಆಹಾರದ ಬೆಳವಣಿಗೆ ಹೆಚ್ಚಿಗೆ ಆಗದಿದ್ದರೂ, ಭ್ರಷ್ಟಾಚಾರ ಬೆಳೆಯುತ್ತಾ ಇದೆ. ಭ್ರಷ್ಟಾಚಾರವು ದೇಶಾದ್ಯಂತ ಹರಡಿ ಘೋರ ಜಾಡ್ಯವಾಗಿದೆ. ಲಂಚರುಷುವತ್ತುಗಳು ಪೂರ್ವಕಾಲದಲ್ಲೂ ಇದ್ದವು. ಆದರೆ ಈಗಿನಷ್ಟು ಪ್ರಬಲವಾಗಿ ಮತ್ತು ಸಮಾಜಕಂಟವಾಗಿರಲಿಲ್ಲ. ಈಗಿನ ಪ್ರಜಾಸರ್ಕಾರ ಬಂದಮೇಲಂತೂ ಅವುಗಳ ಪ್ರಭಾವ ಮತ್ತು ವ್ಯಾಪ್ತಿ ಮಿತಿಮೀರಿದೆ. ಲಂಚರುಷುವತ್ತುಗಳನ್ನು ನಿರ್ಮೂಲ ಮಾಡಲು ಸರಿಯಾದ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಹಿಂದೆ ಪ್ರಜಾಪ್ರತಿನಿದಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳಲ್ಲಿ ಅನೇಕ ಚರ್ಚೆಯಾಗಿದ್ದಿತು. ಆದರೆ ಈಗ ಕೇಂದ್ರ ಸರ್ಕಾರದವರು ಕಣ್ಣು ನ್ಯಾಯವಿಧಾಯಕ ಸಭೆಗಳಲ್ಲಿ ಅನೇಕ ಚರ್ಚೆಯಾಗಿದ್ದಿತು. ಆದರೆ ಈಗ ಕೇಂದ್ರ ಸರ್ಕಾರದವರು ಕಣ್ಣು ತೆರೆದಿದ್ದಾರೆ. ಕೇಂದ್ರ ಗೃಹ ಮಂತ್ರಿ ಶ್ರೀ ಗುಲ್ಜಾರಿಲಾಲ್‌ನಂದಾರವರು ಭ್ರಷ್ಟಾಚಾರವನ್ನು ಎರಡು ವರ್ಷಗಳಲ್ಲಿ ನಿರ್ಮೂಲ ಮಾಡಿದ್ದಲ್ಲಿ ತಾವು ತಮ್ಮ ಸ್ಥಾನಕ್ಕೆ ರಾಜೀನಾಮೆಯನ್ನು ಸಲ್ಲಿಸುವುದಾಗಿ ಹೇಳಿದರು. ಇದಕ್ಕೋಸ್ಕರ ಕೇಂದ್ರ "Vigilance Commission " ಎಂಬ ಹುದ್ದೆಯನ್ನು ಸ್ಥಾಪಿಸಿದ್ದಾರೆ ಈ ಪದವಿಗೆ ನಮ್ಮ ಮೈಸೂರಿವರೇ ಆದ ನಿವೃತ್ತ ಶ್ರೇಷ್ಠ ನ್ಯಾಯಧೀಶ ಶ್ರೀ ನಿಟ್ಟೂರು ಶ್ರೀನಿವಾಸರಾಯರು ನೇಮಕವಾಗಿದ್ದಾರೆ, ಪ್ರತಿಯೊಂದು ಪ್ರಾಂತ್ಯಕ್ಕೂ ಇದೇ ರೀತಿಯಾಗಿ ಒಬ್ಬ ಉನ್ನತ ಅಧಿಕಾರಿಯನ್ನು ನೇಮಿಸುವ ಯೋಚನೆ ಇದೆ. ಇದುವರೆಗೂ ನಮ್ಮ ಸಂಸ್ಥಾನದಲ್ಲಿ ಲಂಚ ನಿರ್ಮೂಲನ ಕೆಲಸಕ್ಕಾಗಿ ಒಬ್ಬ ಪ್ರತ್ಯೇಕ ಅಧಿಕಾರಿ ಇದ್ದರು. ಮತ್ತು ಅವರ ಸಹಾಯಕ್ಕಾಗಿ ತಕ್ಕ ಸಿಬ್ಬಂದಿಯೂ ಇದ್ದಿತು. ಆಗಿಂದಾಗ್ಗೆ ಒಂದೊಂದು ಲಂಚದ ಆಪಾದನೆಯನ್ನು ಪರಿಶೀಲಿಸಿ ತಪ್ಪಿತಸ್ಥರನ್ನು ಶಿಕ್ಷೆಗೆ ಗುರಿಮಾಡುತ್ತಿದ್ದರು. ಆದರೂ ಭ್ರಷ್ಟಾಚಾರ ಅಧಿಕ ಪ್ರಮಾಣದಲ್ಲಿ ಬೆಳೆಯುತ್ತ ಬಂದಿದೆ. ಈಗ ಸ್ಥಾಪಿಸಲಿರುವ ಲಂಚ ನಿವಾರಣಾ ಹುದ್ದೆಗಳು ಯಶಸ್ವಿಯಾಗಿ ಕೆಲಸ ಮಾಡಬಲ್ಲವೆ ? ಅಥವಾ ಶ್ರೀನಂದ ಅವರು ಎರಡು ವರ್ಷಗಳ ನಂತರ ತಮ್ಮ ಪದವಿಗೆ ರಾಜೀನಾಮೆ ಕೊಟ್ಟಾರೇ ? ಕಾಲಾಯ ತಸ್ಮೈ ನಮಃ !

ಲಂಚವೆಂಬುದು ಒಂದು ವ್ಯಾಧಿ : ಗುಪ್ತ ಕ್ಷಯರೋಗವಾಗಿದೆ. ಇದನ್ನು ನಿವಾರಿಸಲು ಅದರ ಕಾರಣ ಮತ್ತು ಮೂಲವನ್ನು ಕಂಡುಹಿಡಿಯಬೇಕು. ಭ್ರಷ್ಟಾಚಾರವು ಇಷ್ಟೊ ತೀವ್ರ ಜಾಡ್ಯವಾಗಲು ವಿಮರ್ಶೆ ಮಾಡಬೇಕು.

ಪ್ರಜಾಪ್ರಭುತ್ವವು ಬರುವುದಕ್ಕೆ ಮುಂಚೆ ಲಂಚರುಷುವತ್ತಗಳಿದ್ದವು. ಆದರೆ ಅವಕ್ಕೆ ಮಿತಿ ಇದ್ದಿತು. ಅದಿಕಾರದ ಕೆಳದರ್ಜೆಯವರಲ್ಲಿ ಕೆಲಮಟ್ಟಿಗೆ ವ್ಯಾಪಿಸಿದ್ದಿತು. ಪೊಲೀಸ್ ಅಬ್ಕಾರಿ ಮರಾಮತ್ತು, ಸಬ್‌ರಿಜಿಸ್ಟ್ರಾರ್ ಇವರ ಆಫೀಸರುಗಳಲ್ಲಿ ಲಂಚವು ಇದ್ದಿತು. ಇದಕ್ಕೆ ಮಾಮೂಲು ಎನ್ನುತ್ತಿದ್ದರು. ಗುಮಾಸ್ತರೂ , ಜವಾನರೂ ಬಕ್ಷೀಸುಗಳ ರೂಪವಾಗಿ ತೆಗೆದುಕೊಳ್ಳುತ್ತಿದ್ದರು. ಆದರೆ ಉನ್ನತ ಅಧಿಕಾರಿಗಳು, ಗೆಜೆಟೆಡ್ ಆಫೀಸರುಗಳು, ಮೈಸೂರು ಸಿವಿಲ್ ಸರ್ವಿಸ್ಸಿಗೆ ಸೇರಿದ ಅಧಿಕಾರಿಗಳು ಶಿಸ್ತು ಮತ್ತು ಪ್ರಾಮಾಣಿಕತೆಯಿಂದ ಕೆಲಸ ಮಾಡುತ್ತಿದ್ದರು. ಕೆಳದರ್ಜೆಯಿಂದ ಬಂದ ಅಮಲ್ದಾರರಲ್ಲಿ ಕೆಲವರು ಲಂಚದ ಆಸೆಗೆ ಒಳಪಡುತ್ತಿದ್ದರು. ಆದರೆ ನೇರವಾಗಿ ನೇಮಿಸಲ್ಪಟ್ಟ ಪ್ರೊಬೆಷನರುಗಳಲ್ಲಿ ಬಹುಭಾಗದವರು ನಿಷ್ಠಾವಂತರಾಗಿ ಪ್ರಾಮಾಣಿಕರಾಗಿದ್ದರು. ಭ್ರಷ್ಟಾಚಾರವು ಹೆಚ್ಚಾಗುತ್ತಾ ಬಂದುದು ಎರಡನೆಯ ಮಹಾಯುದ್ಧದ ಕಾಲದಿಂದ, ಈ ಯುದ್ಧದ ದೆಶೆಯಿಂದ ಆಹಾರದ ಅಭಾವ ಜಾಸ್ತಿಯಾಯಿತು: ಅದರ ಬೆಲೆಯೂ ಹೆಚ್ಚಿತು. ಆಹಾರವನ್ನು ನಿಖರರಾದ ಬೆಲೆಗೆ ಮಾರಲು ಸರಕಾರವು ಹತೋಟಿಗಳನ್ನು ಮತ್ತು ನಿಯಂತ್ರಣಗಳನ್ನು ವಿಧಿಸಬೇಕಾಯಿತು. ಹೊಸದಾಗಿ ಆಹಾರ ಇಲಾಖೆಯನ್ನು (Food Department) ಸ್ಥಾಪಿಸಲಾಯಿತು. ಆಗ ಬಹು ಜನ ವರ್ತಕರು ಆಹಾರ ಧಾನ್ಯಗಳನ್ನು ಶೇಖರಿಸಿ, ಮೈಸೂರಿನಿಂದ ರಫ್ತು ಮಾಡಿ, ಹೊರಗಡೆ ಮಾರಾಟದಿಂದ ಅಧಿಕ ಲಾಭ ಸಂಪಾದಿಸುತ್ತಿದ್ದರು. ಆಗ ಸರ್ಕಾರದವರು ಮೈಸೂರು ಸೀಮೆಯಿಂದ ಹೊರಗಡೆಗೆ ಆಹಾರ ಪದಾರ್ಥಗಳನ್ನು ರಫ್ತು ಮಾಡಕೂಡದೆಂದು ಒಂದು ಆಜ್ಞೆ ಹೊರಡಿಸಿದರು. ಮೈಸೂರಿನ ಒಳಗಡೆ ಮಾರಾಟ ಮಾಡಲು ವರ್ತಕರು ಸರ್ಕಾರದಿಂದ ಲೈಸೆನ್ಸುಗಳನ್ನು ಪಡೆಯಬೇಕೆಂದೂ ನಿಖರರಾದ ಬೆಲೆಗ ಮಾರಾಟಮಾಡಬೇಕೆಂದೂ ಕಾನೂನು ಜಾರಿಗೆ ತಂದರು. ಲೈಸೆನ್ಸುಗಳನ್ನು ಪಡೆಯಲು ಅನೇಕ ವರ್ತಕರು ಮುಂದೆ ಬಂದರು. ಲೈಸೆನ್ಸು ಪಡೆದವನಿಗೆ ಹಣ ಸಂಪಾದಿಸಲು ಅನೇಕ ಅವಕಾಶಗಳು ದೊರೆಯುತ್ತಿದ್ದುದರಿಂದ, ಇದನ್ನು ಪಡೆಯಲು ಲೈಸೆನ್ಸು ಕೊಡುವ ಅಧಿಕಾರಿಗಳಿಗೆ ಹೇರಳವಾಗಿ ಲಂಚವನ್ನು ಕೊಡಲು ಪ್ರಾರಂಭಿಸಿದರು. ತಮಗೆ ಬೇಕಾದವರಿಗೆ ಲೈಸೆನ್ಸುಗಳನ್ನು ಕೊಟ್ಟು ಸಾವಿರಾರು ರೂಪಾಯಿ ಸಂಪಾದಿಸುವ ಯೋಗ, ಲೈಸೆನ್ಸು ಕೊಡುವ ಅಧಿಕಾರಿಗಳಿಗೆ ದೊರೆಯಿತು. ಲೈಸೆನ್ಸು ಕೊಡುವ ಒಬ್ಬ ಉನ್ನತಾಧಿಕಾರಿಯ ಮನೆಯಲ್ಲಿ ಮದುವೆಯಾದರೆ ವಧೂವರರಿಗೆ ಸುಮಾರು ಐದು ಸಾವಿರ ರೂಪಾಯಿ ಬೆಲೆಬಾಳುವ ಪಾರಿತೋಷಕಗಳು ಬರುತ್ತಿದ್ದವು. ಇವೆಲ್ಲ ಬಹುಭಾಗ ಲೈಸೆನ್ಸು ಪಡೆದವರಿಂದ ಬಂದವುಗಳು. ಈ ದುಷ್ಟವೃತ್ತಿಗೆ ಕೆಲವು ಉನ್ನತ ಅಧಿಕಾರಿಗಳು ತುತ್ತಾದರು.

ರೈತರು ತಾವು ಬೆಳೆದ ಧಾನ್ಯವನ್ನು ನೇರವಾಗಿ ಮಾರಾಟ ಮಾಡಲು ಅವಕಾಶವಿರಲಿಲ್ಲ. ಅವರು ತಮಗೆ ಕೊಂಚ ಉಳಿಸಿಕೊಂಡು ಹೆಚ್ಚಿಗೆಯಾದುದನ್ನು ಸರ್ಕಾರಕ್ಕೆ ನಿಖರವಾದ ಬೆಲೆಗೆ ಮಾರಬೇಕಾಗಿತ್ತು. ಆ ಧಾನ್ಯವನ್ನು ಲೈಸೆನ್ಸುದಾರರಿಗೆ ಮಾರಾಟ ಮಾಡಲು ಕೊಡಲಾಗುತ್ತಿತ್ತು (ಹಾವನ್ನು ಹೊಡೆದು ಹದ್ದಿಗೆ ಹಾಕಿದ ಹಾಗೆ) ಈ  ಪರಿಸ್ಥಿತಿಯಲ್ಲಿ ರೈತರು ಲಂಚವನ್ನು ಕೊಟ್ಟು ಆಹಾರ ಧಾನ್ಯವನ್ನುಳಿಸಿಕೊಳ್ಳುತ್ತಿದ್ದರು.

ಲೈಸೆನ್ಸುದಾರರರು ನಾಮಮಾತ್ರಕ್ಕೆ ಸ್ವಲ್ಪಭಾಗವನ್ನು ಜನರಿಗೆ ಸರ್ಕಾರವು ನಿಷ್ಕರ್ಷಿಸಿದ ಬೆಲೆಗೆ ಮಾರಿ, ಉಳಿದುದನ್ನು ಕಾಳಸಂತೆಯಲ್ಲಿ ಜನರಿಗೆ ಹೆಚ್ಚಿನ ಬೆಲೆಗೆ ಮಾರುತ್ತಿದ್ದರು. ಅಲ್ಲದೆ ಪಕ್ಕದ ಮದ್ರಾಸು, ಬೊಂಬಾಯಿ ಪ್ರಾಂತ್ಯಗಳಿಗೆ ಸಾಗಿಸಿದರೆ ಇನ್ನೂ ಅಧಿಕ ಬೆಲೆಯು ಸಿಗುತ್ತಿತ್ತು. ಆದ್ದರಿಂದ ಹೊರಗಡೆ ಸಾಗಿಸಲು ಅಧಿಕಾರಿಗಳ ಮತ್ತು ಪೊಲೀಸರ ಸಹಕಾರವನ್ನು ಲಂಚದ ಮೂಲಕ ಪಡೆದು, ಮಾಲನ್ನು ಹೊರಗಡೆಗೆ ಸಾಗಿಸಿ, ಲಕ್ಷಾಂತರ ರೂಪಾಯಿಗಳನ್ನು ಗಳಿಸಿದರು. ಈ ರೀತಿಯಾಗಿ ಅಧಿಕಾರಿಗಳು, ಪೊಲೀಸ್ ನೌಕರರು, ಲೈಸೆನ್ಸ್‌ದಾರರು ಬೇಕಾದಷ್ಟು ಗಳಿಸಿಕೊಂಡರು. ಕಷ್ಟ ಅನುಭವಿಸುತ್ತಿದ್ದವನು, ತಾನು ಬೆಳೆದ ಅಲ್ಪಬೆಲೆಗೆ ಮಾರಿ, ತನಗೆ ಬೇಕಾದ ಮಾಲಿಗೆ ಹೆಚ್ಚಿಗೆ ಬೆಲೆ ಕೊಡುತ್ತಿದ್ದ ಬಡ ರೈತ, ಸರ್ಕಾರದವರು ಉಡುವ ಬಟ್ಟೆ ರೇಷ್ಮೆ ಮತ್ತು ಸೌದೆಯ ಮೇಲೆ ನಿಯಂತ್ರಣವನ್ನು (Control) ವಿಧಿಸಿದರು. ಹತೋಟಿಗಿಂತ ಮುಂಚೆ, ಬೆಲೆ ಸ್ವಲ್ಪ ಜಾಸ್ತಿ ಇದ್ದರೂ ಎಲ್ಲಾ ಕಡೆಯಿಂದಲೂ ಸರಕುಗಳು ದೊರೆಯುತ್ತಿದ್ದವು. ಸರ್ಕಾರದ ಹತೋಟಿ ಜಾರಿಗೆ ಬಂದ ತಕ್ಷಣವೇ ಇವೆಲ್ಲವೂ ಮಾಯವಾಗಿ ಕಾಳಸಂತೆ ಆರಂಭವಾಯಿತು. ಅಭಾವ ಬಂದಿತು. ಅವಶ್ಯಕವಿದ್ದವರು ಕಾಳಸಂತೆಯಲ್ಲಿ ಲೈಸೆನ್ಸುದಾರರು ಕೇಳಿದ ಬೆಲೆ ಕೊಟ್ಟು ಮಾಲು ಪಡೆಯುತ್ತಿದ್ದರು . ಸೌದೆ ಮೇಲೆ ಹತೋಟಿ ಆಜ್ಞೆ ಬಂದ ಕೂಡಲೇ ಡಿಪೋಗಳಲ್ಲಿದ್ದ ಸೌದೆ ಎಲ್ಲಾ ಮಾಯವಾಯಿತು. ಅಡಿಗೆ ಮಾಡಲು ಸೌದೆ ಇಲ್ಲದೆ ಬೆಂಗಳೂರು ನಗರದಲ್ಲಿ ಕೆಲವು ದಿವಸ ಹಳೇ ಕುರ್ಚಿ ಮತ್ತು ಮೇಜುಗಳನ್ನು ಒಡೆದು ಅಡಿಗೆ ಮಾಡಬೇಕಾಯಿತು.

ರೇಷ್ಮೆ ಹತೋಟಿ ಹಾಕಿದುದು ಲಂಚಕೋರರಿಗೆ ಬಹಳ ಅನುಕೂಲವಾಯಿತು. ಬೆಂಗಳೂರು ಮೈಸೂರುಗಳಲ್ಲಿ ರೇಷ್ಮೆಯ ಖರೀದಿಯು ಪೌಂಡು ಒಂದಕ್ಕೆ 20 ರೂಪಾಯಿ ಇದ್ದಿತು; ಮೈಸೂರಿನ ಹೊರಗಡೆ 30 ರೂಪಾಯಿನಿಂದ 40 ರೂಪಾಯಿಗಳವರೆಗಿದ್ದಿತು. ಕಳ್ಳತನದಿಂದ ಹೊರಗಡೆಗೆ ರೇಷ್ಮೆ ಸಾಗಿಸುವ ಕೆಲಸ ಪ್ರಾರಂಭವಾಯಿತು. ಪೊಲೀಸರಿಗೂ, ಅಧಿಕಾರಿಗಳಿಗೂ ಇದರಲ್ಲಿ ಪಾಲು ಸಿಗುವ ಅವಕಾಶ ದೊರೆಯಿತು. ಕೆಲವು ಉನ್ನತ ಅಧಿಕಾರಿಗಳು ತಮ್ಮ ಕಾರಿನಲ್ಲಿ ರೇಷ್ಮೆಯನ್ನು ಹೊರಗಡೆ ಸಾಗಿಸುತ್ತಿದ್ದಾರೆಂದು ಪುಕಾರು ಸಹ ಬಂದಿತು. ಈ ನಿಯಂತ್ರಣಗಳು ಮತ್ತು ಲೈಸೆನ್ಸುಗಳಿಂದ ಬೆಲೆಗಳು ಹೆಚ್ಚಿದ್ದವಲ್ಲದೆ ದೇಶವು ಭ್ರಷ್ಟಾಚಾರದ ತೌರುಮನೆಯಾಯಿತು.

ಲೈಸೆನ್ಸು ಪಡೆದ ವರ್ತಕರಿಂದ ಸಮರ್ಪಕವಾಗಿ ಆಹಾರ ಸರಬರಾಜು ಆಗುತ್ತಿಲ್ಲವೆಂದು ತಿಳಿದ ಸರ್ಕಾರದವರು ತಾವೇ ಸ್ವತಃ ಆಹಾರ ಧಾನ್ಯಗಳನ್ನು ಮಾರುವ ಕಾರ್ಯವನ್ನು ಕೈಗೊಂಡರು. ಇದಕ್ಕೆ ಒಂದು ಪ್ರತ್ಯೇಕ ಇಲಾಖೆಯನ್ನು ಏರ್ಪಡಿಸಲಾಯಿತು. ದೊಡ್ಡ ಸಿಬ್ಬಂದಿಯೂ ನೇಮಿಸಲ್ಪಟ್ಟಿತು. ಎಲ್ಲಾ ಕಡೆಯೂ ಆಹಾರ ಧಾನ್ಯಗಳನ್ನು ಮಾರುವ ಡಿಪೋಗಳನ್ನು ತೆರೆಯಲಾಯಿತು. ಅಲ್ಲಿ ಗುಮಾಸ್ತರನ್ನೂ ಹಮಾಲರನ್ನೂ ನೇಮಿಸಲಾಯಿತು. ಇವರೆಲ್ಲರೂ ಕ್ರಮೇಣ ಡಿಪೋದಲ್ಲಿ ಸಾಕಿದ ಹೆಗ್ಗಣಗಳಾದರು. ಈ ವಿಷಯವು ಎಲ್ಲರ ಅನುಭವದಲ್ಲಿದೆ. ಡಿಪೋದಲ್ಲಿ ಕೆಲಸ ಮಾಡುತ್ತಿದ್ದರೂ ಗಡಿ ಕಾಯುತ್ತಿದ್ದ ಪೊಲೀಸಿನವರೂ ಆಹಾರ ಧಾನ್ಯವನ್ನು ಬೇರೆ ಕಡೆಯಿಂದ ಕೊಂಡು ತರುವ ಅಧಿಕಾರಿಗಳೂ ವಿಶೇಷವಾಗಿ ಹಣ ಗಳಿಸಿದರು.

ಜನರ ಸಾತ್ವಿಕ ನೀತಿಯನ್ನು ಹಾಳು ಮಾಡಿ, ಲಂಚ ರುಷುವತ್ತುಗಳನ್ನು ಎಲ್ಲಾ ಕಡೆ ಹಬ್ಬುವ ಹಾಗೆ ಮಾಡಿದ ಇನ್ನೊಂದು ಕಾರಣ ಪಾನನಿರೋಧವನ್ನು ಜಾರಿಗೆ ತಂದದ್ದು. ಇದು ಜಾರಿಗೆ ಬಂದ ಕೂಡಲೇ ದೇಶಾದ್ಯಂತ ಕಳ್ಳಬಟ್ಟಿ ಸಾರಾಯಿ ಮಾಡಲು ಪ್ರಾರಂಭವಾಯಿತು. ಪೊಲೀಸನವರಿಗೆ ಮಾಮೂಲುಗಳು, ಲಂಚಗಳು ಮಾಹೆಯಾನ ಆದಾಯವಾಯಿತು. ಗ್ರಾಮದ ಮುಖಂಡರಿಗೂ, ಗ್ರಾಮಾಧಿಕಾರಿಗಳೂ ಮಾಮೂಲುಗಳಾದವು. ಈಚೆಗೆ ನೀರಾ ಕೇಂದ್ರಗಳು ಏರ್ಪಟ್ಟವು. ಇವು ಹೆಂಡದ ಕೇಂದ್ರಗಳಾಗಿವೆ. ನೀರಾ ಕೇಂದ್ರಗಳಲ್ಲಿ ಯಥೇಚ್ಛವಾಗಿ ಹೆಂಡವು ಸಿಗುತ್ತದೆ. ಈ ಕೇಂದ್ರಗಳಲ್ಲಿ ಪ್ರತಿಯೊಬ್ಬ ಪೊಲೀಸಿನವನಿಗೂ, ಇತರ ಪೊಲೀಸ್ ಅಧಿಕಾರಿಗಳೂ ಪ್ರತಿ ತಿಂಗಳು ಕೊಡಬೇಕಾದ ಲಂಚವು ನಿಗದಿಯಾಗಿರುತ್ತದೆ, ಆಯಾ ಗ್ರಾಮದ ಮುಖಂಡರಿಗೆ ಕ್ರಮವಾಗಿ ಮಾಮೂಲುಗಳು ದೊರೆಯುತ್ತಿವೆ.

ಕಂಟ್ರೋಲ್ ಪರ್ಮಿಟ್‌ಗಳಿಂದ ಭ್ರಷ್ಟಾಚಾರ ಜಾಸ್ತಿಯಾಗುತ್ತವೆಂಬುದಕ್ಕೆ ಈಗ ಒಂದು ವರ್ಷದ ಹಿಂದೆ ಜಾರಿಗೆ ಬಂದ ಬಂಗಾರದ ಹತೋಟಿಯೇ ಒಂದು ನಿದರ್ಶನವಾಗಿದೆ. ಬೆಂಗಳೂರಿನಲ್ಲಿ ಬಂಗಾರದ ಒಡವೆ ಮಾಡುವವನೊಬ್ಬನನ್ನು ವಿಚಾರಿಸಲಾಗಿ ಅವನು "ನಾವಾಗಲೇ ಇದಕ್ಕೆ ಸರಿಯಾದ ಏರ್ಪಾಟು ಮಾಡಿದ್ದೇವೆ. ಇದಕ್ಕೆ ಸಂಬಂಧಪಟ್ಟ ಅಧಿಕಾರಿಗಳಿಗೆ ತಿಂಗಳಿಗೆ ಮಾಮೂಲು ನಿರ್ಧರಿಸಿರುತ್ತೇವೆ, ಅವರು ನಮ್ಮ ಅಂಗಡಿ ತನಿಖೆಗೆ ಬರುವುದಕ್ಕಿಂತ ಮುಂಚೆ ನಮಗೆ ಎಚ್ಚರಿಗೆ ಕೊಡುತ್ತಾರೆ" ಎಂದು ಹೇಳಿದನು.

## ಹಿಂದಿನ ಅಧಿಕಾರಿ ಇಂದು ಕೋಟ್ಯಾಧೀಶ

ಭ್ರಷ್ಟಾಚಾರ ಸರ್ಕಾರಿ ನೌಕರರಲ್ಲೂ, ಅಧಿಕಾರಿಗಳಲ್ಲಿಯೂ ವ್ಯಾಪಕವಾಗಿರುವುದನ್ನು ತಿಳಿಸಿರುತ್ತೇನೆ. ಸಾರ್ವಜನಿಕರಲ್ಲಿಯೂ ವರ್ತಕರಲ್ಲಿಯೂ ಭ್ರಷ್ಟಾಚಾರವು ಉಗ್ರರೂಪ ತಾಳಲು ರಾಜಕೀಯವನ್ನೇ ಕಸುಬಾಗಿಟ್ಟುಕೊಂಡಿರುವ ರಾಜಕೀಯ ಚತುರರೇ (Politicians) ಮುಖ್ಯ ಕಾರಣರು. ಪ್ರಜಾಪ್ರಭುತ್ವವು ಯಶಸ್ವಿಯಾಗಲು ಮೂರು ಅಂಗಗಳುಂಟು. 1. ಪ್ರಜೆಗಳು-ಪ್ರಧಾನಾಧಿಕಾರವು ಇವರಿಗೆ ಸೇರಿದ್ದು 2. ಅವರಿಂದ ಚುನಾಯಿತರಾದ ರಾಜಕೀಯ ಪ್ರತಿನಿಧಿಗಳು 3. ಪ್ರಜೆಗಳ ಪರವಾಗಿ ಆಡಳಿತ ನಡೆಸುವ ಸಚಿವರು. ಇವರೆಲ್ಲರೂ ಶಿಸ್ತಿನಿಂದಲೂ ಮತ್ತು ಪ್ರಾಮಾಣಿಕತೆಯಿಂದಲೂ ವರ್ತಿಸಿದರೆ ಪ್ರಜಾಪ್ರಭುತ್ವವು ಯಶಸ್ವಿಯಾಗಿ ನಡೆಯುತ್ತದೆ. ಇವರು ಅನೀತಿ ಮತ್ತು ಅಕ್ರಮ ಮಾರ್ಗಗಳನ್ನನ್ನುಸರಿಸಿದರೆ ಪ್ರಜಾಪ್ರಭುತ್ವವು ಭ್ರಷ್ಟಾಚಾರದ ತೌರುಮನೆಯಾಗುತ್ತದೆ.

ಪ್ರಜೆಗಳ ಪವಿತ್ರ ಕರ್ತವ್ಯವು ಪ್ರತಿನಿಧಿಗಳನ್ನು ಆರಿಸುವುದಾಗಿರುತ್ತೆ. ಆದರೆ ಈಗ ನಡೆಯುತ್ತಿರುವ ಚುನಾವಣೆಗಳು ಭ್ರಷ್ಟಾಚಾರದಿಂದ ತುಂಬಿ ತಳುಕುತ್ತಿವೆ. ಚುನಾವಣೆ ಬಂದರೆ ಅನೇಕರಿಗೆ ಹಬ್ಬ, ಹಣವನ್ನು ಸಂಪಾದಿಸಲು ಇದು ಅವರಿಗೆ ಸುಸಮಯ. ಮತದಾರರು ತಮ್ಮ ಮತವನ್ನು ವಿಕ್ರಯಿಸುತ್ತಾರೆ. ಸಾರಾಯಿ, ಹೆಂಡಗಳಿಗೆ ಮತವನ್ನು ಮಾರುತ್ತಾರೆ. ಏಜೆಂಟರುಗಳು ಎರಡು ಪಕ್ಷಗಳಿಂದಲೂ ಲಂಚ ತೆಗೆದುಕೊಳ್ಳುತ್ತಾರೆ. ಚುನಾವಣೆಗೆ ನಿಂತಿರುವವನು 30-40 ಸಾವಿರದವರೆಗೂ ಖರ್ಚು ಮಾಡುತ್ತಾನೆ. ಇದರಲ್ಲಿ ಬಹುಭಾಗ ಭ್ರಷ್ಟಾಚಾರಕ್ಕೆ ಖರ್ಚಾಗುತ್ತದೆ. ಈಗಿನ ಚುನಾವಣೆಗಳು ಪಾಪದ ಕೂಪವಾಗಿದೆ. ಪ್ರಜೆಗಳೇ

ಪ್ರಭುಗಳು, ಪ್ರಭುಗಳೇ ಭ್ರಷ್ಟಾಚಾರಿಗಳಾದರೆ, ಅವರ ಸೇವಕರು ಲಂಚಕೋರರಾಗುವುದರಲ್ಲಿ ಆಶ್ಚರ್ಯವೇನಿದೆ?

ಇನ್ನು ಆರಿಸಿ ಬಂದ ಪ್ರತಿನಿದಿಗಳು: ಅವರು ಅಪಾರವಾಗಿ ಹಣವನ್ನು ಖರ್ಚು ಮಾಡಿ ಸದಸ್ಯರಾಗಿ ಚುನಾಯಿತರಾಗಿರುತ್ತಾರೆ. ಈ ರೀತಿ ಖರ್ಚುಮಾಡಿದ ಹಣವನ್ನು ಸಂಪಾದಿಸಲು ಅವರು ಪ್ರಯತ್ನಿಸುತ್ತಾರೆ. ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಪ್ರತಿನಿದಿಗಳಾಗಿ ಆರಿಸಿ ಬಂದವರು ನಿಷ್ಠಾವಂತರಾಗಿಯೂ, ಸ್ವಾರ್ಥರಹಿತರಾಗಿಯೂ, ಸತ್ಯವಂತರಾಗಿಯೂ, ತ್ಯಾಗ ಮನೋಭಾವ ಉಳ್ಳವರಾಗಿಯೂ ಇರಬೇಕು. ಸದಸ್ಯರಾಗುವುದು ದೇಶಸೇವೆ ಮಾಡಲು ಒಂದು ಸದಾವಕಾಶ ದೊರೆತಂತೆ ಎಂದು ಭಾವಿಸಬೇಕೇ ಹೊರತು, ಸ್ವಾರ್ಥಸಾಧನೆಗಾಗಿ ತಮ್ಮ ಪವಿತ್ರ ಸ್ಥಾನವನ್ನು ದುರುಪಯೋಗಪಡಿಸುವುದಕ್ಕಲ್ಲವೆಂದು ತಿಳಿದುಕೊಳ್ಳಬೇಕು ಆದರೆ ಅನೇಕರು ತಮ್ಮ ಸ್ಥಾನವನ್ನು ದುರುಪಯೋಗ ಮಾಡಿ ಭ್ರಷ್ಟರಾಗುತ್ತಿದ್ದಾರೆ.

ಶ್ರೀ ಚಂಗಲರಾಯರೆಡ್ಡಿಯವರು ಮುಖ್ಯಮಂತ್ರಿಗಳಾಗಿದ್ದಾಗ ಪೆಟ್ರೋಲ್ ಮೇಲೆ ಹತೋಟಿ ಇದ್ದಿತು. ಮೋಟಾರು ಕಾರು, ಬಸ್ಸು, ಲಾರಿ ಇರುವವರಿಗೆ ಕೂಪನ್ ಮೂಲಕ ಪೆಟ್ರೋಲ್ ಹಂಚುತ್ತಿದ್ದರು. ಪೆಟ್ರೋಲಿನ ಅಭಾವವಿದ್ದುದರಿಂದ ಬಸ್ಸು ಮತ್ತು ಲಾರಿ ಮಾಲೀಕರು ಈ ಕೂಪನ್‌ಗಳನ್ನು ಗ್ಯಾಲನ್ ಒಂದಕ್ಕೆ ಎರಡು ಮೂರು ರೂಪಾಯಿ ಲಾಭಕೊಟ್ಟು ತೆಗೆದುಕೊಳ್ಳುತ್ತಿದ್ದರು. ಒಂದು ಗ್ಯಾಲನ್ ಕೂಪನ್ ಇದ್ದರೆ ಅನಾಯಾಸವಾಗಿ ಎರಡು ರೂಪಾಯಿ ಸಂಪಾದಿಸಲು ಅವಕಾಶವಿತ್ತು.

ವಿಧಾನಸಭೆ ಮತ್ತು ಪರಿಷತ್ತಿನ ಕೆಲವು ಸದಸ್ಯರು ಬೆಂಗಳೂರಿಗೆ ಬಂದಾಗ ತಲಾ 50 ರಿಂದ 100 ಗ್ಯಾಲನ್‌ವರೆಗೆ ಪೆಟ್ರೋಲ್ ಕೂಪನ್‌ಗಳನ್ನೂ ಮಂತ್ರಿಗಳಿಂದ ಪಡೆಯುತ್ತಿದ್ದರೂ. ಅನೇಕರಿಗೆ ಕಾರುಗಳೇ ಇರಲಿಲ್ಲ. ಅಂತೂ 100 ಗ್ಯಾಲನ್‌ಗೆ ಪರ್ಮಿಟ್ ಸಿಕ್ಕರೆ 200 ರೂ. ಸಂಪಾದನೆಯಾಗುತ್ತಿತ್ತು. ಸರ್ಕಾರದಲ್ಲಿ ಹೆಚ್ಚಿಗೆ ಪ್ರಭಾವವಿರುವವರಿಗೆ 100 ಗ್ಯಾಲನ್‌ವರೆಗೆ ಕೂಪನ್‌ಗಳು, ಪರ್ಮಿಟ್‌ಗಳು ಸಿಕ್ಕಿ 2000 ರೂಪಾಯಿಗಳವರೆಗೆ ಸಂಪಾದನೆ ಮಾಡಿಕೊಳ್ಳುವ ಅವಕಾಶವಾಗುತ್ತಿದ್ದಿತು. ಕೊನೆಗೆ ಈ ಹತೋಟಿಯನ್ನು ತೆಗೆದು ಹಾಕಿದಾಗ ಅನೇಕರು ಈ ಸಂಪಾದನೆಯ ಮಾರ್ಗ ತಪ್ಪಿಹೋದುದಕ್ಕಾಗಿ ಬಹಳ ಕಳವಳಪಟ್ಟರು.

ಬಸ್ಸುಗಳನ್ನು ಬಾಡಿಗೆ ನಡೆಸುವುದು ಬಹಳ ಲಾಭದಾಯಕವಾಗಿ ಕಂಡಿತು. ಅನೇಕ ಮಹನಾಯರು ತಮ್ಮ ರಾಜಕೀಯ ಪ್ರಭಾವವನ್ನು ಉಪಯೋಗಿಸಿ ಬಸ್ಸು ಪರ್ಮಿಟ್‌ಗಳನ್ನು ಪಡೆದು ಈಗ ದೊಡ್ಡ ಬಸ್ಸುಮಾಲೀಕರಾಗಿದ್ದಾರೆ. ಸಚಿವರಲ್ಲಿಗೆ ಹೋಗಿ ಶಿಫಾರಸ್ಸುಗಳನ್ನು ಮಾಡುವುದು, ಕಾಲೇಜುಗಳಲ್ಲಿ ಸೀಟು ಕೊಡಲು ಶಿಫಾರಸ್ಸು ಮಾಡಿ ಪ್ರತಿಫಲ ಪಡೆಯುವುದು ಕೆಲಸದ ವೃತ್ತಿಯಾಯಿತು.

ಪರ್ಮಿಟ್ ಮೂಲಕ ಸ್ಟೀಲ್ ಹಂಚುವುದು ಬಳಕೆಗೆ ಬಂತು. ಇದರ ಕೋಟಾ ಸಿಕ್ಕರೆ ಅದನ್ನು ಬೇರೆಯವರಿಗೆ ಮಾರಿ ಸಾವಿರಾರು ರೂಪಾಯಿಗಳನ್ನು ಸಂಪಾದಿಸುವ ಅವಕಾಶ ದೊರೆಯುವುದರಿಂದ ಅಧಿಕಾರಿಗಳು ಮತ್ತು ಖಾಸಗಿ ಮಹನೀಯರಿಬ್ಬರೂ ಭ್ರಷ್ಟಾಚಾರಿಗಳಾಗುವ ಸಂಭವವುಂಟಾಯಿತು.

ಲೋಕಸಭೆಯ ಪ್ರತಿಯೊಬ್ಬ ಸದಸ್ಯರಿಗೂ ವಾಸಿಸಲು ಒಂದು ಗೃಹವನ್ನು ಬಹಳ ಕಡಿಮೆ ಬಾಡಿಗೆಗೆ ಸರ್ಕಾರದಿಂದ ಕೊಡುತ್ತಾರೆ. ಈ ವಸತಿಗೃಹವು ಸದಸ್ಯರ ಉಪಯೋಗಕ್ಕಾಗಿಯೇ ಮೀಸಲಾಗಿದೆ. ಅದನ್ನು ಬೇರೆಯವರಿಗೆ ಬಾಡಿಗೆಗೆ ಕೊಡಕೂಡದಾಗಿ ನಿಯಮವಿದೆ. ಆದರೆ ಅನೇಕ ಸದಸ್ಯರು ಅವುಗಳನ್ನು ಬಾಡಿಗೆಗೆ ಬೇರೆಯವರಿಗೆ ಕೊಟ್ಟು ಲಾಭ ಸಂಪಾದಿಸುತ್ತಾರೆ. ಹೊಸದಾಗಿ ಬಾಡಿಗಗ ತಗೆದುಕೊಂಡವರು ಆ ಸದಸ್ಯರಿಗೆ ಪ್ರತಿದಿವಸ ಖರ್ಚು ಕೊಡಲು ಒಪ್ಪುತ್ತಾರೆ. ಈ ವಿಷಯ ತಾ: 18-1-64 ರಲ್ಲಿ ಲೋಕಸಭೆಯಲ್ಲಿ ಬಹಳ ಬಿಸಿಯಾಗಿ ಚರ್ಚೆ ಆಯಿತು. ಲೋಕಸಭೆಯ ಕೆಲವು ಸದಸ್ಯರಲ್ಲಿ ಶಿಸ್ತು ಸತ್ಯವಿಲ್ಲದೆ ಹೋದರೆ ಭ್ರಷ್ಟಾಚಾರವು ಹೆಚ್ಚಾಗುವುದರಲ್ಲಿ ಆಶ್ಚರ್ಯವೇನಿದೆ?

ಮೂರನೆಯ ಅಂಗ ಆಡಳಿತ ಸೂತ್ರವನ್ನು ಹಿಡಿದಿರುವ ಸಚಿವರು-ಇವರ ವಿಷಯವಾಗಿ ಕಾಂಗ್ರೆಸ್ ಪ್ರೆಸಿಡೆಂಟರಾಗಿದ್ದ ಶ್ರೀ ಸಂಜೀವಯ್ಯನವರು ಈ ರೀತಿ ಹೇಳಿದ್ದಾರೆ : "ಹಿಂದಿನ ಭಿಕಾರಿಗಳು ಈಗ ಕೋಟ್ಯಾಧೀಶರಾಗಿದ್ದಾರೆ " ಇದು ಸತ್ಯವಾದದು. ಅನೇಕರು ದಿವ್ಯವಾದ ಮನೆಗಳ ಮಾಲೀಕರಾಗಿದ್ದರೆ. ಅವರ ಮೇಲೆ ಭ್ರಷ್ಟಾಚಾರದ ಆಪಾದನೆ ತಂದರೆ ದಿ|| ಪ್ರಧಾನಿ ನೆಹರೂರವರು ಅವರು ನಿರ್ದೋಷಿಗಳೆಂದು ಯೋಗ್ಯತಾ ಪತ್ರವನ್ನು ಕೊಡುತ್ತಿದ್ದರು. ಕಾಂಗ್ರೆಸ್ ಮುಖಂಡರು ತಮ್ಮ ಆಸ್ತಿ ಪಟ್ಟಿಯನ್ನು ಕೊಡಬೇಕೆಂದು ನಿರೂಪ ಹೊರಟಿತು. ಆದರೆ ಪ್ರಧಾನಿ ನೆಹರೂರವರ ವಿನಹ ಬೇರೆ ಯಾರೂ ಆಸ್ತಿ ಪಟ್ಟಿಯನ್ನು ಕೊಡಲಿಲ್ಲವೆಂದು ಹೇಳಲಾಗಿದೆ.

ಅಖಿಲ ಭಾರತ ಖಾದಿ ಬೋರ್ಡಿಗೂ ರಾಜ್ಯಗಳ ಖಾದಿ ಬೋರ್ಡಿಗೂ ಕಾಂಗ್ರೆಸ್ಸಿನ ಪ್ರತಿಭಾವಂತರೇ ಅಧ್ಯಕ್ಷರು ಮತ್ತು ಸದಸ್ಯರಾಗಿದ್ದಾರೆ. ಈ ಸಂಸ್ಥೆಯಲ್ಲಿ ಬೇರೆ ಪಕ್ಷದವರಿಗೆ ಸ್ಥಾನವಿಲ್ಲ. ಈ ಸಂಸ್ಥೆಗಳಿಗೆ ಪ್ರತಿ ವರ್ಷವೂ ಸರ್ಕಾರದವರು ಅನೇಕ ಕೋಟಿ ರೂಪಾಯಿಗಳನ್ನು ಕೊಡುತ್ತಿದ್ದಾರೆ. ಆ ಹಣಕ್ಕೆ ಲೆಕ್ಕವಿಲ್ಲ. ತನಿಖೆ ಇಲ್ಲ. ಸುಮಾರು 10 ಕೋಟಿ ರೂಪಾಯಿಗಳಿಗೆ ಲೆಕ್ಕವೇ ಇಲ್ಲವೆಂದೂ, ಇದಕ್ಕೆ ಸರಿಯಾದ ಉತ್ತರವನ್ನು ಕೊಡುತ್ತಿಲ್ಲವೆಂದು ತಿಳಿದುಬರುತ್ತೆ. ಇದನ್ನು ಭ್ರಷ್ಟಾಚಾರದ ತೌರುಮನೆ ಎಂದು ಕರೆಯಬೇಕೆ, ಬೇಡವೇ?

ಭ್ರಷ್ಟಾಚಾರದ ವಿಷಯವಾಗಿ ಈ ಕೆಳಗಿನ ಪದ್ಯಸ್ವಾರಸ್ಯವಾಗಿದೆ.

(ಭಾಷಣಕ್ಕೆ ಮೀರಿದ ಭ್ರಷ್ಟಾಚಾರ)

ಸರಕಾರಿ ಕೋಠಿಯಲ್ಲಿದ್ದ ಅಕ್ಕಿ ।
ಮಧ್ಯರಾತ್ರಿಗೆ ತಿಂದು ಹಾಕಿದವು ಹಕ್ಕಿ ।।
ಈ ರೀತಿ ವರದಿ ಮಾಡಿದ ಹರಿಕಾರ।
ನಿಜವೆಂದು ನಂಬಿತು ನಮ್ಮ ಸರಕಾರ ।।
ಹುಚ್ಚಿಯ ಮದುವೆಯಲ್ಲಿ ಉಂಡವನೆ ಜಾಣ ।
ಎಣ್ಣೆ ಬಂದಾಗ ಕಣ್ಣು ಮುಚ್ಚಿದವನೇ ಕೋಣ ।।
ನ್ಯಾಯ ನೀತಿಯನು ಜೀವಂತವಾಗಿ।

ಗೇರು ಸೊಪ್ಪೆಯ ಮಡುವಿಗೆ ಎಸೆದಿಹನು ಭೋಗಿ॥
ನಾಳೆ ನಮ್ಮ ಕಡೆ ಮಂತ್ರಿಗಳ ಸವಾರಿ ।
ಇಂದು ರಸ್ತೆ ಸೇತುವೆಗಳ ರಿಪೇರಿ॥
ಎಲ್ಲಾ ಕಂಡವು ಸುಣ್ಣ-ಬಣ್ಣ ।
ಮುಚ್ಚಳಿಕೆ ಮಂತ್ರಿಗಳ ಮಂಡುಗಣ್ಣ ॥
ಅವನಲ್ಲಿ ಬಂದಾಗ ತುಂಡು ಪಂಚೆ ಇತ್ತು।
ಇರಲಿಕ್ಕೆ ಮಣ್ಣಿನ ಜೋಪಡಿ ಇತ್ತು ॥
ಅವನ ಮಹಡಿಯ ಎದುರು ಹದಿನೈದು ಲಾರಿ॥
ಕಂಟ್ರಾಕ್ಟುದಾರನಾಗಿ ನಾಡಿಗೆ ಮಾರಿ॥
ಅವರೆಕಾಳನ್ನು ತಿಂದು ಆರು ದಿನ ಕಳೆದೆ।
ನೌಕರಿಯ ದೊರಕಿಸಲು ಎಲ್ಲೆಲ್ಲೋ ಅಲೆದೆ॥
ರಾಜಕೀಯ ಸೇರಿ ಮುಂದೆ ಬಾರೊ ಕಂತ್ರಿ।
ಎಂದು ಹೇಳಿದರೊಬ್ಬ ಮಾಜಿ ಮಂತ್ರಿ॥

ಈ ಪದ್ಯವನ್ನು ಕಾಂಗ್ರೆಸ್ಸಿನಿಂದ ಚುನಾಯಿತರಾದ ವಿಧಾನಸಭಾ ಸದಸ್ಯೆ ಶ್ರೀಮತಿ ನಾಗರತ್ನಮ್ಮ ಹಿರೇಮಠ್ ಇವರು ರಚಿಸಿ ವಿಧಾನಸಭೆಯಲ್ಲಿ ಹಾಡಿದರು.

ಕೇಂದ್ರ ಗೃಹಮಂತ್ರಿ ಶ್ರೀ ನಂದಾರವರು ಲಂಚ ನಿರ್ಮೂಲಕ್ಕೆ ತೀವ್ರವಾದ ಕಾರ್ಯಕ್ರಮ ತೆಗೆದುಕೊಳ್ಳುವುದಾಗಿ ಘೋಷಿಸಿದ್ದಾರೆ. ಈ ಸಂಕಲ್ಪವು ಶ್ಲಾಘನೀಯವಾದದ್ದು. ಆದರೆ ಇಂಥ ನಿರ್ಧಾರಗಳು ಅನೇಕ ಸಲ ಆಗಿಹೋಗಿವೆ. ಸಂತಾನಂ ಸಮಿತಿಯವರು ಲಂಚವನ್ನು ಕೊನೆಗಾಣಿಸಲು ಅನೇಕ ಸಲಹೆಗಳನ್ನು ಮಾಡಿರುತ್ತಾರೆ. ಕಳ್ಳನನ್ನು ಹಿಡಿಯುವವನೇ ಕಳ್ಳನಾದರೆ ಕಳ್ಳತನ ಇನ್ನೂ ಹೆಚ್ಚಾಗುತ್ತದೆ. ಕೆಲವು ಮುಖ್ಯಮಂತ್ರಿಗಳು ಮತ್ತು ಇತರ ಮಂತ್ರಿಗಳು ಲಂಚದ ಆಪಾದನೆಗಳಿಗೆ ಗುರಿಯಾಗಿರುತ್ತಾರೆ. ಒಬ್ಬ ಮುಖ್ಯಮಂತ್ರಿಯು ಹತ್ತು ಲಕ್ಷ ರೂಪಾಯಿ ಕೊಟ್ಟು ಒಂದು ದೊಡ್ಡ ಭವನವನ್ನು ದೆಹಲಿಯಲ್ಲಿ ಕೊಂಡಿದ್ದಾನೆ. ಇನ್ನೊಬ್ಬ ಮುಖ್ಯಮಂತ್ರಿಯು ಕೋಟಿಗಟ್ಟಲೆ ಆಸ್ತಿ ಮಾಡಿದ್ದಾನೆ. ಆದರೂ ಇವರು ಸತ್ಯವಂತರೆಂದು ಹೇಳಿಸಿಕೊಳ್ಳುತ್ತಿದ್ದಾರೆ. ಅನೇಕ ಪ್ರಾಂತ್ಯಗಳ ಮುಖ್ಯಮಂತ್ರಿ ಮತ್ತು ಇತರ ಮಂತ್ರಿಗಳ ಮೇಲೆ ಭ್ರಷ್ಟಾಚಾರದ ಆಪಾದನೆಗಳು ಹೊರಿಸಲ್ಪಟ್ಟಿವೆ. ಕೆಲವರು ಕೋಟಿಗಟ್ಟಲೆ ಬೆಲೆಯುಳ್ಳ ಆಸ್ತಿಗಳನ್ನು ಮಾಡಿದ್ದಾರೆ. ಇದೆಲ್ಲಾ ಯಾವ ರೀತಿ ಸಂಗ್ರಹಿಸಿದುದು? ಪ್ರಜಾಪ್ರಭುತ್ವದಲ್ಲಿರುವ ಈ ಮೂರು ಅಂಗಗಳು ಸತ್ಯಮಾರ್ಗವನ್ನು ತ್ಯಜಿಸಿ ತಮಗೆ ದೊರೆತ ಅವಕಾಶವನ್ನು ದುರುಪಯೋಗಪಡಿಸಿಕೊಂಡರೆ ಭ್ರಷ್ಟಾಚಾರ ಹೆಚ್ಚಿಗೆ ಆಗುವುದು ಆಶ್ಚರ್ಯವಲ್ಲ.

ಭ್ರಷ್ಟಾಚಾರವು ಕಡಿಮೆಯಾಗಬೇಕಾದರೆ ಅದರ ಮೂಲ ಕಾರಣಗಳನ್ನು ಕಿತ್ತು ಹಾಕಬೇಕು. ಕಂಟ್ರೋಲ್‌ಗಳೂ, ಪರ್ಮಿಟ್ ಮತ್ತು ಲೈಸೆನ್ಸು ಪದ್ಧತಿಗಳೂ ಲಂಚಕ್ಕೆ ಅವಕಾಶ ಕೊಡುವ

ಮುಖ್ಯವಾದ ಕಾರಣಗಳಾಗಿವೆ. ಈ ನಿಯಂತ್ರಣಗಳು ಸಮರ್ಪಕವಾಗಿ ಕೆಲಸ ಮಾಡಬೇಕಾದರೆ ಜನಾಂಗವು ಲಾಷ್ಟವು ಶಿಸ್ತು ಮತ್ತು ಸತ್ಯವನ್ನು ಪರಿಪಾಲಿಸಬೇಕು. ಆದರೆ ನಮ್ಮ ದೇಶದಲ್ಲಿ ಶಿಸ್ತು, ನೀತಿ ಮತ್ತು ಸತ್ಯಶೀಲತೆ ಬಹಳ ಕಡಿಮೆ. ಸ್ವಾರ್ಥಿಗಳು ಎಲ್ಲಾ ಮಟ್ಟಗಳಲ್ಲಿಯೂ ಹೆಚ್ಚಾಗಿದ್ದಾರೆ ಮತ್ತು ಕಂಟ್ರೋಲುಗಳಿಂದ ದೊರೆಯುವ ಅವಕಾಶಗಳನ್ನು ದುರುಪಯೋಗ ಮಾಡಿಕೊಳ್ಳುತ್ತಿದ್ದಾರೆ. ಆದ್ದರಿಂದ ಕಂಟ್ರೋಲ್, ಪರ್ಮಿಟ್ ಮತ್ತು ಲೈಸೆನ್ಸು ಪದ್ಧತಿಗಳನ್ನು ಕೊನೆಗಾಣಿಸಬೇಕು. ಅದು ಕಡಿಮೆಯಾದಷ್ಟೂ ಭ್ರಷ್ಟಾಚಾರ ಕಡಿಮೆಯಾಗುವುದೆಂದು ನಾನು ಧೈರ್ಯವಾಗಿ ಹೇಳಬಲ್ಲೆ.

ಪಾನನಿರೋಧವನ್ನು ಸಂಪೂರ್ಣವಾಗಿ ತೆಗೆದು ಹಾಕಿದರೆ ಲಂಚಕೋರರಿಗೆ ಇನ್ನೊಂದು ಮಹದಾವಕಾಶವು ಮಾಯವಾಗುತ್ತದೆ. ಈ ವಿಷಯವು ಎಲ್ಲರಿಗೂ ತಿಳಿದಿದೆ. ಪಾನನಿರೋಧದಿಂದ ದೇಶಕ್ಕೆ ಹಾನಿಯೇ ಹೊರತು ಕ್ಷೇಮವಿಲ್ಲ.

ಸರ್ಕಾರದ ನೀತಿಯು ಸಮಾಜವಾದ ನೀತಿಯನ್ನು (Socialism) ಅನುಸರಿಸುವಾಗ ಭ್ರಷ್ಟಾಚಾರಕ್ಕೆ ಅನೇಕ ಅವಕಾಶಗಳನ್ನು ಹುಟ್ಟಿಕೊಳ್ಳುತ್ತವೆ. ಸಮಾಜವಾದ ಸರ್ಕಾರದಲ್ಲಿ ಪ್ರಜೆಗಳ ಹಕ್ಕುಗಳಿಗೆ ಚ್ಯುತಿ ಬರುವುದಿಲ್ಲದೆ, ವ್ಯಕ್ತಿ ಸ್ವಾತಂತ್ರ್ಯವು ಕಡಿಮೆಯಾಗುತ್ತದೆ. ಸರ್ಕಾರದ ಪ್ರದೇಶ ಮತ್ತು ಹತೋಟಿಗಳು ಜಾಸ್ತಿಯಾಗುತ್ತವೆ. ಅಧಿಕಾರಿಗಳು ತಮ್ಮ ಸ್ಥಾನವನ್ನು ದುರುಪಯೋಗ ಪಡಿಸಲು ಅನೇಕ ಅವಕಾಶಗಳಿರುತ್ತವೆ. ಸಮಾಜವಾದ ನೀತಿಯನ್ನು ಕಾರ್ಯಾಚರಣೆಗೆ ತರಬೇಕಾದರೆ ಸರ್ಕಾರವು ನಿರಂಕುಶ ಪ್ರಭುತ್ವ ಸರ್ಕಾರವಾಗಿರಬೇಕು (Dictatorship) ಅಥವಾ ಜನಾಂಗವು ಶಿಸ್ತು ಸತ್ಯಗಳಿಂದ ಕೂಡಿರಬೇಕು. ನಿರಂಕುಶ ಪ್ರಭುತ್ವವು ಕಮ್ಯುನಿಸ್ಟ್ ದೇಶಗಳಲ್ಲಿದೆ. ಅಲ್ಲಿ ಸಮಾಜವಾದ ನೀತಿಯನ್ನು ದಬ್ಬಾಳಿಕೆ ಮತ್ತು ನಿರ್ಬಂಧಗಳಿಂದ ಜಾರಿಗೆ ತರಲು ಅವಕಾಶವಿದೆ. ಪ್ರಜೆಗಳಿಗೆ ಕೇವಲ ಸ್ವತಂತ್ರ ವಿರೋಧಕ್ಕೆ ಮಾತ್ರ ಪೂರ್ಣ ಜವಾಬ್ದಾರಿ ಸರಕಾರವಾಗಿರುತ್ತದೆ. ಪ್ರಜಾಪ್ರಭುತ್ವಕ್ಕೆ ಸರ್ಕಾರದಲ್ಲಿ ಸಮಾಜವಾದ ನೀತಿಯನ್ನು ಅನುಸರಿಸಿ, ಜನಾಂಗದಲ್ಲಿ ಶಿಸ್ತು ಮತ್ತು ಸತ್ಯಗಳಿಲ್ಲದಿದ್ದರೆ ಸಮಾಜವಾದವು ಯಶಸ್ವಿಯಾಗುವುದಿಲ್ಲ. ಸ್ವಾರ್ಥಿಗಳು, ಹತೋಟಿ ಮತ್ತು ಕೊಂಟ್ರೋಲ್‌ಗಳನ್ನು ದುರುಪಯೋಗಪಡಿಸುತ್ತಾರೆ. ನಾನು ಇಂಗ್ಲೆಂಡಿಗೆ 1951ರಲ್ಲಿ ಹೋದಾಗ ಅಲ್ಲಿ ಕೆಲವು ಕಂಟ್ರೋಲುಗಳನ್ನು ವಿಧಿಸಿದ್ದರು. ಆಹಾರದ ಮೇಲೆ ಹತೋಟಿ ಜಾರಿಯಲ್ಲಿದ್ದಿತು. ಅಲ್ಲಿ ಕೆಲವರನ್ನು ಕಾಳಸಂತೆ (Balck market) ಇದೆಯೇ ಎಂದು ವಿಚಾರಿಸಿದಾಗ ಅವರು ಹೇಳಿದರು-"ನಾವು ಶಿಸ್ತಿನಿಂದ ಕೂಡಿರುವ ಜನಾಂಗ. ಸರ್ಕಾರದವರು ಕಾನೂನು ಜಾರಿ ಮಾಡಿದರೆ ಅಥವಾ ಆಜ್ಞೆ ಮಾಡಿದರೆ ಅದನ್ನು ಅಕ್ಷರಶಃ ಪಾಲಿಸುತ್ತಾವೆ. ನಮ್ಮಲ್ಲಿ ಕಾಳ ಸಂತೆ ಇಲ್ಲ " ಎಂದು ಹೆಮ್ಮೆಯಿಂದ ನುಡಿದರು. ಇದು ವಾಸ್ತವವಾದುದು. ಆ ಕಾಲದಲ್ಲಿ ಸಕ್ಕರೆಯ ಅಭಾವವು ಬಂದಿತು. ಬ್ರಿಟಿಷ್ ಸರ್ಕಾರದವರು ಕಂಟ್ರೋಲ್ ಆಜ್ಞೆಯನ್ನು ವಿಧಿಸಿ, ಒಂದು ಸಂಸಾರದ ವಶದಲ್ಲಿ ಇಷ್ಟೇ ಸಕ್ಕರೆ ಇರಬೇಕೆಂದೂ ಅದಕ್ಕಿಂತ ಹೆಚ್ಚಿಗೆ ಇರುವ ಸಕ್ಕರೆಯನ್ನೆಲ್ಲಾ ಡಿಪೋಗಳಿಗೆ ವಾಪಸ್ಸು ಕೊಡಬೇಕೆಂದೂ ಆಜ್ಞೆ ಮಾಡಿದರು. ತಕ್ಷಣವೇ ಹೆಚ್ಚಿಗೆ ಸಕ್ಕರೆ ಇದ್ದವರೆಲ್ಲರೂ ಗುಂಪಾಗಿ ಅದನ್ನು ತಂದು ಡಿಪೋಗಳಿಗೆ ಒಪ್ಪಿಸಿದರು. ಈ ಶಿಸ್ತು ಮತ್ತು ಸತ್ಯಗಳು ನಮ್ಮ ಜನಾಂಗದಲ್ಲಿ ಬಹಳ ಕಡಿಮೆ. ಪೂರ್ಣ ಸಮಾಜವಾದ ನೀತಿಯೊಂದನ್ನನುಸರಿಸಿದರೆ ಜನರ ಸ್ವಾತಂತ್ರ್ಯವೇ ಕೊನೆಗೊಳ್ಳುವುದು. ಸರ್ಕಾರದ ಪ್ರವೇಶ

ಅಧಿಕವಾಗುವುದು.ಇದರೊಂದಿಗೆ ಭ್ರಷ್ಟಾಚಾರ ಹೆಚ್ಚಲು ಅವಕಾಶವಾಗುವುದು. ಈಗ ಕೇಂದ್ರ ಸರ್ಕಾರವು ಸಂಪೂರ್ಣ ಸಮಾಜವಾದ ನೀತಿಯನ್ನನುಸರಿಸಬೇಕೆಂದು ನಿರ್ಧರಿಸಿದೆ. ಇದರಿಂದ ಪ್ರಜೇಗಳ ಹಕ್ಕು ಬಾಧ್ಯತೆಗೆ ಚ್ಯುತಿ ಬರುತ್ತಾ ಇದೆ. ಈ ನೀತಿಗೆ ಅನುಸಾರವಾಗಿ ಸರ್ಕಾರದ ಪ್ರವೇಶ ಹತೋಟಿಗಳು ಜಾಸ್ತಿಯಾಗುತ್ತಾ ಇವೆ. ಇದರೊಂದಿಗೆ ಭ್ರಷ್ಟಾಚಾರಕ್ಕೆ ಹೆಚ್ಚಿಗೆ ಅವಕಾಶವೂ ದೊರೆಯುತ್ತಿದೆ. ಆಹಾರದ ಮಾರಾಟವನ್ನು ಸರ್ಕಾರವೇ ವಹಿಸಿಕೊಳ್ಳಬೇಕೆಂದೂ ಇದ್ದಾರೆ. ಬೆಲೆಯನ್ನು ಹತೋಟಿಗೆ ತರಲು ಆಗಲೇ ಸರ್ಕಾರ ಆಜ್ಞೆಗಳನ್ನು ಹೊರಡಿಸಿದೆ. ಆದರೆ ಹಿಂದಿನ ಅನುಭವದಿಂದ ಹೇಳಬೇಕಾದರೆ, ಆಹಾರ ಸರಬರಾಜನ್ನು ಸರ್ಕಾರವು ವಹಿಸಿಕೊಂಡರೆ ಸ್ವಾರ್ಥಿಗಳಿಗೆ ತಮ್ಮ ಸ್ಥಾನವನ್ನು ದುರುಪಯೋಗಪಡಿಸಲು ಅನೇಕ ಅವಕಾಶಗಳು ದೊರೆಯುತ್ತವೆ. ಕಾಳಸಂತೆಯು ಉಗ್ರವಾಗುತ್ತದೆ. ಪ್ರಭಾವಶಾಲಿಗಳಿಗೆ ಆಹಾರ ದೊರೆಯಬಹುದು. ಆದರೆ ಬಡಜನರ ಕಷ್ಟ ನಿವಾರಣೆಯಾಗುವುದಿಲ್ಲ. ಹಣವಿದ್ದರೂ ಆಹಾರ ದೊರೆಯುವುದಿಲ್ಲ. ಕಾಳಸಂತೆಯಲ್ಲಿ ನಿರತರಾಗಿರುವ ವ್ಯಾಪಾರಿಗಳಿಗೆ ಕೇಳಿದಷ್ಟು ಹಣ ಕೊಟ್ಟು ಅವಶ್ಯಕವಾದ ಸರಕುಗಳನ್ನುತೆಗೆದುಕೊಳ್ಳಬೇಕಾಗುತ್ತದೆ. ಆಹಾರ ಧಾನ್ಯದ ಬೆಲೆಯನ್ನು ಇಳಿಸಬೇಕೆಂದು ಸರ್ಕಾರದವರು ಹೇಳುತ್ತಿದ್ದಾರೆ. ನಿಯಂತ್ರಣದಿಂದ ಬೆಲೆ ಇಳಿಯುವುದಿಲ್ಲ. ಬೆಲೆ ಏರುತ್ತಿರುವುದಕ್ಕೆ ಸರ್ಕಾರದವರು ಅನುಸರಿಸುತ್ತಿರುವ ನೀತಿಯೇ ಕಾರಣವಾಗಿದೆ. ಆಹಾರ ಸಾಮಗ್ರಿಗಳ ಬೆಲೆಯು ಮಿತಿಮೀರಿ ಹೆಚ್ಚಿರುತ್ತದೆ. ಬೆಲೆಯು ಹೆಚ್ಚಿಸದಕಾಲದಲ್ಲಿ ಅದು ಸಿಗದಿರುವುದಕ್ಕೂ ಸರ್ಕಾರವು ಅನುಸರಿಸುತ್ತಿರವ ನೀತಿಯೇ ಕಾರಣವಾಗಿದೆ. ಆಹಾರ ಸಾಮಗ್ರಿಗಳ ಬೆಲೆಯು ಮಿತಿಮೀರಿ ಹೆಚ್ಚಿರುತ್ತದೆ. ಬೆಲೆಯು ಹೆಚ್ಚಿಗೆ, ಅದೂ ಸಕಾಲದಲ್ಲಿ ಸಿಕ್ಕುತ್ತಿಲ್ಲ. ಸರ್ಕಾರದವರು ನಿಯಂತ್ರಣ ಕಾನೂನುಗಳನ್ನು ತಂದರೂ, ಬೆಲೆಯೂ ಏರುತ್ತಲೇ ಇರುತ್ತದೆ. ಆಹಾರೋತ್ಪನ್ನವನ್ನು ಹೆಚ್ಚಿಗೆ ಮಾಡಲು ಕಳೆದ 14 ವರ್ಷಗಳಿಂದ ಸಾವಿರಾರು ಕೋಟಿ ರೂಪಾಯಿಗಳು ದೇಶದಲ್ಲಿ ಖರ್ಚಾಗಿರುತ್ತವೆ. ಆದರೂ ಆಹಾರದ ಅಭಾವ ಜಾಸ್ತಿಯಾಗುತ್ತಾ ಇರುವುದು ಶೋಚನೀಯವಾಗಿದೆ. ಇಷ್ಟಾದರೂ ಸರ್ಕಾರದವರು ಹಿಂದಿನ ಅನುಭವವನ್ನು ಗಣನೆಗೆ ತೆಗೆದುಕೊಳ್ಳುತ್ತಿಲ್ಲ. ಆಹಾರದ ಹತೋಟಿಯು ಜಾರಿಯಲ್ಲಿದ್ದಾಗ ಜನಗಳಿಗೆ ಎಷ್ಟು ತೊಂದರೆಯಾಯಿತೆಂಬುದನ್ನು ಮರೆತಿದ್ದಾರೆ. ಸಕ್ಕರೆ ಮೇಲೆ ನಿಯಂತ್ರಣ ಜಾರಿಗೆ ತಂದರು. ಆದರೆ ಅದನ್ನು ಮಾರಾಟ ಮಾಡುವ ಜವಾಬ್ದಾರಿಯನ್ನು ವ್ಯವಸಾಯೋತ್ಪನ್ನಗಳನ್ನು ಮಾರಾಟ ಮಾಡುವ ಸಹಕಾರ ಸಂಘಗಳಿಗೆ ವಹಿಸಿದರು. ಇದರ ಫಲವಾಗಿ ಅನೇಕ ಸಹಕಾರ ಸಂಸ್ಥೆಗಳಲ್ಲಿ ಭ್ರಷ್ಟಾಚಾರವು ಪ್ರಾರಂಭವಾಯಿತು. ಸಕ್ಕರೆಗೆ ಅಭಾವ ಬಂದಿತು. ಆದರೆ ಕಾಳಸಂತೆಯಲ್ಲಿ ಯಥೇಚ್ಛವಾಗಿ ಸಕ್ಕರೆ ದೊರೆಯುತ್ತಿತ್ತು.

ಶ್ರೀ ನಂದಾರವರು ಭ್ರಷ್ಟಾಚಾರ ನಿವಾರಣೆ ಮಾಡಲು ದೃಢ ಸಂಕಲ್ಪ ಮಾಡಿರಬಹುದು. ಕೇಂದ್ರದಲ್ಲಿ ಭ್ರಷ್ಟಾಚಾರ ನಿವಾರಣೆಗೆ ಒಬ್ಬ ಮಹೋನ್ನತ ಅಧಿಕಾರಿಯನ್ನು ತಿಂಗಳೊಂದಕ್ಕೆ 5000 ರೂಪಾಯಿ ಸಂಬಳದ ಮೇಲೆ ನೇಮಿಸಿರಬಹುದು. ಪ್ರಾಂತ್ಯ ಸರ್ಕಾರಗಳೂ ಇದೇ ರೀತಿಯಾಗಿ ದೊಡ್ಡ ದೊಡ್ಡ ಕಾಂಗ್ರೆಸ್ ಧುರೀಣರನ್ನು ವಿಜಿಲೆನ್ಸ್ ಆಫೀಸರಾಗಿ ನೇಮಿಸಬಹುದು. ಆದರೆ ಇದರಿಂದ ಸರ್ಕಾರಕ್ಕೆ ಹೆಚ್ಚು ಹಣ ವ್ಯಯವಾಗುತ್ತದೆಯೇ ಹೊರತು ಭ್ರಷ್ಟಾಚಾರ ಕಡಿಮೆಯಾಗುವುದಿಲ್ಲ. ಈ ಜಾಡ್ಯಕ್ಕೆ ಮೂಲ ಕಾರಣಗಳಾದ ಸರ್ಕಾರದ ವಿಚಾರರಹಿತ ನೀತಿ

ಮತ್ತು ಬೆಲೆಗಳಿರುವ ಅಪ್ರಾಮಾಣಿಕತೆ, ಇವು ಬದಲಾವಣೆಯಾಗಿ ಜನಾಂಗವು ಶಿಸ್ತು ಮತ್ತು ಸತ್ಯಗಳಿಂದ ವರ್ತಿಸಿದರೆ ಮಾತ್ರ ಭ್ರಷ್ಟಾಚಾರವು ಕಡಿಮೆಯಾಗುತ್ತದೆ.

ನಾನು ಮೈಸೂರು ರಾಜಕೀಯದಲ್ಲಿ 1930 ರಿಂದ 1957ನೇ ಇಸವಿಯವರೆಗೆ, ಪ್ರಜಾಪ್ರತಿನಿಧಿ ಮತ್ತು ನ್ಯಾಯ ವಿಧಾಯಕ ಸಭೆಗಳ ಸದಸ್ಯನಾಗಿ, ಸಾಧ್ಯವಾದಷ್ಟು ದೇಶಸೇವೆಯನ್ನು ಸಲ್ಲಿಸಲು ಪ್ರಯತ್ನಿಸಿರುತ್ತೇನೆ. ಪ್ರಜಾಸರ್ಕಾರವು ಬಂದ ನಂತರ 1948ನೇ ಇಸವಿಯಿಂದ ವಿರೋಧ ಪಕ್ಷದ ನಾಯಕನಾಗಿ ಸರ್ಕಾರದ ಆಡಳಿತ ಮತ್ತು ನೀತಿಯನ್ನು ರಚನಾತ್ಮಕವಾಗಿ ಟೀಕೆ ಮಾಡುತ್ತಾ ಬಂದಿರುತ್ತೇನೆ. ನಾನು ಲೋಕಸಭೆಗೆ ಹೋಗಿ ಮೈಸೂರು ದೇಶದ ಹಿತವನ್ನು ಕಾಯಬೇಕೆಂದು ನನ್ನ ಆಪ್ತ ಸ್ನೇಹಿತರು ಅಭಿಪ್ರಾಯಪಟ್ಟರು. ನನಗೂ ಸಹ ಭಾರತ ಸರ್ಕಾರದ ರಾಜಕೀಯದಲ್ಲಿ ಭಾಗವಹಿಸಬೇಕೆಂಬ ಆಶೆ ಹುಟ್ಟಿತು. 1957ನೇ ಇಸವಿಯ ಸಾರ್ವತ್ರಿಕ ಚುನಾವಣೆಯಲ್ಲಿ ಚಿತ್ರದುರ್ಗದ ಲೋಕಸಭಾ ಕ್ಷೇತ್ರದಿಂದ ನಾನು ಉಮೇದುವಾರನಾಗಿ ನಿಂತು ಪ್ರಜಾಸೋಷಲಿಸ್ಟ್ ಪಾರ್ಟಿಯ ಪರವಾಗಿ ಚುನಾಯಿತನಾದೆನು.

ಮೈಸೂರು ರಾಜ್ಯದಿಂದ ಚುನಾಯಿತರಾದ 26 ಸದಸ್ಯರ ಪೈಕಿ 24 ಜನರು ಕಾಂಗ್ರೆಸ್ಸಿಗೆ ಸೇರಿದವರು. ನಾನು ಮತ್ತು ಬಿಜಾಪುರದ ಶ್ರೀ ಸುಗಂಧಿ ವಿರೋಧ ಪಕ್ಷಕ್ಕೆ ಸೇರಿದವರು. ವೈಯಕ್ತಿಕವಾಗಿ ಕಾಂಗ್ರೆಸ್ ಸದಸ್ಯರೆಲ್ಲರೂ ನನ್ನ ಸ್ನೇಹಿತರು. ನಾನು ಬೇರೆ ಬೇರೆ ಪಕ್ಷಗಳಿಗೆ ಸೇರಿದ್ದರೂ ಮೈಸೂರಿನ ಹಿತ ಕಾಯಲು ನಾವೆಲ್ಲರೂ ಒಮ್ಮನಸ್ಸಿನಿಂದ ಇದ್ದೆವು.

ಲೋಕಸಭೆಯ ಸದಸ್ಯರ ಸಂಖ್ಯೆ 520. ಈ ಪೈಕಿ ಸುಮಾರು 380 ಜನ ಸದಸ್ಯರು ಕಾಂಗ್ರೆಸ್ಸಿನಿಂದ ಚುನಾಯಿತರಾದವರು. ಉಳಿದ ಸುಮಾರು 140 ಜನ ಇತರ ಪಕ್ಷಗಳಿಂದಲೂ ಮತ್ತು ಸ್ವತಂತ್ರವಾಗಿಯೂ ಆರಿಸಿ ಬಂದವರು. ಈ 140 ಜನ ಸದಸ್ಯರು ಒಂದೇ ಪಾರ್ಟಿ ಅಥವಾ ಪಕ್ಷಕ್ಕೆ ಸೇರಿದವರಾಗಿದ್ದರೆ ವ್ಯವಸ್ಥಿತವಾದ ಮತ್ತು ಪ್ರಬಲವಾದ ವಿರೋಧಪಕ್ಷ ಸ್ಥಾಪನೆಯಾಗಿ ಸರ್ಕಾರದ ಮೇಲೆ ಅದರ ಪ್ರಭಾವವನ್ನು ಬೀರಬಹುದಾಗಿತ್ತು. ಆದರೆ ಕಾಂಗ್ರೆಸ್ಸೇತರರದಲ್ಲಿ ಕೆಳಗಿನ ಈ ಹಲವಾರು ಪಕ್ಷಗಳಿದ್ದವು.

| | | |
|---|---|---|
| ಕಮ್ಯೂನಿಸ್ಟ್ | 32 | ಸದಸ್ಯರು |
| ಪಿ.ಎಸ್.ಪಿ. | 23 | -”- |
| ಗಣತಂತ್ರ | 6 | -”- |
| ಸೋಷಿಯಲಿಸ್ಟ್ | 4 | -”- |
| ಕ್ರಾಂತಿಕ ಸೋಷಿಯಲಿಸ್ಟ | 2 | -”- |
| ರೈತ ಕಾರ್ಮಿಕ ಪಾರ್ಟಿ | 4 | -”- |
| ರಿಪಬ್ಲಿಕನ್ ಪಾರ್ಟಿ | 8 | -”- |
| ಜನಸಂಘ | 2 | -”- |
| ಹಿಂದೂ ಮಹಾಸಭಾ | 1 | -”- |

| | | |
|---|---|---|
| ಮುಸ್ಲಿಂ ಲೀಗ್ | 1 | ಸದಸ್ಯರು |
| ಡಿ.ಎಂ.ಕೆ. | 3 | -"- |
| ಸ್ವತಂತ್ರ ಪಾರ್ಲಿಮೆಂಟರಿ ಗ್ರೂಪ್ | 9 | -"- |
| ಸ್ವತಂತ್ರರು | 20 | -"- |
| ಸ್ವತಂತ್ರ ಪಾರ್ಟಿ | 4 | -"- |

ಈ ವಿವಿಧ ಪಕ್ಷಗಳು ಇದ್ದುದರಿಂದ ಒಂದು ಬಲವಾದ ಮತ್ತು ವ್ಯವಸ್ಥಿತವಾದ ವಿರೋಧ ಪಕ್ಷವನ್ನು ಸ್ಥಾಪಿಸಲು ಅವಕಾಶವಿರಲಿಲ್ಲ. ಇಷ್ಟು ಪಕ್ಷಗಳು ಇರುವುದರಿಂದ ಆಳುವ ಪಕ್ಷವಾದ ಕಾಂಗ್ರೆಸ್ಸಿನ ಸೌಭಾಗ್ಯ. ಆದರೆ ಪ್ರಜಾಪ್ರಭುತ್ವದ ದೌರ್ಭಾಗ್ಯ. ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ಒಂದು ಪ್ರಬಲವಾದ ವಿರೋಧಪಕ್ಷವೂ ಬೇಕು. ಇಲ್ಲವಾದರೆ ಪಶುಬಲವುಳ್ಳ ಏಕನಾಯಕಾತ್ವಾಡಳಿತವು ಪ್ರಾರಂಭವಾಗುತ್ತದೆ. ಪ್ರಜಾಪ್ರಭುತ್ವವು ಯಶಸ್ವಿಯಾಗಿ ಇತರ ದೇಶಗಳಲ್ಲಿ ಮುಖ್ಯವಾದ ಒಂದು ಆಳುವ ಪಕ್ಷ ಮತ್ತು ಅದನ್ನು ಎದುರಿಸಲು ಬಲವಾದ ವಿರೋಧಕ್ಷವೂ ಇರುತ್ತದೆ. ಇಂಗ್ಲೆಂಡಿನಲ್ಲಿ ಕನ್‌ಸರ್‌ವೆಟಿವ್ ಪಕ್ಷವಾಗಿದ್ದಾಗ ಲೇಬರ್ ಪಕ್ಷವು ವಿರೋಧಪಕ್ಷವಾಗಿರುತ್ತದೆ. ಕೆಲವು ದಿನಗಳ ಹಿಂದೆ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಲೇಬರ್ ಪಕ್ಷದವರಿಗೆ ಬಹುಮತ ಬಂದುದರಿಂದ ಅದು ಆಳುವ ಪಕ್ಷವಾಗಿ, ಕನ್‌ಸರ್‌ವೇಟಿವ್ ಪಕ್ಷವು ವಿರೋಧಪಕ್ಷವಾಗಿದೆ. ಪ್ರಜೆಗಳು ಚುನಾವಣೆಯಲ್ಲಿ ತಮಗೆ ಬೇಕಾದ ಪಕ್ಷವನ್ನು ಬಹುಮತದಿಂದ ಚುನಾಯಿಸುತ್ತಾರೆ. ಅಮೇರಿಕಾದಲ್ಲಿ ರಿಪಬ್ಲಿಕನ್ ಪಾರ್ಟಿ ಮತ್ತು ಡೆಮೊಕ್ರಾಟಿಕ್ ಪಾರ್ಟಿ ಎಂದು ಎರಡು ಪಕ್ಷಗಳಿವೆ. ಪಶ್ಚಿಮ ಜರ್ಮನಿ, ಜಪಾನ್, ಇಟಲಿ ಮುಂತಾದ ದೇಶಗಳಲ್ಲಿಯೂ ಎರಡು ಸುವ್ಯವಸ್ಥಿತ ಪಕ್ಷಗಳಿವೆ. ಪ್ರತಿಯೊಂದು ಪಕ್ಷವೂ ಅದರ ಸ್ವಂತ ಧ್ಯೇಯದ ಸಾಧನೆಗೆ ಹೋರಾಡುತ್ತದೆ. ಚುನಾವಣೆಯ ಕಾಲದಲ್ಲಿ ಪ್ರಜೆಗಳು ತಮಗೆ ಯಾವ ಧ್ಯೇಯವು ಸಮಂಜಸವಾಗಿ ಕಾಣುತ್ತದೆಯೋ ಆ ಧ್ಯೇಯಕ್ಕೆ ತಮ್ಮ ಮತವನ್ನು ನೀಡುತ್ತಾರೆ. ಚಿಕ್ಕಪುಟ್ಟ ಪಕ್ಷಗಳನ್ನು ಕಟ್ಟುವ ಹಂಬಲ ಭಾರತ ದೇಶದಲ್ಲಿ ಅಧಿಕವಾಗಿದೆ. ಕೆಲವು ಪಕ್ಷಗಳಿಗೆ ಧ್ಯೇಯವೇ ಇಲ್ಲ. ಕೆಲವು ಗುಂಪುಗಳು ಕಾಂಗ್ರೆಸ್ ಪಕ್ಷದ ಧ್ಯೇಯ ಮತ್ತು ನೀತಿಗಳನ್ನು ಪುಷ್ಟೀಕರಿಸುತ್ತಾರೆ. ಆದರೂ ತಾವು ವಿರೋಧಪಕ್ಷವೆಂದು ಹೇಳಿಕೊಳ್ಳುವುದು ಅಸಂಬದ್ಧವಾಗಿ ಕಾಣುತ್ತದೆ.

ಕಾಂಗ್ರೆಸ್, ಪ್ರಜಾಸೋಷಿಯಲಿಸ್ಟ್, ಕ್ರಾಂತಿ ಸೋಷಿಯಲಿಸ್ಟ ಕಾರ್ಮಿಕರು ಅನುಸರಿಸುತ್ತಿರುವುದೂ ಸಮಾಜವಾದದ ಧ್ಯೇಯ. ಈ ಧ್ಯೇಯವುಳ್ಳವರೆಲ್ಲ ಒಂದೇ ಪಕ್ಷದಲ್ಲಿ ಇರಬೇಕಾದುದು ಸಮಂಜವಾದುದ್ದು. ಕಮ್ಯೂನಿಸ್ಟ ಪಕ್ಷದ ಧ್ಯೇಯವು ಸಂಪೂರ್ಣ ಸಮಾಜವಾದ ಆದರೆ ಕಮ್ಯೂನಿಸ್ಟ್ ಪಕ್ಷದ ಮೇಲೆ ರಷ್ಯಾ ಮತ್ತು ಚೀನಾದೇಶಗಳ ಪ್ರಭಾವವಿರುತ್ತದೆ. ಕಮ್ಯೂನಿಸ್ಟ್ ಪಕ್ಷದ ಪ್ರಭಾವವು ಭಾರತ ದೇಶದ ಸಮಾಜವಾದ ನೀತಿಯನ್ನು ಬಹಳವಾಗಿ ಮಾರ್ಪಡಿಸಿದೆ. ಇಲ್ಲಿಯೂ ರಾಷ್ಟ್ರೀಕರಣ ನೀತಿಯು ಹೆಚ್ಚುತ್ತಾ ಬಂದಿದೆ. ಸರ್ಕಾರದ ಹತೋಟಿ ಪ್ರವೇಶಗಳು ಹೆಚ್ಚಾದ ಹಾಗೆಲ್ಲಾ ವ್ಯಕ್ತಿ ಸ್ವಾತಂತ್ರ್ಯವು ಕಡಿಮೆಯಾಗುತ್ತಾ ಇದೆ. ಲೋಕಸಭೆಯಲ್ಲಿ 31 ಜನಗಳನ್ನೊಳಗೊಂಡ ಕಮ್ಯೂನಿಸ್ಟರ ಒಂದು ಗುಂಪು ಇದೆ. ಕಾಂಗ್ರೆಸ್ ಅನಂತರ ಕಮ್ಯೂನಿಸ್ಟ್

ಪಕ್ಷವೇ ಇತರ ಪಕ್ಷಗಳಿಗಿಂತ ಅಧಿಕ ಸಂಖ್ಯೆಯಲ್ಲಿದ್ದು, ತನ್ನ ಪಕ್ಷದ ಪ್ರಭಾವವನ್ನು ಇತರ ಪಕ್ಷಗಳ ಮೇಲೆ ಬೀರುತ್ತಾ ಇದ್ದಿತು.

ಜನಸಂಘ, ಹಿಂದೂಮಹಾಸಭೆ, ಮುಸ್ಲಿಂಲೀಗುಗಳು ಕೋಮುವಾರು ಪಕ್ಷಗಳು. ರಿಪಬ್ಲಿಕನ್ ಪಕ್ಷದಲ್ಲಿ ನಿಮ್ನವರ್ಗದಿಂದ ಬೌಧ್ಧಮತಕ್ಕೆ ಸೇರಿದವರಿದ್ದಾರೆ. ಇವರಿಗೆ ಸ್ವತಂತ್ರ ಧ್ಯೇಯವೇನೂ ಇಲ್ಲ. ಸಮಯ ಬಂದ ಹಾಗೆ ವರ್ತಿಸುತ್ತಾರೆ. ಈಗ ಸ್ವತಂತ್ರ ಪಕ್ಷವು ಪಾರ್ಲಿಮೆಂಟಿನಲ್ಲಿ ಕಾಂಗ್ರೆಸ್ ನಂತರ ಎರಡನೇ ಪಕ್ಷವಾಗಿದೆ.

ಗಣತಂತ್ರ ಪರಿಷತ್ತಿನ ಸದಸ್ಯರು ಒರಿಸ್ಸಾ ಪ್ರಾಂತ್ಯದಿಂದ ಚುನಾಯಿತರಾದರು. ಇವರು ಸರ್ಕಾರದ ಸಮತಾವಾದ ನೀತಿಯನ್ನು, ರಾಷ್ಟ್ರೀಕರಣವನ್ನು ಒಪ್ಪುವುದಿಲ್ಲ. ವ್ಯಕ್ತಿ ಸ್ವಾತಂತ್ರ್ಯವನ್ನು ಕಾಪಾಡಬೇಕೆಂಬುದು ಇವರ ಧ್ಯೇಯ.

ಸುವ್ಯವಸ್ಥಿತವಾದ ಮತ್ತು ಸುಭದ್ರವಾದ ವಿರೋಧಪಕ್ಷವು ಇಲ್ಲದೆ ಇರುವುದರಿಂದಲೂ, ವಿರೋಧಪಕ್ಷದಲ್ಲಿರುವ ಸಮಾಜವಾದಿಗಳು ಕಾಂಗ್ರೆಸ್ ಪಕ್ಷದ ನೀತಿಗೆ ಬೆಂಬಲ ಕೊಡುತ್ತಿರುವುದರಿಂದಲೂ ಕಾಂಗ್ರೆಸ್ ಸರ್ಕಾರದ ಶೋಚನೀಯ ವರ್ತನೆಗೆ ಅವಕಾಶವಾಗಿದೆ.

ದಿವಂಗತ ಪಂಡಿತ್ ಜವಹರಲಾಲ್ ನೆಹರೂರವರು ಕಾಂಗ್ರೆಸ್ ಪಕ್ಷದ ನಾಯಕರಾಗಿದ್ದರು. ಅವರ ವ್ಯಕ್ತಿ ಪ್ರಭಾವವು ಕಾಂಗ್ರೆಸ್ ಪಕ್ಷದ ಮೇಲೆ ಅಗಾಧವಾಗಿದ್ದು ಅದರ ಐಕ್ಯತೆಗೆ ಕಾರಣವಾಗಿದ್ದಿತು. ಲೋಕಸಭೆಯು ಕಾಂಗ್ರೆಸ್ ಪಕ್ಷದಲ್ಲಿ ಒಳಗುಂಪು, ಒಳಜಗಳಗಳಿರಲಿಲ್ಲ. ಶ್ರೀ ಜವಾಹರ್‌ಲಾಲ್‌ರ ನಾಯಕತ್ವ ಮತ್ತು ಸಲಹೆಯನ್ನು ಕಾಂಗ್ರೆಸ್‌ನವರೆಲ್ಲರೂ ಪಾಲಿಸುತ್ತಿದ್ದರು. ಆದರೆ ಅವರ ಎದುರು ಮಾತನಾಡಲು ಅಥವಾ ಅವರನನು ವಿರೋಧಿಸಲು ಯಾರಿಗೂ ಕಾಂಗ್ರೆಸ್ಸಿನಲ್ಲಿ ಧೈರ್ಯವಿರಲಿಲ್ಲ. ಯಾರಾದರೂ ಆ ರೀತಿ ವಿರೋಧಿಸಿದರೆ ಅವರ ಭವಿಷ್ಯತ್ತು ಅನಿಶ್ಚಿತವಾಗುತ್ತಿತ್ತು. ದಿ. ಪಂಡಿತ ಜವಾಹರಲಾಲರು ಸಚಿವರನ್ನು ನೇಮಿಸಬಲ್ಲರು ಅಥವಾ ಅವರನ್ನು ತೆಗೆದುಹಾಕಬಲ್ಲರು. ರಾಷ್ಟ್ರಪತಿ, ಉಪರಾಷ್ಟ್ರಪತಿ, ರಾಜ್ಯಪಾಲರು, ಇವರೆಲ್ಲರ ನೇಮಕಗಳೂ ಶ್ರೀ ನೆಹರೂರವರ ಸಲಹೆಯಂತೆ ನಡೆಯುತ್ತಿದ್ದವು. ಸರ್ವಾಧಿಕಾರಿಗಳೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಅವರು ಸುಖೀ ರಾಜ್ಯ ಬೇಕೆಂದರೆ ಎಲ್ಲರಿಗೂ ಸುಖೀರಾಜ್ಯಬೇಕೆನ್ನುತ್ತಿದ್ದರು. ಸಮಾಜವಾದ ಬೇಕೆಂದರೆ ಎಲ್ಲರಿಗೂ ಚಪ್ಪಾಳೆ ತಟ್ಟಿ ಒಪ್ಪುತ್ತಿದ್ದರು.

ಪ್ರಜಾಪ್ರಭುತ್ವವು ಬಾಲ್ಯಾವಸ್ಥೆಯಲ್ಲಿರುವಾಗ, ರಾಷ್ಟ್ರದಲ್ಲಿ ಶಿಸ್ತು ಮತ್ತು ಸತ್ಯ ಕೆಳಮಟ್ಟದಲ್ಲಿ ಇರುವಾಗ ರಾಷ್ಟ್ರದ ಭದ್ರತೆಗೆ ಸರ್ವಾಧಿಕಾರವು ಕೆಲವು ಕಾಲ ಇರಬೇಕಾದುದು ಅವಶ್ಯಕವೆಂದು ಕಾಣುತ್ತಿದೆ. ಆಳುವ ಪಕ್ಷದವರೇ ಆಗಲಿ, ವಿರೋಧ ಪಕ್ಷದವರೇ ಆಗಲಿ ಸುಭದ್ರವಾದ ಮತ್ತು ಶಿಸ್ತಿನಿಂದ ಕೂಡಿದ ಸರ್ಕಾರವನ್ನು ಅಪೇಕ್ಷಿಸುತ್ತಾರೆ. ಇಂಥ ಸುಭದ್ರವಾದ ಸರ್ಕಾರವನ್ನು ಸ್ಥಾಪಿಸಲು ಶ್ರೀ ನೆಹರೂರವರು ಬಹಳ ಮಟ್ಟಿಗೆ ಕಾರಣರಾದರು.

## ಕೈಗಾರಿಕೆಗಳು

ಲೋಕೋಪಯೋಗಿ ಮಂತ್ರಿಗಳಾಗಿದ್ದ ಶ್ರೀ ಜೆ. ಮಹಮದ್ ಇಮಾಂರವರು ಸರಕಾರದ ಒಡೆತನದಲ್ಲಿದ್ದ ಕೈಗಾರಿಕೆಗಳನ್ನು ಖಾಸಗೀಕರಣಗೊಳಿಸುವುದರ ವಿರುದ್ಧ ಹೇಳಿಕೆ ನೀಡುವುದು ಹೊಸದಾದ ವಿಷಯವೇನಲ್ಲ ಎಂದು ಭಾವಿಸಿದ್ದರು ಹಾಗೂ 1944ರಲ್ಲಿ ಇತರ ಸದಸ್ಯರ ಜೊತೆಯಲ್ಲಿ ಸರ್ಕಾರದ ಕೈಗಾರಿಕೆಗಳನ್ನು ಖಾಸಗಿ ವ್ಯಕ್ತಿಗಳಿಗೆ ಮಾರಾಟ ಮಾಡುವ ಸರ್ಕಾರದ ನೀತಿಯ ವಿರುದ್ಧ ಲಾಠಿ ಹಿಡಿದು ವಿರೋಧಿಸಿದ್ದರು. ಅವರು ಸರ್ಕಾರ ಅಧಿಕ ನಿಯಂತ್ರಣ ವಿಧಿಸಬೇಕೆಂದು ಬಯಸಿದ್ದರು ಮತ್ತು ಶ್ರೀಮಂತರನ್ನು ಇನ್ನೂ ಹೆಚ್ಚು ಶ್ರೀಮಂತರನ್ನಾಗಿಸುವ, ಬಡವರನ್ನು ಮತ್ತಷ್ಟು ಬಡವರನ್ನಾಗಿಸುವ ಮುಕ್ತ ನೀತಿಯನ್ನು ಅನುಸರಿಸಬಾರದೆಂದು ಬಯಸಿದ್ದರು. ನಿವೃತ್ತ ಅಧಿಕಾರಿಗಳನ್ನು ಕಂಪೆನಿಯ ಡೈರೆಕ್ಟರ್‌ಗಳನ್ನಾಗಿ ನೇಮಿಸುವುದಕ್ಕೆ ಅಥವಾ ಹೊರಗಿನವರನ್ನು ಶೇರುದಾರರಾಗಿ ನೇಮಿಸಿಕೊಳ್ಳುವುದಕ್ಕೆ ವಿರೋಧ ವ್ಯಕ್ತಪಡಿಸಿದ್ದರು. ಆದರೆ ಸರ್ಕಾರದ ಕಾರ್ಖಾನೆಗಳನ್ನು ಖಾಸಗಿ ವ್ಯಕ್ತಿಗಳಿಗೆ ವಹಿಸುವುದನ್ನು ಸಾರಾಸಗಟಾಗಿ ಅವರು ವಿರೋಧಿಸಿದ್ದರು. ವಾಸ್ತವವಾಗಿ ಖಾಸಗಿ ವ್ಯಕ್ತಿಗಳು ಹೊಸ ವಲಯಗಳಲ್ಲಿ ಪ್ರವೇಶಿಸಲು ಇಚ್ಛಿಸುತ್ತಿರಲಿಲ್ಲ. ಕೈಗಾರಿಕೆಗಳನ್ನು ನಡೆಸುವ ವಿಷಯದಲ್ಲಿ ಸರಕಾರ ಮತ್ತು ಖಾಸಗಿ ವ್ಯಕ್ತಿಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿರುವುದನ್ನು ಅವರು ಒಪ್ಪಿಕೊಂಡರು. ಸರಕಾರೀ ಕೈಗಾರಿಕೆಗಳಲ್ಲಿ ಉದ್ಯೋಗಿಗಳನ್ನು ನೇಮಕ ಮಾಡುವಾಗ ಪಂಗಡಗಳನ್ನು ಪರಿಗಣಿಸಲಾಗುತ್ತದೆ ಆದರೆ ಖಾಸಗಿ ಕೈಗಾರಿಕೆಗಳು ಸಾಮರ್ಥ್ಯ ಆಧಾರದ ಮೇಲೆ ಉದ್ಯೋಗಗಳನ್ನು ನೀಡುತ್ತಾರೆ. ಉತ್ಪಾದನೆ ಹೆಚ್ಚಿಸಲು ಖಾಸಗಿ ಕೈಗಾರಿಕೆಗಳಿಗೆ ಹೆಚ್ಚಿನ ಅವಕಾಶಗಳನ್ನು ಹೊಂದಿರುತ್ತವೆ. ನಿರ್ವಾಹಕ ನಿರ್ದೇಶಕ ನೇಮಕಾತಿಯನ್ನು ನಿಯಂತ್ರಿಸಲು ಮತ್ತು ಉದ್ಯೋಗಿಗಳ ಸೇವೆಯ ಪರಿಸ್ಥಿತಿಯನ್ನು ನಿಯಂತ್ರಿಸಲು ಸರಕಾರ ಕಂಪೆನಿ ಕಾಯ್ದೆಗೆ ತಿದ್ದುಪಡಿಗಳನ್ನು ಮಾಡಿತು. ಈ ವರ್ಷದಲ್ಲಿ ರಾಜ್ಯ ಬಟ್ಟೆಗಳ ಅತಿಯಾದ ಕೊರತೆಯನ್ನು ಎದುರಿಸಿತು. ಸ್ವದೇಶದಲ್ಲಿ ಕೊರತೆಯಿದ್ದರೂ ಬಟ್ಟೆ ಮತ್ತು ನೂಲನ್ನು ರಫ್ತು ಮಾಡಲಾಗುತ್ತಿದೆಯೆಂದು ಸದಸ್ಯರು ಆಕ್ಷೇಪಿಸಿದರು. ಸರಕಾರ ಬೆಲೆಯನ್ನು ಮತ್ತು ಬಟ್ಟೆಯ ವಿತರಣೆಯನ್ನು ನಿಯಂತ್ರಿಸಿತು 1945ರಲ್ಲಿ ಸರಕಾರ ಒಂದು ಕೈಗಾರಿಕಾ ಉಪನಗರವನ್ನು 22 ಲಕ್ಷ ರೂಪಾಯಿ ವೆಚ್ಚದಲ್ಲಿ ರೂಪಿಸುವ ಘೋಷಣೆ ಮಾಡಿತು ಮತ್ತು ಎಲೆಕ್ಟ್ರಿಕ್ ಮೋಟಾರು ಮತ್ತು ಬಿಡಿಭಾಗಗಳನ್ನು ಉತ್ಪಾದಿಸಲು ಒಂದು ಕಾರ್ಖಾನೆ ಸ್ಥಾಪಿಸುವುದಾಗಿ ಘೋಷಿಸಿತು. ಕೆ.ಜಿ.ಎಫ್. 3.2 ಕೋಟಿ ರೂಪಾಯಿ ಮೌಲ್ಯದ ಚಿನ್ನವನ್ನು ಉತ್ಪಾದಿಸುತ್ತಿತ್ತು . ಆ ವರ್ಷದ ಅವಧಿಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸಮಗ್ರ ಕೈಗಾರಿಕಾಭಿವೃದ್ಧಿ ಕಂಡುಬಂದಿತು.

## ಭ್ರಷ್ಟಾಚಾರ

1943 ಅಕ್ಟೋಬರ್ ಅಧಿವೇಶನದಲ್ಲಿ ಶ್ರೀ ಸಿದ್ದರಾಮಯ್ಯನವರು ಪ್ರತಿಪಾದಿಸಿದ ಭ್ರಷ್ಟಾಚಾರವನ್ನು ಸರಕಾರಿ ಇಲಾಖೆಗಳಲ್ಲಿ ಹೊಡೆದೊಡಿಸುವ ವಿಷಯವನ್ನು ಕುರಿತು ಚರ್ಚಿಸಲಾಯಿತು. ಈ ಚರ್ಚೆಯಲ್ಲಿ ಹಲವಾರು ಸದಸ್ಯರು ಭಾಗವಹಿಸಿದ್ದರು. ಸರಕಾರದ ಪರವಾಗಿ ಉತ್ತರಿಸುತ್ತಾ ಶ್ರೀ ಜೆ. ಮೊಹಮ್ಮದ್ ಇಮಾಂ ತೀರ್ಮಾನ ಉದ್ದೇಶಕ್ಕೆ ಭಿನ್ನವಾಗಿರಲಿಲ್ಲ. ಆದರೆ ಭ್ರಷ್ಟಾಚಾರದ ಬಗ್ಗೆ ಉತ್ಪ್ರೇಕ್ಷೆಯ ಲೆಕ್ಕಾಚಾರ ನೀಡಲಾಗಿದೆಯೆಂದು

ಹೇಳಿದರು. ಗೆಜೆಟೆಡ್ ಅಧಿಕಾರಿಗಳು ಪ್ರಮಾಣಿಕರಾಗಿದ್ದಾರೆ ಮತ್ತು ಬ್ರಿಟಿಷ್ ಭಾರತದಲ್ಲಿದ್ದವರಿಗಿಂತ ಕಡಿಮೆಯೇನೂ ಇಲ್ಲ ಎಂದರು. ಆಹಾರ ಇಲಾಖೆಯಲ್ಲಿ ಸರಕಾರ ಕೆಲವು ಅಧಿಕಾರಿಗಳನ್ನು ಶಿಕ್ಷಿಸಿದೆ. ಅಂತಹ 200 ಸಂಗತಿಗಳಿದ್ದವು. ರೈಲ್ವೆ ಇಲಾಖೆಯಲ್ಲೂ ಕೈಗೊಳ್ಳಲಾಗಿದೆ. ಒಂದು ವೇಳೆ ಅಂತಹ ಸಂಗತಿಗಳನ್ನು ಸರಕಾರದ ಗಮನಕ್ಕೆ ತಂದರೆ ಕ್ರಮ ಕೈಗೊಳ್ಳಲಾಗುವುದು. ಈ ವಿಷಯದಲ್ಲಿ ಅವರು ಸಾರ್ವಜನಿಕರ ಸಹಾಯವನ್ನು ಕೋರಿದರು. ಲಂಚ ತೆಗೆದುಕೊಳ್ಳುವವರಿಗಿಂತ ಕೊಡುವವರೇ ಹೆಚ್ಚು ಭ್ರಷ್ಟರು ಎಂಬುದು ಅದರ ಅಭಿಪ್ರಾಯವಾಗಿದೆ. ಒಂದು ವೇಳೆ ವಾರ್ತಾ ಪತ್ರಿಕೆಗಳು ಮೌಲ್ಯವುಳ್ಳ ಸುದ್ದಿಯನ್ನು ಪ್ರಕಟಿಸಿದರೆ ಯಾವುದೇ ಕ್ರಮ ಕೈಗೊಳ್ಳಲಾಗುವುದಿಲ್ಲ. ಒಂದು ವೇಳೆ ಯಾವುದೇ ಆಧಾರವಿಲ್ಲದೆ ಅವರು ಭ್ರಷ್ಟಾಚಾರದ ಸಂಗತಿಗಳನ್ನು ಪ್ರಕಟಿಸಿದರೆ ಅವರನ್ನೇ ಶಿಕ್ಷಿಸಲಾಗುವುದು. ಒಂದು ವೇಳೆ ಅಧಿಕಾರೇತರ ಭ್ರಷ್ಟಾಚಾರ ನಿಂತರೆ, ಸರಕಾರದ ಸೇವೆಗಳ ಮೇಲೆ ಅದು ಪರಿಣಾಮ ಬೀರುತ್ತದೆಂದು ಶ್ರೀ ಇಮಾಂ ಹೇಳಿದರು. ಈ ತೀರ್ಮಾನವನ್ನು ಮತಕ್ಕಾಗಿ ಮುಂದಿಟ್ಟು ಅಧಿಕ ಮತದಿಂದ ಮಂಡಿಸಲಾಯಿತು.

## ಶಿಕ್ಷಣ

1941ರ ಬಜೆಟ್ ಅಧಿವೇಶನದಲ್ಲಿ ರಾಷ್ಟ್ರಪತಿಗಳು 1443 ಶಾಲೆಗಳು ಸಹಾಯಧನ ಪಡೆಯುತ್ತಿವೆಯೆಂದು ಸಭೆಗೆ ಸೂಚಿಸಿದರು. ನಂತರ ನಡೆದ ಚರ್ಚೆಯಲ್ಲಿ ಶಿಕ್ಷಣ ಮಂತ್ರಿಗಳಾದ ಶ್ರೀ ಜೆ. ಮೊಹಮ್ಮದ್ ಇಮಾಂ ಶಿಕ್ಷಣ ಕ್ಷೇತ್ರದಲ್ಲಿ ಸರಕಾರದ ಪ್ರಯತ್ನಗಳು ಸಾಕಷ್ಟಿಲ್ಲವೆಂದು ಒಪ್ಪಿಕೊಂಡರು. ತಿರುವನಂತಪುರ, ಕೊಚ್ಚಿನ್, ಹೈದರಾಬಾದ್ ಮತ್ತು ಮದ್ರಾಸ್ ರಾಜ್ಯಗಳಲ್ಲಿ ಖಾಸಗಿ ವ್ಯಕ್ತಿಗಳು ಸಹಾಯಧನ ಪಡೆದ ಶಾಲೆಗಳನ್ನು ಸ್ಥಾಪಿಸಿದರು ಆದರೆ ಮೈಸೂರಿನಲ್ಲಿ ಶೇಕಡ 95 ಭಾಗ ಜವಾಬ್ದಾರಿಯನ್ನು ಸರಕಾರದ ಮೇಲೆ ಹೊರಿಸಲಾಗಿದೆ. 375 ಮಾಧ್ಯಮಿಕ ಶಾಲೆಗಳು ಈಗಾಗಲೇ ಸ್ಥಾಪಿತವಾಗಿವೆ ಮತ್ತು ಇನ್ನೂ 375 ಶಾಲೆಗಳನ್ನು ಮುಂದಗಿನ ವರ್ಷ ತೆರೆಯಲಾಗುವುದು. ಶಿಕ್ಷಣ ತೆರಿಗೆಯನ್ನು 3 ಪೈಸೆಗಳಷ್ಟು ವಸ್ತುಗಳ ಮೇಲೆ ಹೆಚ್ಚಿಸಲಾಗಿದೆ. ಪ್ರತಿ ರೂಪಾಯಿಯಲ್ಲಿ 2 ಆಣೆಗಳಷ್ಟು ತೆರಿಗೆಯನ್ನು ಮುನಿಸಿಪಲ್ ಆದಾಯದ ಮೇಲೆ ವಿಧಿಸಲಾಗಿದೆ. ಮಲೆನಾಡಿನಲ್ಲಿ, ಗುಡಿಸಲುಗಳು ಚದುರಿ ಹೋಗಿದ್ದವು ಮತ್ತು ಸರಕಾರ ಕೇಂದ್ರಿಯ ಶಾಲೆಯೊಂದನ್ನು 50 ಅಥವಾ 60 ಗುಡಿಸಲುಗಳಿಗೆ ತೆರೆಯಲು ಯೋಚಿಸುತ್ತಿದೆ. 30 ಹೊಸ ಮಾಧ್ಯಮಿಕ ಶಾಲೆಗಳನ್ನು ಮಂಜೂರು ಮಾಡಲಾಗಿದೆ. ಹೈಯ್ಯರ್ ಪ್ರೈಮರಿ ಶಾಲೆಗಳನ್ನು ಪಕ್ಕಾ ಪ್ರೈಮರಿ ಶಾಲೆಗಳಾಗಿ ಒಬ್ಬ ಆಂಗ್ಲ ಶಿಕ್ಷಕರನ್ನು ಹೊಂದಿಸಿ ಪರಿವರ್ತಿಸಲಾಗುವುದು. ಮಾಧ್ಯಮಿಕ ಶಾಲೆಗಳಲ್ಲಿ ಶ್ರೀಮಂತ ಪೋಷಕರು ಶುಲ್ಕ ಪಾವತಿಸಲು ಸಾಧ್ಯವಾಗುವಂತೆ ಶುಲ್ಕ ವಿಧಿಸುವ ಬಗ್ಗೆ ಸರಕಾರ ಪರಿಶೀಲಿಸುತ್ತದೆ ಎಂದರು.

## ಪ್ರಾಥಮಿಕ ಶಿಕ್ಷಣ

ಸ್ಥಳೀಯ ಶಿಕ್ಷಣ ಅಧಿಕಾರಿಗಳಿಂದ, ಪ್ರಾಥಮಿಕ ಶಿಕ್ಷಣವನ್ನು ಸರಕಾರ ತನ್ನ ಹತೋಟಿಗೆ ತೆಗೆದುಕೊಂಡಿದೆಯೆಂದು ಶಿಕ್ಷಣ ಮಂತ್ರಿಗಳು ಹೇಳಿದರು. ಹೊಸ ಕಾಯಿದೆಯ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತರಲು ಅವಕಾಶ ನೀಡಿದೆ. ಆದರೆ ಈಗಿರುವ ಶಾಲೆಗಳ

ಸಂಖ್ಯೆ ತೃಪ್ತಿಕರವಾಗಿಲ್ಲ. ಆದ್ದರಿಂದ ಸರಕಾರ ಒಂದು ಯೋಜನೆಯನ್ನು ತಯಾರಿಸಿದೆ. ಇದರಲ್ಲಿ 1000 ಶಾಲೆಗಳನ್ನು 4 ವರ್ಷಗಳಲ್ಲಿ ತೆರೆಯಲಾಗುವುದು. ಪ್ರಾರಂಭದಲ್ಲಿ ಯೋಜನೆಗೆ ತಗಲುವ ವೆಚ್ಚ 13 ಲಕ್ಷ ರೂಪಾಯಿಗಳು. ಇಂದಿನ ಪರಿಸ್ಥಿತಿಯಲ್ಲಿ ಹಣಕಾಸಿನ ಕೊರತೆಯಿಂದಾಗಿ ಇದು ಸಾಧ್ಯವಾಗುವುದಿಲ್ಲ. ಶ್ರೀ ಎಸ್.ಎನ್. ಎಂ. ರಿಜ್ವಿ ಪ್ರತಿಬಾರಿ ಈ ವಿಷಯವನ್ನು ಪ್ರಸ್ತಾಪಿಸಿದಾಗ ಸರಕಾರ ಇದೇ ತೊಂದರೆಯನ್ನು ಮುಂದಿಡುತ್ತಿದೆಯೆಂದು ವಾದಿಸಿದರು. ಶ್ರೀ ಕೆ.ಸಿ. ರೆಡ್ಡಿಯವರು ಸಾಕ್ಷರತೆಯ ಪ್ರಮಾಣ 1891ರಲ್ಲಿ ಶೇಕಡಾ 4.3 ಮತ್ತು 1941ರಲ್ಲಿ ಶೇಕಡಾ 12.9 ಇದೆಯೆಂದು ಹೇಳುತ್ತಾ ಶೇಕಡಾ 8 ಕ್ಕೆ ಹೆಚ್ಚಿಸಲು ಸರಕಾರ ಅರ್ಧ ಶತಮಾನ ತೆಗೆದುಕೊಂಡಿದೆಯೆಂದು ಅರ್ಥ ಮತ್ತು ಈ ದರದಲ್ಲಿ ಪೂರ್ಣ ಸಾಕ್ಷರತೆ ಸಾಧಿಸಲು ಅನೇಕ ಶತಮಾನಗಳೇ ಬೇಕಾಗುವುದೆಂದು ಹೇಳಿದರು. ಆದರೆ ಮಂತ್ರಿಗಳು ಸರಾಸರಿಯ ಶೇಕಡಾವಾರು ಮಾಹಿತಿ ಸಮರ್ಪಕವಾಗಿಲ್ಲವೆಂದು ವಾದಿಸಿದರು. ಶ್ರೀ ಅಬ್ದುಲ್ ರಾಫ್ ಖಾನ ವಿಶ್ವವಿದ್ಯಾನಿಲಯ ಶಿಕ್ಷಣಕ್ಕಾಗಿ ಹಣಕಾಸನ್ನು ವರ್ಗಾಯಿಸಲಾಗುತ್ತಿದೆಯೆಂದು ಆರೋಪಿಸಿದರು. ಶ್ರೀ ಎಸ್. ಸಿ. ಮಲ್ಲಯ್ಯ ರೈತರಿಂದ ಶಿಕ್ಷಣ ಶುಲ್ಕವನ್ನು ವಸೂಲು ಮಾಡುತ್ತಿರುವುದರಿಂದ, ಸರಿಯಾದ ಸೌಲಭ್ಯಗಳನ್ನು ಒದಗಿಸುವುದು ಸರಕಾರದ ಕರ್ತವ್ಯವೆಂದು ವಾದಿಸಿದರು. ಅವರು 10 ವರ್ಷದ ಪ್ರಾಥಮಿಕ ಶಿಕ್ಷಣ ಯೋಜನೆ ಇದಕ್ಕಾಗಿ ಅವಶ್ಯವಿದೆ ಎಂದರು. ಶಿಕ್ಷಣ ಮಂತ್ರಿಗಳು ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿಗೆ ತರುವುದು ಒಂದು ವಾಸ್ತವಿಕ ಪ್ರಸ್ತಾಪ ಆಗಲಾರದೆಂದು ವಾದಿಸಿದರು. ಇಂತಹ ಸನ್ನಿವೇಶಗಳಲ್ಲಿ ಸರಕಾರ ಉತ್ಕೃಷ್ಟವಾದುದನ್ನೇ ಮಾಡುವಂತೆ ಸದಸ್ಯರು ಒತ್ತಾಯಿಸಬೇಕೆಂದು ಹೇಳಿದರು. ತೀರ್ಮಾನವನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು.

1941ರ ಅಕ್ಟೋಬರ್ ಅಧಿವೇಶನದಲ್ಲಿ ಶ್ರೀ ಡಿ. ಹಾಲಪ್ಪನವರು ಕಡ್ಡಾಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ನೀಡಿದ ಅಭಿಪ್ರಾಯಕ್ಕೆ ಪ್ರತಿಯಾಗಿ ಅನೇಕ ಗಣ್ಯರು ತಮ್ಮ ತಮ್ಮ ಅಬಿಪ್ರಾಯ ಮುಂದಿಟ್ಟರು. ಶ್ರೀ ಜೆ. ಎಂ. ಇಮಾಂ, ಶಿಕ್ಷಣಮಂತ್ರಿಗಳು, ಕಡ್ಡಾಯ ಶಿಕ್ಷಣವನ್ನು ತಕ್ಷಣದಲ್ಲಿ ಜಾರಿಗೆ ತರುವುದು ಸಾಧ್ಯವಿಲ್ಲ. ಸಾಕಷ್ಟು ಬೋಧಕ ವರ್ಗ ಮತ್ತು ಕಟ್ಟಡಗಳನ್ನು ಒದಗಿಸಿಕೊಳ್ಳಬೇಕು ಎಂಬುದಾಗಿ ವಿವರಿಸಿದರು. ಒಂದು ನಿರ್ದಿಷ್ಟ ಶಿಕ್ಷಣವನ್ನು ಮುಗಿಸದೇ ಒಬ್ಬ ಹುಡುಗ ಶಾಲೆ ಬಿಟ್ಟರೂ ಅದೇನೂ ಅಪವ್ಯಯವಾಗಲಾರದೆಂದು ಅವರು ಒಪ್ಪಿಕೊಂಡರು. ಸರಕಾರ ಈ ವಿಷಯವನ್ನು ಪರಿಶೀಲಿಸುವುದಾಗಿ ತಿಳಿಸಿದರು. ಒಂದು ವೇಳೆ ಎಲ್ಲಾ ಜನರೂ ಸ್ವಲ್ಪ ಹೆಚ್ಚುವರಿ ಭಾರ ಹೊರಲು ಸಿದ್ಧವಾಗಿದ್ದರೆ ಸರಕಾರ ಈ ದಿಕ್ಕಿನಲ್ಲಿ ಮುಂದುವರಿಯುವುದೆಂದು ಅವರು ಹೇಳಿದರು.

1942ರ ಬಜೆಟ್ ಅಧಿವೇಶನದಲ್ಲಿ ನಡೆದ ಚರ್ಚೆಯಲ್ಲಿ ಭಾಗವಹಿಸಿ ಪ್ರಾಥಮಿಕ ಶಿಕ್ಷಣವನ್ನು ಕುರಿತಂತೆ ಶ್ರಿ ಜೆ. ಮೊಹಮ್ಮದ್ ಇಮಾಂ ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿದರು. ಪ್ರಸಕ್ತ ಸಾಲಿನಲ್ಲಿ ಪ್ರಾಥಮಿಕ ಶಿಕ್ಷಣಕ್ಕಾಗಿ ತೆಗೆದಿರಿಸಿದ ಹಣ 17 ಲಕ್ಷದಿಂದ 20.91 ಲಕ್ಷ ರೂಪಾಯಿಗೆ ಹೆಚ್ಚಿದೆ. ಶಿಕ್ಷಕರ ವೇತನ ಶ್ರೇಣಿಯನ್ನು ಪರಿಷ್ಕರಿಸಲಾಗಿದೆ. ಆದರೆ ಕಾಲಾವಧಿಯನ್ನು ಪರಿಗಣಿಸಿ ಉಳಿತಾಯವನ್ನು 370 ಶಾಲೆಗಳನ್ನು ತೆರೆಯಲು ಬಳಸಲಾಗಿದೆ. ಈ ವಿಷಯದಲ್ಲಿ ಸರಕಾರ ಒಂದೇ ಜನರ ಆಶೋತ್ತರಗಳನ್ನು ಈಡೇರಿಸಲಾರದು ಹಾಗೂ ಜನರ ಸಹಕಾರ ಅಗತ್ಯವಿದೆ. ಬೆಂಗಳೂರು ಮತ್ತು ಮೈಸೂರುಗಳಲ್ಲಿ ಸಾಕ್ಷರತೆಯ ಪ್ರಮಾಣ

ಶೇಕಡ 35, ಇನ್ನಿತರ ನಗರ ಪ್ರದೇಶಗಳಲ್ಲಿ ಅದು ಶೇಕಡ 20 ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಅದು ಕೇವಲ ಶೇಕಡ 7 ಮಾತ್ರ ಆಗಿದೆ. ರಾಜ್ಯದ ಸರಾಸರಿಯನ್ನು ಶೇಕಡ 13 ಕ್ಕೆ ಎಂದು ಲೆಕ್ಕಚಾರ ಮಾಡಲಾಗಿದೆ. ಸರಕಾರ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಶಾಲೆಗಳನ್ನು ತೆರೆಯಲು ಆಗ್ರಹಿಸಿದಾಗ ಮಾನ್ಯ ಶಿಕ್ಷಣ ಮಂತ್ರಿಗಳು ಒಂದು ವೇಳೆ ಮುನಿಸಿಪಾಲಿಟಿ ತೀರ್ಮಾನ ಹೊರಡಿಸಿದರೆ ಸರಕಾರ ಅದರ ಬಗ್ಗೆ ಪರಿಶೀಲಿಸುವುದಾಗಿ ಹೇಳಿದರು.

## ವೃತ್ತಿ ಶಿಕ್ಷಣ

1942ರ ಅಧಿವೇಶನದಲ್ಲಿ ವೃತ್ತಿ ಶಿಕ್ಷಣಕ್ಕೆ ಸಂಬಂಧಿಸಿದ ಚರ್ಚೆಯಲ್ಲಿ ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ಮಾನ್ಯ ಶಿಕ್ಷಣ ಮಂತ್ರಿಗಳಾದ ಶ್ರೀ ಜೆ. ಮೊಹಮ್ಮದ್ ಇಮಾಂ ಹೀಗೆ ವಿವರಿಸಿದರು.

ನಿರುದ್ಯೋಗ ಒಂದು ಸಾರ್ವತ್ರಿಕ ಸಮಸ್ಯೆ. ಹೊರಗಿನವರು ರಾಜ್ಯದಲ್ಲಿ ಉದ್ಯೋಗವನ್ನು ಪಡೆದಿದ್ದಾರೆ ಮತ್ತು ವ್ಯಾಪಾರದಲ್ಲಿ ಮಾರ್ವಾಡಿಗಳು ಹಾಗೂ ಗುಜರಾತಿಗಳು ಅಭಿವೃದ್ಧಿ ಹೊಂದುತ್ತಿದ್ದಾರೆ. ಹೊರಗಿನವರು ಹೋಟೆಲುಗಳನ್ನು ನಡೆಸುತ್ತಿದ್ದಾರೆ. ಕಾತೆವಾಡ ಮತ್ತು ಮಲಬಾರ್ ನಿಂದ ಬಂದ ಜನರು ಉದ್ಯೋಗವನ್ನು ಪಡೆದಿದ್ದಾರೆ. ಪ್ರಸ್ತುತ ಪರಿಸ್ಥಿತಿಗೆ ಜನರು ಹೊಂದಿರುವ ಮನೋಭಾವವೇ ಕಾರಣ ಹಾಗೂ ಕೇಂದ್ರ ನೇಮಕಾತಿ ಮಂಡಳಿಯನ್ನು ಶಪಿಸುವುದರಲ್ಲಿ ಯಾವುದೇ ಪ್ರಯೋಜನವಿಲ್ಲ. ತಮ್ಮ ಮಕ್ಕಳಿಗೆ ಸರಕಾರಿ ಉದ್ಯೋಗ ಕೊಡಿಸುವ ಉದ್ದೇಶವನ್ನು ಪೊಷಕರು ಹೊಂದಿದ್ದಾರೆ. ಪ್ರತಿಯೊಬ್ಬ ಶಿಕ್ಷಕ ವ್ಯಕ್ತಿಗೆ, ಸರಕಾರಿ ಸೇವೆಯಲ್ಲಿ ಸ್ಥಾನ ದೊರಕಿಸಿಕೊಡಲು ಸಾಧ್ಯವಿಲ್ಲ. ಸಾಧ್ಯವಾದಷ್ಟು ಮಟ್ಟಿಗೆ ವೃತ್ತಿ ತರಬೇತಿಯನ್ನು ನೀಡಲಾಗುತ್ತಿದೆ. ಮಾಧ್ಯಮಿಕ ಶಾಲೆಗಳಲ್ಲಿ ನೇಯ್ಗೆಯ ಬಗ್ಗೆ ಹೇಳಿಕೊಡಲಾಗುತ್ತಿದೆ. ಆದರೆ ವಿದ್ಯಾರ್ಥಿಗಳಲ್ಲಿ ಅದರ ಬಗ್ಗೆ ಆಸಕ್ತಿಯಿಲ್ಲ, ಏಕೆಂದರೆ ಅವರು ಕೈಗಾರಿಕೆ ಸ್ಥಾಪಿಸುವ ಉದ್ದೇಶವನ್ನು ಹೊಂದಿಲ್ಲ. ಮಾಧ್ಯಮಿಕ ಶಾಲೆಗಳಲ್ಲಿ ಪ್ರಾರಂಭಿಸಲ್ಪಟ್ಟ ನೇಯ್ಗೆ ವಿಭಾಗವನ್ನು ರದ್ದುಗೊಳಿಸಬೇಕು. ಔಷಧ ವಿಜ್ಞಾನ ಹಾಗೂ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಪದವಿ ಪಡೆದು ಬರುವವರನ್ನು ಸರಕಾರಿ ಕೆಲಸಕ್ಕೆ ಕಾಯದೆ, ಸ್ವಂತ ಕೆಲಸ ಮಾಡುವಂತೆ ಪ್ರೇರೇಪಿಸಬೇಕು. ಗ್ರಾಮೀಣ ಪ್ರದೇಶಗಲ್ಲಿ ಸೇವೆ ಮಾಡಲು ಅವರು ಇಚ್ಛಿಸುತ್ತಿಲ್ಲ. ಸರ್. ಎಂ. ವಿಶ್ವೇಶ್ವರಯ್ಯ ನೀಡಿದ ಹಣದಿಂದ, ಸರಕಾರಿ ಮರದ ಕೆಲಸ, ಚಿನಿವಾರ ಕೆಲಸದಲ್ಲಿ ತರಬೇತಿ ನೀಡಲು ಒಂದು ತಾಂತ್ರಿಕ ಸಂಸ್ಥೆಯನ್ನು ಸ್ಥಾಪಿಸಲು ಯೋಚಿಸುತ್ತಿದೆ. ಜನರ ಮನೋಭಾವನೆ ಬದಲಾಯಿಸುವಂತೆ ಮಾರ್ಗದರ್ಶನ ನೀಡಬೇಕೆಂದು ಅವರು ಸದಸ್ಯರಿಗೆ ಹೇಳಿದರು. ತೀರ್ಮಾನವನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು.

## ಮಿಲಿಟರಿ ಕಾಲೇಜುಗಳ ಪ್ರವೇಶ

1942ರ ಅಕ್ಟೋಬರ್ ಅಧಿವೇಶನದಲ್ಲಿ ನಡೆದ ಚರ್ಚೆಯಲ್ಲಿ ಮಾನ್ಯ ಶಿಕ್ಷಣ ಮಂತ್ರಿಗಳಾಗಿದ್ದ ಶ್ರೀ ಜೆ. ಮೊಹಮ್ಮದ್ ಇಮಾಂ, ವಿದ್ಯಾರ್ಥಿಗಳಿಗೆ ಮಿಲಿಟರಿ ತರಬೇತಿ ನೀಡಬೇಕಾದುದು ಅವಶ್ಯಕತೆಯಿದೆಯೆಂದು ತತ್ವಶಃ ಒಪ್ಪಿಕೊಂಡರು. ತನ್ನ ಸರಹದ್ದು ರಕ್ಷಣೆಗೆ

ಭಾರತ ಬಲಶಾಲಿಯಾದ ಸೇನಾಪಡೆ ಹೊಂದಿರಬೇಕು. ರಾಜಭವನದ ಪಡೆಗಳು ಮತ್ತು ಸೇನಾ ಪಡೆಗಳನ್ನು ಪುನರ್ ಸಂಘಟಿಸಬೇಕೆಂದು ರಾಷ್ಟ್ರಪತಿಗಳು ಮಿಲಿಟರಿ ತರಬೇತಿಗಾಗಿ ತಮ್ಮ ಇಬ್ಬರು ಮಕ್ಕಳನ್ನು ಕಳಿಸಿ ಇತರರಿಗೆ ಉದಾಹರಣೆಗೆ ನೀಡಿದರು ಎಂದರು. ಕೊಚ್ಚಿನ್ ಮತ್ತು ತಿರುವನಂತಪುರಗಳಲ್ಲಿ (Travancore) ಹಾಗೂ ಮದ್ರಾಸ್‌ಗಳಲ್ಲಿ ಖಾಸಗಿ ವಲಯ ಬಹಳ ಚುರುಕಾಗಿದೆ. ಸರಕಾರಿ ಮಸೂದೆಯ ಹಿಂದೆ ಇದ್ದ ಉದ್ದೇಶವನ್ನು ಪ್ರಶಂಶಿಸಿದೆ. ತೀರ್ಮಾನವನ್ನು ಸಭೆಯ ಮುಕ್ತಾಯದೊಂದಿಗೆ ಹಿಂದಕ್ಕೆ ತೆಗೆದುಕೊಳ್ಳಲಾಯಿತು.

ಮಾಧ್ಯಮಿಕ ಶಾಲೆಗಳ ಕುರಿತಂತೆ 1942ರ ಬಜೆಟ್ ಅಧಿವೇಶನದಲ್ಲಿ ನಡೆದ ಚರ್ಚೆಯಲ್ಲಿ ಭಾಗವಹಿಸಿ ಶ್ರೀ ಜೆ. ಮೊಹಮ್ಮದ್ ಇಮಾಂ ತಮ್ಮ ಅಭಿಪ್ರಾಯಗಳನ್ನು ಹೀಗೆ ವಿವರಿಸಿದರು. ಮಾನ್ಯ ಶ್ರೀ ಜಿ. ಮೊಹಮ್ಮದ್ ಇಮಾಂ, ಶಿಕ್ಷಣ ಮಂತ್ರಿಗಳು, ಅನಕ್ಷರತೆಯ ಕಲಾಪಕ್ಕೆ ಬೀಳುತ್ತಿರುವ ಜನರನ್ನು ತಡೆಹಿಡಿಯಲು ಮಾಧ್ಯಮಿಕ ಶಾಲೆಗಳನ್ನು ಹೆಚ್ಚು ಹೆಚ್ಚು ತೆರೆಯಬೇಕಾದ ಅವಶ್ಯಕತೆ ಇದೆಯೆಂದು ಒಪ್ಪಿಕೊಂಡರು. 32 ಮಾಧ್ಯಮಿಕ ಶಾಲೆಗಳನ್ನು ತೆರೆಯಲಾಗುವುದು, ಅವುಗಳಲ್ಲಿ 24 ಶಾಲೆಗಳು ಗ್ರಾಮೀಣ ಪ್ರದೇಶಗಳಲ್ಲಿ ಸ್ಥಾಪಿತವಾಗುತ್ತವೆ. ಒಂದು ವೇಳೆ ಆಂಗ್ಲ ಭಾಷೆಯ ಶಿಕ್ಷಕರು ದೊರೆತರೆ, ಪ್ರಾಥಮಿಕ ಶಾಲೆಗಳನ್ನು ಮಾಧ್ಯಮಿಕ ಶಾಲೆಗಳಾಗಿ ಮಾರ್ಪಡಿಸಲಾಗುವುದು, ಶಿಕ್ಷಣದ ವಿಸ್ತರಣೆಯಲ್ಲಿ ಹಣಕಾಸಿನ ತೊಡಕುಗಳು ಎದುರಾಗಿವೆ. ಕಳೆದ 20 ವರ್ಷಗಳಲ್ಲಿ ಸಂದರ್ಭಗಳು ಬದಲಾಗಿವೆ ಮತ್ತು ಮಾಧ್ಯಮಿಕ ಶಾಲಾ ಶಿಕ್ಷಣಕ್ಕೆ ಕಂಡು ಬರುತ್ತಿರುವ ಹೆಚ್ಚಿನ ಬೇಡಿಕೆಯನ್ನು ಸರಕಾರ ಗಮನದಲ್ಲಿಟ್ಟು ಕೊಂಡಿದೆ. ಸರಕಾರ ಶುಲ್ಕವನ್ನು ಪುನಃ ವಿಧಿಸುವ ಸಲಹೆಯನ್ನು ಪರಿಶೀಲಿಸುತ್ತಿದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಆಶ್ರಯುವನ್ನು ಕೈಗೊಳ್ಳುವುದಿಲ್ಲ ಬಡ ಮುಕ್ಕಳಿಗೆ ಶುಲ್ಕದಲ್ಲಿ ರಿಯಾಯ್ತಿಯುನ್ನು ಮುಂದುವರೆಸಲಾಗುತ್ತದೆ. ಈ ಉದ್ದೇಶಕ್ಕಾಗಿ ಸರಕಾರ 1 ಲಕ್ಷ ರೂಪಾಯಿಗಳನ್ನು ಹೆಚ್ಚುವರಿಯಾಗಿ ತೆಗೆದಿಡಲು ಸಿದ್ದವಿದೆ ಎಂದರು.

## ಪಠ್ಯಪುಸ್ತಕ

ಪಠ್ಯಪುಸ್ತಕಗಳು ವಿಚಾರಕ್ಕೆ ಸಂಬಂಧಿಸಿದಂತೆ 1941ರ ದಸರಾ ಅಧಿವೇಶನದಲ್ಲಿ ನಡೆದ ಚರ್ಚೆಯಲ್ಲಿ ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ಶಿಕ್ಷಣ ಮಂತ್ರಿಗಳಾಗಿದ್ದ ಶ್ರೀ ಜೆ. ಮೊಮ್ಮದ್ ಇಮಾಂ ಈ ರೀತಿ ವ್ಯಕ್ತಪಡಿಸಿದರು. ಜಿಲ್ಲೆಗೆ ತಾಲ್ಲೂಕಿನಿಂದ ತಾಲ್ಲೂಕಿಗೆ ಜಿಲ್ಲೆಯಿಂದ ಪಠ್ಯಪುಸ್ತಕಗಳು ಬೇರೆ ಬೇರೆಯಾಗಿರುತ್ತವೆ. ಇತ್ತೀಚೆಗೆ ಪ್ರಾಥಮಿಕ ಶಾಲೆಗಳ ಪುಸ್ತಕಗಳ ವಿಭಾಗೀಯ ಪ್ರಕಟಣೆಯ ಪದ್ಧತಿಯನ್ನು ಜಾರಿಗೆ ತರಲಾಗಿದೆ. ರಾಜ್ಯದಾದ್ಯಂತ ಒಂದೇ ವೇಳೆಗೆ 3 ವರ್ಷ ಅವಧಿಗೆ ವಿಭಾಗೀಯವಲ್ಲದ ಪಠ್ಯಪುಸ್ತಕಗಳನ್ನು ಸೂಚಿಸಲಾಗುತ್ತಿತ್ತು. ಆದರೆ ಮಾಧ್ಯಮಿಕ ಶಾಲೆ ಹಾಗೂ ಪ್ರೌಢಶಾಲೆಗಳ ಅಂತಿಮ ವರ್ಷದ ಪಠ್ಯಪುಸ್ತಕಗಳನ್ನು ವರ್ಷದಿಂದ ವರ್ಷಕ್ಕೆ ಭಾಷಾ ವಿಷಯುದಲ್ಲಿ ಬದಲಾಯಿಸಲಾಗುತ್ತಿತ್ತು. ಸಾಹಿತ್ಯ ವರ್ಷದಿಂದ ವರ್ಷಕ್ಕೆ ಬೆಳೆಯುತ್ತಿದ್ದರಿಂದ ಶಿಕ್ಷಣ ವಿಭಾಗ ಉತ್ತಮ ಮಟ್ಟದ ಪಠ್ಯಪುಸ್ತಕಗಳಿಗಾಗಿ ನಿರಂತರರಾಗಿ ಹುಡುಕಾಟ ನಡೆಸುತ್ತಿತ್ತು ಎಂದರು.

## ವಾಯುಪಡೆ ತರಬೇತಿ ಕಾಲೇಜು ಪ್ರವೇಶ

1942ರ ಬಜೆಟ್ ಅಧಿವೇಶನದಲ್ಲಿ ವಾಯುಪಡೆ ತರಬೇತಿ ಕಾಲೇಜು ಪ್ರವೇಶಕ್ಕೆ ಸಂಬಂಧಿಸಿಂತೆ ನಡೆದ ಚರ್ಚೆಯಲ್ಲಿ ಭಾಗವಹಿಸಿ, ಶ್ರೀ ಜೆ. ಮೊಹಮ್ಮದ್ ಇಮಾಂ, ಶಿಕ್ಷಣ ಮಂತ್ರಿಗಳು ಈ ರೀತಿ ತಮ್ಮ ಅಭಿಪ್ರಾಯವ್ಯಕ್ತಪಡಿಸಿದರು. ವಿಶ್ವವಿದ್ಯಾನಿಲಯದ ನೀತಿ ಜಟಿಲತೆ ಉಂಟು ಮಾಡಿದೆ. 1645 ವಿದ್ಯಾರ್ಥಿಗಳು ಪ್ರವೇಶ ಪಡೆಯಬಹುದಾದರೂ ಕೇವಲ 1550 ವಿದ್ಯಾರ್ಥಿಗಳು ಮಾತ್ರ ಅರ್ಜಿ ಸಲ್ಲಿಸಿದ್ದಾರೆ. ಬೆಂಗಳೂರಿನಲ್ಲಿ ಪ್ರವೇಶಕ್ಕಾಗಿ ಹೆಚ್ಚು ನೂಕುನುಗ್ಗಲು ಉಂಟಾಗಿದೆ. ಪದವಿಪೂರ್ವ ಕಾಲೇಜುಗಳಲ್ಲಿ ವಿಶ್ವವಿದ್ಯಾನಿಲಯದ ಅಧಿಕಾರಿಗಳು ನಿರ್ದಿಷ್ಟ ವಿಷಯಗಳನ್ನು ಪ್ರವೇಶಕ್ಕಾಗಿ ಸೂಚಿಸಿದ್ದಾರೆ. ಭೌತಶಾಸ್ತ್ರ, ರಸಾಯನಶಾಸ್ತ್ರ ಹಾಗೂ ಗಣಿತಶಾಸ್ತ್ರಕ್ಕೂ ಹೆಚ್ಚಿನ ಒತ್ತಡ ಕಂಡುಬರುತ್ತಿದೆ. ಸಾಕಷ್ಟು ವಿದ್ಯಾರ್ಥಿಗಳು ಮುಂದೆ ಬಂದರೆ ಸರಕಾರ ಬೆಳಗಿನ ತರಗತಿಗಳನ್ನು ಪ್ರಾರಂಭಿಸಲು ಸಿದ್ಧವಿದೆ. ತುಮಕೂರಿನಲ್ಲಿ ಪ್ರೌಢಶಾಲೆಯಲ್ಲಿ ವಿಧ್ಯಾರ್ಥಿ ಸಂಖ್ಯೆಯನ್ನು ಹೆಚ್ಚಿಸಲಾಗಿದೆ ಮತ್ತು ಒಂದು ಸಣ್ಣ ಕಟ್ಟಡವನ್ನು ಪಡೆಯಲಾಗುವುದು. ಬೋಧಕರ ಸಂಖ್ಯೆಯನ್ನೂ ಹೆಚ್ಚಿಸಲಾಗುವುದು. ಪ್ರೌಢಶಾಲಾ ಶಿಕ್ಷಣಕ್ಕಾಗಿ ಹಣಕಾಸು ನೀಡಲು ಖಾಸಗಿ ವ್ಯಕ್ತಿಗಳ ಮುಂದೆ ಬರಬೇಕೆಂದು ಅವರು ಬಯಸಿದ್ದರು.

## ಹಿಂದಿ ಭಾಷೆಯನ್ನು ಅಳವಡಿಸುವ ಬಗ್ಗೆ

1941ರ ದಸರಾ ಅಧಿವೇಶನದಲ್ಲಿ ಹಿಂದಿ ಭಾಷೆಯನ್ನು ಅಳವಡಿಸುವ ಕುರಿತಂತೆ ನಡೆದ ಚರ್ಚೆಯಲ್ಲಿ ಶಿಕ್ಷಣ ಮಂತ್ರಿಗಳಾದ ಶ್ರೀ ಜೆ. ಮೊಹಮ್ಮದ್ ಇಮಾಂ ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದರು. ಆಂಗ್ಲಭಾಷೆಯ ಭೋದನೆಗೆ ಬಹಳ ಬೇಡಿಕೆ ಇದೆ. ನಂತರ ನಡೆದ ಚರ್ಚೆಯನ್ನು ಮುಗಿಸುತ್ತಾ ಎಂದು ಹೇಳಿದರು.

ಜೆ. ಇಮಾಂ : ತೀರ್ಮಾನಕ್ಕೆ ಆಧಾರವಾದ ತತ್ವವನ್ನು ಈಗಾಗಲೇ ಸರಕಾರ ಒಪ್ಪಿಕೊಂಡಿದೆ ಮತ್ತು ವಾಸ್ತವವಾಗಿ ಜಾರಿಗೆ ತರಲಾಗಿದೆ. ಬೇಡಿಕೆ ಇದ್ದಾಗ ಹಿಂದಿ ಭಾಷೆಯನ್ನು ಬೋಧಿಸಲು ಸರಕಾರ ಸೌಲಭ್ಯ ಕಲ್ಪಿಸುತ್ತಿದೆ. ಮಾಧ್ಯಮಿಕ ಶಾಲೆಗಳಲ್ಲಿ ಹಿಂದಿ ಭಾಷೆ ಐಚ್ಛಿಕ ಪಠ್ಯವಾಗಿದೆ ಮತ್ತು ಮಾಧ್ಯಮಿಕ ಶಾಲೆ ಹಾಗೂ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪರೀಕ್ಷೆಯ ವಿಷಯವಾಗಿ ಪರಿಗಣಿಸಲ್ಪಟ್ಟಿದೆ. ಸಿಂಧಿಗಳು, ಮಾರವಾಡಿಗಳ ಅನುಕೂಲತೆಗಾಗಿ ಸರಕಾರ ಒಂದು ಹಿಂದಿ ಪ್ರಾಥಮಿಕ ಶಾಲೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದೆ. ಮತ್ತೆ ಮುಂದುವರೆದು ಭಾರತ ಹಲವಾರು ಭಾಷೆ, ಜಾತಿ ಮತ್ತು ಧಾರ್ಮಿಕ ಸಂಸ್ಥೆಗಳನ್ನು ಹೊಂದಿದೆ ಹಾಗೂ ಪ್ರತಿಯೊಬ್ಬರೂ ತಮ್ಮ ಧರ್ಮ, ಪಂಗಡ ಮತ್ತು ಭಾಷೆಗಳನ್ನು ರಕ್ಷಿಸಲು ಆಸಕ್ತಿ ಹೊಂದಿದ್ದಾರೆಂದು ಹೇಳಿದರು. ಮದ್ರಾಸಿನಲ್ಲಿ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಹಿಂದೀ ಭಾಷೆಯನ್ನು ಪ್ರೋತ್ಸಾಹಿಸುವುದು ಕನ್ನಡ ಭಾಷೆಗೆ ತೊಂದರೆ ಮಾಡುವುದೆಂಬುದನ್ನು ಅವರು ನಿರಾಕರಿಸಿದರು. ಈ ವಿಷಯದಲ್ಲಿ ಯಾವುದೇ ಕಡ್ಡಾಯವಿಲ್ಲ. ಹಿಂದಿ ಮತ್ತು ಉರ್ದು ಭಾಷೆಗಳಲ್ಲಿ ಸೌಮ್ಯತೆ ಇದೆಯೆಂದು ಅವರು ಒಪ್ಪಿಕೊಂಡರು. ಉರ್ದು ಭಾಷೆ ಪರ್ಷಿಯನ್ ಭಾಷೆಯ ಮಿಶ್ರಣವಾದರೆ, ಹಿಂದಿ ಭಾಷೆ ಸಂಸ್ಕೃತ ಭಾಷೆಯ ಮಿಶ್ರಣವಾಗಿದೆ. ಒಬ್ಬ ವ್ಯಕ್ತಿ ಒಂದು ಭಾಷೆ ತಿಳಿದಿದ್ದರೆ ಇನ್ನೊಂದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಹಿಂದಿಯನ್ನು ಭಾರತದ

ಮುಖ್ಯಭಾಷೆಯನ್ನಾಗಿ ಪರಿಗಣಿಸಬಹುದು ಇತರ ಭಾಷೆಗಳೆಂದರೆ ಆಂಗ್ಲ ಭಾಷೆ ಹಾಗೂ ಉರ್ದು ವೆಚ್ಚದ ಪರಿಗಣನೆಯಲ್ಲಿ ಪ್ರತಿಯೊಂದು ಶಾಲೆಗೆ ಒಬ್ಬ ಹಿಂದಿ ಶಿಕ್ಷಕರನ್ನು ನೇಮಿಸಿಕೊಳ್ಳುವುದು ಅನವಶ್ಯಕ ಹಾಗೂ ವಿರೋಧಾತ್ಮಕವಾಗಿದೆ. ಮಸೂದೆಯನ್ನು ಮತಕ್ಕೆ ಹಾಕಿ ಮುಂದುವರೆಸಲಾಗುವುದು ಎಂದರು.

## ಸ್ಕೌಟ್ ಸಂಸ್ಥೆಗಳು

ಶಿಕ್ಷಣ ಮಂತ್ರಿಗಳಾದ ಮಾನ್ಯ ಶ್ರೀ ಜೆ. ಮೊಹಮ್ಮದ್ ಇಮಾಂ ಸ್ಕೌಟ್ ಚಳುವಳಿಯನ್ನು ಅಂತ್ಯಗೊಳಿಸಲು ಸರಕಾರಕ್ಕೆ ಉದ್ದೇಶವಿಲ್ಲವೆಂದು ಸ್ಪಷ್ಟಪಡಿಸಿದರು. ಆದರೆ, ಆ ಚಳುವಳಿಯನ್ನು ಶಾಶ್ವತಗೊಳಿಸುವುದೆಂದರೆ ಏನರ್ಥ ಎಂದು ತಿಳಿಯಲು ಅವರು ಅಸಮರ್ಥರಾಗಿದ್ದರು. ಈ ವಿಷಯದಲ್ಲಿ ಜನರು ಹೆಚ್ಚು ಆಸಕ್ತಿ ವಹಿಸಬೇಕೆಂದು ಅವರು ಬಯಸಿದ್ದರು.

## ಮುಸ್ಲಿಂ ವಿದ್ಯಾರ್ಥಿನಿಯರಿಗೆ ಸಾರಿಗೆ ಸೌಲಭ್ಯಗಳು

1942ರ ಅಧಿವೇಶನದಲ್ಲಿ ಶ್ರೀಮತಿ ಅಖಿಲಾ ಬೇಗಂ ಮೊಹಮ್ಮದ್ ಷರೀಫ್ ಮುಸ್ಲಿಂ ವಿದ್ಯಾರ್ಥಿನಿಯರಿಗೆ ಮೋಟಾರು ವಾಹನ ಸೌಲಭ್ಯ ಕಲ್ಪಿಸುವ ಬಗ್ಗೆ ನೀಡಿದ ಹೇಳಿಕೆಗೆ ಪ್ರತಿಯಾಗಿ ಹಲವು ಸದಸ್ಯರು ತಮ್ಮ ಅಭಿಪ್ರಾಯ ತಿಳಿಸಿದರು. ಶಿಕ್ಷಣ ಮಂತ್ರಿಗಳಾದ ಶ್ರೀ ಜೆ. ಮೊಹಮ್ಮದ್ ಇಮಾಂ ಮೋಟಾರು ವಾಹನ ನೀಡುವ ಯೋಜನೆಯನ್ನು ತಿರಸ್ಕರಿಸಿದರು. ಪ್ರಯಾಣ ಕೈಗೊಳ್ಳುವ ವಿದ್ಯಾರ್ಥಿನಿಯರ ಸಂಖ್ಯೆ ಹೆಚ್ಚಾದರೆ ಹೆಚ್ಚುವರಿ ಗಾಡಿಯನ್ನು ನೀಡುವುದಾಗಿ ಹೇಳಿದರು.

ಶ್ರೀ ಮಲ್ಲಯ್ಯನವರು ಹಿಂದು ಹುಡುಗ ಹುಡುಗಿಯರಿಗೆ ರಿಯಾಯ್ತಿ ಕೊಡಬೇಕೆಂದು ಹೇಳಿದ್ದಕ್ಕೆ ಪ್ರತಿಯಾಗಿ ಶಿಕ್ಷಣ ಮಂತ್ರಿಗಳಾದ ಶ್ರೀ ಜೆ. ಮೊಹಮ್ಮದ್ ಇಮಾಂ: ಕೇವಲ ಮುಸ್ಲಿಂರಿಗೆ ಮಾತ್ರ ರಿಯಾಯಿತಿ ನೀಡಲಾಗುತ್ತಿದೆಂಬುದನ್ನು ಅಲ್ಲಗಳೆದರು. ರಜಪೂತ್‌ಗಳು ಅರ್ಧ ಶುಲ್ಕವನ್ನು ನೀಡುತ್ತಿದ್ದಾರೆ ಮತ್ತು ದುಃಖಿತ ವರ್ಗದವರಿಗೆ ಯಾವ ಶುಲ್ಕವನ್ನು ವಿಧಿಸಲಾಗಿಲ್ಲವೆಂದು ಪ್ರೌಢಶಾಲೆಯವರಿಗೆ ಪ್ರತಿಯೊಂದು ವರ್ಗಕ್ಕೂ ಉಚಿತ ಶಿಕ್ಷಣ ನೀಡಲಾಗುತ್ತಿದೆ. ಪ್ರೌಢಶಾಲೆ ಮತ್ತು ಕಾಲೇಜುಗಳಲ್ಲಿ ವಿದ್ಯಾರ್ಥಿನಿಯರು ಅರ್ಧ ಶುಲ್ಕ ನೀಡುತ್ತಿದ್ದಾರೆ ಮತ್ತು ಶೇಕಡ 50 ಹುಡುಗಿಯರು ಶುಲ್ಕ ರಹಿತತೆ ಪಡೆದಿದ್ದಾರೆ. ಹುಡುಗರಲ್ಲಿ ಶೇಕಡ 30 ಶುಲ್ಕ ಪಾವತಿಯಿಂದ ರಿಯಾಯ್ತಿ ಪಡೆದಿದ್ದಾರೆ ಮತ್ತು ಅನೇಕರಿಗೆ ವಿದ್ಯಾರ್ಥಿ ವೇತನ ನೀಡಲಾಗಿದೆ ಈ ವಿಷಯದಲ್ಲಿ ಯಾವುದೇ ತಾರತಮ್ಯವನ್ನು ಅವರು ಅಲ್ಲಗಳೆದರು. ಕೆಲವು ಸಂಪ್ರದಾಯಗಳಿಗಾಗಿ ಕೆಲವು ರಿಯಾಯ್ತಿ ನೀಡಲಾಗಿದೆಯೆಂದರು. ಒಂದು ವೇಳೆ ಮುಸ್ಲಿಮರಿಗೆ ರಿಯಾಯ್ತಿ ನೀಡದಿದ್ದರೆ ಅವರು ಶಿಕ್ಷಣವನ್ನು ಮುಂದುವರೆಸುವುದಿಲ್ಲ. ಆ ಕಾರಣದಿಂದ ಉರ್ದು ಹುಡುಗಿಯರಿಗೆ ರಿಯಾಯ್ತಿ ನೀಡಲಾಗುತ್ತಿದೆ ಎಂದರು.

## ವಸತಿ ಗೃಹಗಳು

1942ರ ಅಕ್ಟೋಬರ್ ಅಧಿವೇಶನದಲ್ಲಿ ಹಿಂದುಳಿದ ವರ್ಗಗಳ ವಸತಿಗೃಹಕ್ಕೆ ಸಂಬಂಧಿಸಿದಂತೆ ಶ್ರೀ ದೇವಯ್ಯ ಮಳವಳ್ಳಿಯಲ್ಲಿ ಒಂದು ವಸತಿಗೃಹ ಬೇಕೆಂದು ಹೇಳಿದರು.

ಇದಕ್ಕೆ ಶ್ರೀ ಜೆ. ಮೊಹಮ್ಮದ್ ಇಮಾಂ 39 ಉಚಿತ ವಸತಿ ಗೃಹಗಳಿವೆಯೆಂದು ಹೇಳಿದರು. ಹುಡುಗರ ಸಂಖ್ಯೆ ಹೆಚ್ಚಿದರೆ ಮತ್ತುಷ್ಟು ಅಧಿಕ ಸಂಖ್ಯೆಯಲ್ಲಿ ವಸತಿಗೃಹ ತೆರೆಯುವುದಾಗಿ ಹೇಳಿದರು.

## ವಿಧ್ಯಾರ್ಥಿಗಳ ತರಗತಿ ಬಹಿಷ್ಕಾರ

ಈ ವಿಷಯಕ್ಕೆ ಸಂಬಂಧಿಸಿದಂತೆ 1942ರ ಅಕ್ಟೋಬರ ಅಧಿವೇಶನದಲ್ಲಿ ನಡೆದ ಚರ್ಚೆಯಲ್ಲಿ ಹಲವು ಸದಸ್ಯರು ತಮ್ಮ ಅಭಿಪ್ರಾಯ ಸೂಚಿಸಿದರು. ಚರ್ಚೆಗೆ ಉತ್ತರಿಸುತ್ತಾ ಮಾನ್ಯ ಶಿಕ್ಷಣ ಮಂತ್ರಿಗಳಾದ ಶ್ರೀ ಜೆ. ಎಂ. ಇಮಾಂ ಹೀಗೆ ಹೇಳಿದರು. ಮಹಾತ್ಮ ಗಾಂಧೀಜಿಯವರಾಗಲೀ ಅಥವಾ ಇನ್ನಾವುದೇ ರಾಷ್ಟ್ರೀಯ ನಾಯಕರು ಹೋರಾಟದಲ್ಲಿ ವಿದ್ಯಾರ್ಥಿಗಳ ಭಾಗವಹಿಸುವಿಕೆಯನ್ನು ಬಯಸಲಿಲ್ಲ. ಶ್ರೀ ರಾಜಗೋಪಾಲಾ ಚಾರಿಯವರು ವಿದ್ಯಾರ್ಥಿಗಳು ಭಾವೀ ಪ್ರಜೆಗಳಾದ್ದರಿಂದ ಅವರನ್ನು ಸರಿಯಾಗಿ ಪೋಷಿಸಬೇಕೆಂದು ಒತ್ತಾಯಿಸುತ್ತಿದ್ದರು. ಶ್ರೀ ಇಮಾಂ, ವಿದ್ಯಾರ್ಥಿಗಳ ಬಗ್ಗೆ ಸರಕಾರಕ್ಕೆ ಇದ್ದ ಕಾಳಜಿಯನ್ನು ವಿವರಿಸಿದರು. ಆದರೆ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಗೆ ಹೋಗುವುದಕನ್ನು ನಿಲ್ಲಿಸಿದ್ದರಿಂದ ಸರಕಾರ ಶಾಲಾ ಕಾಲೇಜುಗಳನ್ನು ಮುಚ್ಚಬೇಕಾಯಿತೆಂದರು. ಕಾಲ ಕ್ರಮೇಣ ಅವುಗಳನ್ನು ಮತ್ತೆ ಆರಂಭಿಸಲಾಯಿತು. ಶ್ರೀ ಇಮಾಂ ಹಿಂದು ಗ್ರಂಥಗಳನ್ನು ಉದಾಹರಿಸುತ್ತಾ ಪ್ರಹ್ಲಾದ ವಿಷ ಸೇವನೆ ಮಾಡಿ, ಬೆಟ್ಟದಿಂದ ಹಾರಿ, ಸಮುದ್ರಕ್ಕೆ ಜಿಗಿಯುವ ಮೂಲಕ ತಂದೆಯ ಆಜ್ಞೆ ಪಾಲಿಸಿದನು ಆದರೆ, ಅಂತಹ ಮಕ್ಕಳು ಈಗ ಕಾಣಸಿಗುವುದಿಲ್ಲ. ವಿದ್ಯಾರ್ಥಿಗಳು ಹಿತೋಪದೇಶ ಕೇಳಲ್ಲ ಹಾಗೂ ಪೋಷಕರು ಅವರನ್ನು ನಿಯಂತ್ರಿಸಲು ಸಾಧ್ಯವಿಲ್ಲ. ವಿದ್ಯಾರ್ಥಿಗಳು ಮುಷ್ಕರಕ್ಕೆ ಕಾರಣಗಳನ್ನೂ ನೀಡುತ್ತಾರೆ. ರೈಲ್ವೆ ನಿಲ್ದಾಣಕ್ಕೆ ಬೆಂಕಿ ಹಚ್ಚುವುದು, ರೈಲುಗಳ ಹಳಿ ತಪ್ಪಿಸುವುದು ವಿದ್ಯುತ್ ತಂತಿ ಕಡಿತ ಗೊಳಿಸುವುದು ಮತ್ತು ಟಿಕೆಟ್ ರಹಿತ ಪ್ರಯಾಣ ಮುಂತಾದವು ನಿಜವಾದ ಅರ್ಥದಲ್ಲಿ ಮುಷ್ಕರಗಳಲ್ಲ. ಮುಷ್ಕರ ನಿರತರು ಇತರ ವಿದ್ಯಾರ್ಥಿಗಳಿಗೆ ತರಗತಿಗೆ ಹೋಗುವ ಹಕ್ಕು ಇದೆಯೆಂಬುದನ್ನು ಅರಿತುಕೊಳ್ಳಬೇಕು. ರಾಷ್ಟ್ರಧ್ವಜಕ್ಕೆ ಗೌರವ ತೋರುವುದಕ್ಕೂ ವಿದ್ಯಾರ್ಥಿಗಳು ವಿಫಲರಾಗಿದ್ದಾರೆ. ಅಂತಹ ಸಂದರ್ಭದಲ್ಲೂ ಸುತ್ತೋಲೆಯಲ್ಲಿ 20 ನೇ ಸೆಪ್ಟಂಬರ್ ಹೊತ್ತಿಗೆ ಹಾಜರಾಗದಿದ್ದ ವಿದ್ಯಾರ್ಥಿಗಳ ವಿರುದ್ದ ಕ್ರಮ ಕೈಗೊಳ್ಳುತ್ತದೆಂದು ಪ್ರಕಟಿಸಿದ್ದರೂ ಸರಕಾರ ಯಾವುದೇ ಕ್ರಮಕೈಗೊಳ್ಳಲಿಲ್ಲ. ಶೇಕಡ 75 ಹುಡುಗರು ಕಾಣಬಹುದಿತ್ತು. ಮೆಡಿಕಲ್ ಕಾಲೇಜಿನ ಕೆಲವು ವಿದ್ಯಾರ್ಥಿಗಳನ್ನು ಮತ್ತು ಶಾಲೆಗಳ ವಿದ್ಯಾರ್ಥಿಗಳನ್ನು ಬಿಡುಗಡೆ ಮಾಡಲಾಗಿತ್ತು ಹಾಗೆಯೇ ದಸರಾ ರಜೆ ಮುಗಿಯುತ್ತಿದ್ದಂತೆ ಕಾಲೇಜುಗಳು ಪುನರಾರಂಭಗೊಳ್ಳುತ್ತದೆಂದು ಅವರು ಭಾವಿಸಿದರು. ತಿಪಟೂರು ಹಾಗೂ ಇತರ ರೈಲ್ವೆ ನಿಲ್ದಾಣಗಳ ಸುಡುವಿಕೆಯಿಂದ 8 ರಿಂದ 10 ಲಕ್ಷ ರೂಪಾಯಿಗಳಷ್ಟು ನಷ್ಟವುಂಟಾಯಿತು. ಶಿಕ್ಷಣದ ವಿರುದ್ಧ ಆರೋಪಗಳನ್ನು ಪರಿಶೀಲಿಸಲಾಗುವುದೆಂದರು. ಈ ವಿಷಯದಲ್ಲಿ ಸಹಾಯ ಮಾಡುವಂತೆ ಅಧಿಕಾರೇತರ ವರ್ಗದವರನ್ನು ಅವರು ಕೇಳಿ ಕೊಂಡರು.

## ನೀರಾವರಿ

1941ರ ರಾಷ್ಟ್ರಪತಿ ಭಾಷಣದಲ್ಲಿ ನೀರಾವರಿಗೆ ನೀಡಿದ ಸಹಾಯಧನದ ಬಗ್ಗೆ ಅವರು ವಿವರಿಸಿದರು. ನಂತರ ನಡೆದ ಮಾತುಕತೆಯಲ್ಲಿ ಶ್ರೀ ಜೆ. ಮೊಹಮ್ಮದ್ ಇಮಾಂ, ಪೂರಕ ಚಾನಲ್‌ಗಳಲ್ಲಿ ಮಣ್ಣಿನ ಅಡ್ಡಕಟ್ಟೆಗಳನ್ನು ನಿರ್ಮಿಸಿ ನೀರು ಹರಿಯುವಿಕೆಯನ್ನು ರೈತರು ತಡೆಯುತ್ತಿದ್ದಾರೆಂದು ಆರೋಪಿಸಿದರು. ಕಂದಾಯವನ್ನು ವಿಧಿಸುವ ಸಲಹೆಯನ್ನು ಪರಿಗಣಿಸಲಾಗುವುದೆಂದು ಹೇಳಿದರು.

1943ರ ಅಕ್ಟೋಬರ್‌ನಲ್ಲಿ ಶ್ರೀ ಎಸ್.ಸಿ. ಮಲ್ಲಯ್ಯ, ಶಿಂಷಾ ಚಾನೆಲ್ಲನ್ನು ವಿಸ್ತರಿಸುವ ಅಭಿಲಾಷೆ ವ್ಯಕ್ತಪಡಿಸಿದಾಗ, ಶ್ರೀ ಜೆ.ಎಂ. ಇಮಾಂ ಅವರು ಅಂದಾಜು ವೆಚ್ಚವನ್ನು ತಯಾರಿಸಲಾಗಿದೆ ಮತ್ತು ಕಾರ್ಯವನ್ನು ಕೈಗೊಳ್ಳುವುದಾಗಿ ಹೇಳಿದರು.

1945ರ ಜೂನ್‌ನಲ್ಲಿ ಶ್ರೀ ಎನ್. ಜಿ. ನರಸಿಂಹೇಗೌಡರು ಬಜೆಟ್ ತೀರ್ಮಾನವನ್ನು ಪ್ರಸ್ತಾಪಿಸಿ, ಸಣ್ಣ ಬ್ಯಾಂಕುಗಳ ನವೀಕರಣಕ್ಕೆ 1 ಕೋಟಿ ರೂಪಾಯಿ ಸರಕಾರ ನೀಡಬೇಕೆಂದು ಕೇಳಿದರು ನಂತರ ನಡೆದ ಮಾತುಕತೆಯಲ್ಲಿ ಸಾರ್ವಜನಿಕ ಕಾಮಗಾರಿ ಮಂತ್ರಿಗಳಾದ ಜೆ.ಎಂ. ಇಮಾಂ, ತೀರ್ಮಾನದ ತತ್ವಗಳನ್ನು ಒಪ್ಪಿಕೊಂಡರು ಆದರೆ 1 ಕೋಟಿ ರೂಪಾಯಿಗಳ ಬೇಡಿಕೆಯನ್ನು ತಿರಸ್ಕರಿಸಿದರು.

ಮುದ್ರಕರು : ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ, ಬೆಂಗಳೂರು-1. ಶಾ.ಸೂ. 1954